## ಮೊದಲ ಮಾತು

ವಿಸ್ಲರ್ ಮತ್ತು ಆಸ್ಕಾರ್ ವೈಲ್ಡ್ ಸುಪ್ರಸಿದ್ಧ ವಿದ್ವಾಂಸರು. ಚತುರ ಮಾತುಗಾರರು. ಆಸ್ಕಾರ್ ವೈಲ್ಡ್ ತನ್ನ ತಾರುಣ್ಯದಲ್ಲಿ ವಿಸ್ಲರ್‌ನ ಜೊತೆಯಲ್ಲಿ ಬಹು ಕಾಲ ಕಳೆಯುತ್ತಿದ್ದ.

ವಿಸ್ಲರ್ ವಿದ್ವಾಂಸ, ಮಾತುಗಾರ ಆಗಿದ್ದಂತೆ ಚಿತ್ರಗಾರನೂ ಆಗಿದ್ದ.

ಇಬ್ಬರೂ ಚಿತ್ರಗಳನ್ನು ನೋಡುತ್ತಿದ್ದರು.

ಆಸ್ಕಾರ್ "ಇದು ಶೀಲ. ಇದು ಅಶ್ಲೀಲ. ಇದು ಸರಿ. ಇದು ಸರಿಯಲ್ಲ." ಎಂದೆಲ್ಲಾ ಹೇಳುತ್ತಾ ಬಂದ.

ಆ ಮಾತುಗಳನ್ನೆಲ್ಲಾ ಕೇಳಿ ವಿಸ್ಲರ್‌ಗೇ ಬೇಜಾರಾಗಿರಬೇಕು. ಅವನು ಹೇಳಿದ.

"ಆಸ್ಕಾರ್! ಹಾಗೆಲ್ಲಾ ಮಾತನಾಡಬೇಡ. ಶೀಲ-ಅಶ್ಲೀಲ, ಸರಿ-ಸರಿಯಲ್ಲದ್ದು, ಇಲ್ಲ. ನಿನಗೆ ಪ್ರಿಯವಾದದ್ದು ಅಪ್ರಿಯವಾದದ್ದು ಎಂಬುದೆರಡೇ ಇರುವುದು."

ಆಸ್ಕಾರ್‌ಗಿಂತ, ಆತನ ವಿಮರ್ಶೆಗಿಂತ ಆ ಚಿತ್ರಗಳು ದೊಡ್ಡವು ಎಂಬುದು ವಿಸ್ಲರನ ಅಭಿಪ್ರಾಯವಾಗಿದ್ದಿತೋ, ಏನೋ?

ವಿಸ್ಲರ್ ಹೇಳಿದ ಮಾತನ್ನೇ ಮುಂದೆ ಆಸ್ಕಾರ್ ಸಂದರ್ಭಕ್ಕೆ ತಕ್ಕ ಹಾಗೆ ಬದಲಾಯಿಸಿಕೊಂಡು, ಹೊಸ ರೂಪ ಕೊಟ್ಟು ಉಪಯೋಗಿಸಿಕೊಂಡ.

ಆಗ ಈ ಅರ್ಥದಲ್ಲಿ ಆಸ್ಕಾರ್ ಬರೆದ.

"ಪುಸ್ತಕಗಳಲ್ಲಿ ಶೀಲ-ಅಶ್ಲೀಲ ಎಂಬುದು ಇಲ್ಲ. ಸಪ್ಪೆಯಾಗಿವೆ ರುಚಿಯಾಗಿವೆ, ಅಷ್ಟೇ."

ನನ್ನ ಅಭಿಪ್ರಾಯವೂ ಅಷ್ಟೆ.

ನಾನು ಅವರುಗಳಷ್ಟು ವಿದ್ವಾಂಸನೂ ಅಲ್ಲ. ಚಿತ್ರಕಾರನೂ ಅಲ್ಲ. ಅಷ್ಟು ಚತುರ ಮಾತುಗಾರನಂತೂ ಅಲ್ಲವೇ ಅಲ್ಲ.

ಅವರು ಹೇಳಿರುವುದಕ್ಕಿಂತ ಸಮರ್ಪಕವಾಗಿ ನಾನೇನು ತಾನೇ ಹೇಳಬಲ್ಲೆ ?

ಪುಸ್ತಕ ಮಂದಿರ,

ಬೆಂಗಳೂರು. ಡಿ. ಕಾಮೇಶ್,

## ೧

ವಾಸುದೇವ ಶಂಕರನ ಮುಖವನ್ನು ನೋಡಿ ನಕ್ಕ.

"ಯಾಕೆ, ನಗುತ್ತೀರಿ ವಾಸುದೇವರಾವ್?"

"ನೆನೆಸಿಕೊಂಡರೆ ಈಗಲೂ ನಗು ಬರುತ್ತದೆ."

ನೆನೆಸಿಕೊಂಡರೆ ನಗು ಬರುವಂತಹ ಆ ವಿಷಯವು ಅಷ್ಟೇನೂ ಮಹತ್ತರವಾದುದಾಗಿರಲಿಲ್ಲ.

ಕೆಲವು ಮಂದಿ ಮಂಗಳೂರಿನವರು ಕಡೂರಿನಲ್ಲಿ ಗಾಡೀ ಹತ್ತಿದ್ದರು. ರೈಲಿನಲ್ಲಿ ಸ್ಥಳ ಸಂಕೋಚವಾಗಿತ್ತು. ಹತ್ತಿದವರಲ್ಲಿ ಒಬ್ಬ ಹುಡುಗಿ–ಹುಡುಗಿಯೇನು ಯುವತಿಯೇ ಎನ್ನಬಹುದು–ಕುಳಿತುಕೊಂಡೇ ನಿದ್ದೆ ಮಾಡತೊಡಗಿದಳು. ನಿದ್ರಿತಳಾಗಿದ್ದ ಅವಳ ಶಿರೋಭಾಗವು ಬಾಗಿತ್ತು. ಅಲ್ಲಾಡುತ್ತಿದ್ದ ರೈಲಿನಲ್ಲಿ ಕುಳಿತಿದ್ದುದರಿಂದ ತಲೆ ಮೇಲೆ ಕೆಳಗೆ ಆಡುತ್ತಿತ್ತು. ಆಗಾಗ ಅದು ಶಂಕರನ ತೊಡೆಗಳಿಗೆ ತಗುಲುತ್ತಿತ್ತು.

ಹಾಗೆ ಸ್ತ್ರೀ ದೇಹಸ್ಪರ್ಶವಾಗುತ್ತಿದ್ದುದರಿಂದ ಶಂಕರ ಹರ್ಷಿತನಾಗಿದ್ದನೇ ಇಲ್ಲವೇ ಎಂದು ಹೇಳಲಾಗುವುದಿಲ್ಲ. ಆ ಸ್ಪರ್ಶವನ್ನು ತಡೆಯಲು ಕಾರಣವೇನೂ ಕಂಡುಬರುತ್ತಿರಲಿಲ್ಲ. ಆದರೆ ಸಂಕೋಚವಿರಲಿಲ್ಲ ಎಂದು ಹೇಳಲಾಗುವುದಿಲ್ಲ.

ಮೊದಲು ಯಾರಾದರೂ ನೋಡುತ್ತಾರೆಯೇನೋ, ನೋಡಿ ಏನಾ

ದರೂ ಅಂದುಕೊಳ್ಳುತ್ತಾರೆ ಏನೋ ಎಂದೆನಿಸಿತು. ಅರ್ಧ ರಾತ್ರಿಯಲ್ಲಿ ಸುತ್ತಲೂ ನೋಡಿದ. ಎಲ್ಲರೂ ಅನ್ಯಾಸಕ್ತರಾಗಿದ್ದಾರೆ. ಸುಖವಾಗಿ ನಿದ್ದೆ ಮಾಡಲು ಅವಕಾಶವಿಲ್ಲದಿದ್ದರೂ ನಿದ್ರಾಸಕ್ತರಾಗಿದ್ದಾರೆ. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಅವನೂ ಕಣ್ಣು ಮುಚ್ಚಿದ್ದ. ಅವನ ತಲೆಯೂ ಮೇಲೆ ಕೆಳಗೆ ಆಡುತ್ತಿದ್ದಿತು.

ಆಡುತ್ತಿದ್ದ ತಲೆಗಳು ಆಗಾಗ ಪರಸ್ಪರ ತಗುಲುತ್ತಿದ್ದವು. ಅಂದರೆ ಢಿಕ್ಕಿ ಹೊಡೆಯುತ್ತಿದ್ದವು. ಢಿಕ್ಕಿ ಹೊಡೆದಾಗ ಅವರು ಎಚ್ಚೆತ್ತ ಹಾಗೆ ಹಿಂದೆ ಸರಿಯುತ್ತಿದ್ದರು. ಯಥಾಪ್ರಕಾರ ಮೊದಲಿನಂತೆಯೇ!

ಎಲ್ಲಾ ನಿದ್ದೆಯಲ್ಲಿ, ಸ್ವಪ್ನವೂ ಅಲ್ಲದಂತಹ ಗಾಢ ನಿದ್ದೆಯಲ್ಲಿ.

ವಾಸುದೇವ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿ ಹೇಳಿದ.

"ಅವಳು ನಿಮ್ಮ ತೊಡೆಯ ಮೇಲೆ ತಲೆಯಿಟ್ಟು ಮಲಗಿಬಿಟ್ಟಿದ್ದಳು. ನಿಮ್ಮ ತಲೆ ಮೇಲೆ ಕೆಳಗೆ ಆಡುತ್ತಿದ್ದಿತು. ಮೂರು, ನಾಲ್ಕು ಬಾರಿ ಅವಳ ಕೆನ್ನೆಗಳಿಗೆ ನಿಮ್ಮ ತುಟಿಗಳು ತಗುಲಿದುವು. ಭೇಷ್! ಒಳ್ಳೇ ಗಟ್ಟಿಗ–ಎಂದುಕೊಂಡೆ."

"ಇಲ್ಲರಿ, ದೇವರಾಣೆಗೂ ಇಲ್ಲ. ಅದೊಂದೂ ನನಗೆ ಗೊತ್ತೇ ಇಲ್ಲ. ನೀವು ಹುಟ್ಟಿಸಿಕೊಂಡು ಹೇಳುತ್ತಿದ್ದೀರೋ ಏನೋ?"

"ಅಯ್ಯಯ್ಯೋ! ಇದಕ್ಕೆಲ್ಲಾ ದೇವರನ್ನು ಕರೆಯಬೇಡಿ. ಅನಾಯಾಸವಾಗಿ ದೇವರು ಸಹಾಯ ಮಾಡುತ್ತಿರುವಾಗ ಅವನಾಣೆ ಇಡಬಾರದು."

"ಮಹಾ ಸಹಾಯ— —?"

"ಅದನ್ನೇ ಕೃತಘ್ನತೆ ಎನ್ನುವುದು. ಅಂಥಾ ಹುಡುಗಿಯ ಕೆನ್ನೆಗಳಿಗೆ ನಿಮ್ಮ ತುಟಿಗಳನ್ನು ತಗುಲಿಸಿದರೆ ಅದು ಸಹಾಯವಲ್ಲವೆ? ತೆಲುಗಿನಲ್ಲಿ "ಕೊಂಗು ತಗುಲಿತೇ ಕೋಟಿ ಪುಣ್ಯಾಲು" ಎಂದು ಹೇಳುತ್ತಾರೆ."

"ನನಗೆ ಅದೊಂದೂ ಗೊತ್ತಿಲ್ಲ."

"ಗೊತ್ತಿದ್ದೂ ಗೊತ್ತಿಲ್ಲದವರಂತೆ ಮಾಡುತ್ತಿದ್ದೀರೇನೋ ಎಂದೇ ನಾನು ಕೇಳುತ್ತಿರುವುದು."

ಹೇಗೆ ಹೇಗೆ ತಿರುಗಿದರೂ ಹಿಡಿಯುತ್ತಿರುವ ಆ ಹೊಸ ಸ್ನೇಹಿತನ ಪಟ್ಟಿನಿಂದ ತಪ್ಪಿಸಿಕೊಳ್ಳಲು ಶಂಕರ ಹೇಳಿದ.

"ಗೊತ್ತಿದ್ದೇ ಮಾಡುತ್ತಿದ್ದೆ ಎಂದುಕೊಳ್ಳೋಣ. ನಿದ್ದೆ ಮಾಡುತ್ತಿರುವ ಹೆಂಗಸನ್ನು ಮುತ್ತಿಟ್ಟುಬಿಟ್ಟರೆ ಏನು ಮಹಾ ಭಾಗ್ಯ."

"ಹಾ, ಸ್ವಲ್ಪ ತಡೆಯಿರಿ. ಏಷ್ಟಾದರೆ ಅಷ್ಟೇ ಲಭ್ಯ?"

"ಲಭ್ಯವೇನು ಬಂದಿತು ಲಭ್ಯ— —?"

"ಲಭ್ಯವಲ್ಲದೇ ಏನು? ಒಂದು ವಿಷಯ ಹೇಳುತ್ತೇನೆ, ಕೇಳಿ. ನಾನು ಬೆಂಗಳೂರು ವಿಕ್ಟೋರಿಯಾ ಆಸ್ಪತ್ರೆಯ ಇನ್‌ಪೇಷಂಟಾಗಿದ್ದೆ. ನನ್ನ ಪಕ್ಕದ ಬೆಡ್‌ನಲ್ಲಿ ತಮಿಳು ದೇಶದ ವೈದಿಕ ಬ್ರಾಹ್ಮಣನೂ ಇದ್ದ. ನಮ್ಮನ್ನು ನೋಡಿಕೊಳ್ಳಲು ಆ ವಾರ್ಡಿಗೆ ಒಬ್ಬ ನರ್ಸ್ ಬರುತ್ತಿದ್ದಳು. ಮಿಸ್ ಎಡ್ವಿನ್ ಅಂತ. ಕೈ ತೊಳೆದು ಮುಟ್ಟಬೇಕು ಹಾಗಿದ್ದಳು. ಹುಡುಗಿ. ಬಿಳಿಯ ಪದರ ಪದರದ ಸೀರೆಯುಟ್ಟು, ದಂತದ ವೈ ಬಣ್ಣದ, ಆ ಮುದ್ದು ಮುಖದ ಹುಡುಗಿ ಬಂದರೆ ರಾಜಹಂಸಿ ಅಲ್ಲ, ಅಲ್ಲ ಸ್ವರ್ಗಲೋಕದ ಅಪ್ಸರೆ ಬಂದ ಹಾಗಾಗುತ್ತಿತ್ತು. ಬಂದರೆ ಸರಿ. ವಾರ್ಡಿನಲ್ಲಿರುವ ಹುಡುಗರು ಮುದುಕರು ಎಲ್ಲರ ಕಣ್ಣುಗಳೂ "ಗುಡ್ ಮಾರ್ನಿಂಗ್-ಗುಡ್ ಮಾರ್ನಿಂಗ್" ಎಂದು ಕೊಂಡು ಬರುತ್ತಿದ್ದ ಆ ಕಲಕಂಠಿಯ ಮೇಲೆಯೇ.

"ಎಲ್ಲರ ಬಳಿಗೂ ಹೋಗುತ್ತಿದ್ದಂತೆ ಎಡ್ವಿನ್ ಆ ಬ್ರಾಹ್ಮಣನ ಬಳಿಗೂ ಬಂದಳು. ಅವನು ಎದ್ದು ಹಾಸಿಗೆಯ ಮೇಲೆ ಕುಳಿತು, ಎರಡು ಕೈಗಳಿಂದಲೂ ಅವಳ ಬಲಗೈ ತೆಗೆದುಕೊಂಡು, ಎರಡು ಬಾರಿ ಮುತ್ತಿಡುತ್ತಿದ್ದ. ಕೈ ಬಿಟ್ಟ ನಂತರ ಎಲ್ಲಾ ಮಾಮೂಲು.

"ಮೂರು ನಾಲ್ಕು ದಿನಗಳು ಹೀಗೆಯೇ ನಡೆಯಿತು. ಆಮೇಲೆ ಒಂದು ದಿನ ಅವಳು "ಇದೇನು, ನೀವು ಕೈ ತೆಗೆದುಕೊಂಡು ಮುತ್ತಿಡುತ್ತೀರಿ" ಎಂದು ಕೇಳಿದಳು. ಬ್ರಾಹ್ಮಣ ತಡಬಡಾಯಿಸದೇ "ನಿಮ್ಮ ಜಾತಿಯಲ್ಲಿ ಬೆಳಗಾಗ ನೋಡುತ್ತಲೇ ಗುಡ್ ಮಾರ್ನಿಂಗ್ ಎನ್ನುವುದಿಲ್ಲವೇ? ಹಾಗೆ ನಮ್ಮ ಜಾತಿಯಲ್ಲಿ ಬೆಳಗಾಗ ನೋಡುತ್ತಲೇ ಕೈ ತೆಗೆದುಕೊಂಡು ಮುತ್ತಿಡುವುದು" ಎಂದ. ಹೋಗುವುದರಲ್ಲಿದ್ದವಳು ನಿಂತು "ನಿಮ್ಮದಾವ ಜಾತಿ" ಎಂದಳು. "ನಾನು ಬ್ರಾಹ್ಮಣ" ಎಂದನವನು. ಅವಳು ನನ್ನ ಕಡೆಗೆ ಕೈ ಬೆರಳು ಮಾಡಿ ತೋರಿಸಿ, "ಅವರೂ ಬ್ರಾಹ್ಮಣರು. ಅವರೇಕೆ ನಿಮ್ಮ ಹಾಗೆ ಮಾಡುವುದಿಲ್ಲ?" ಎಂದಳು. ಅಲ್ಲಿಗೂ ಆ ಘಾಟೀ ಬ್ರಾಹ್ಮಣ ಬಗ್ಗಲಿಲ್ಲ.

"ನಿಮ್ಮದಾವ ಗೋತ್ರಾರಿ?" ಎಂದು ನನ್ನನ್ನು ಕೇಳಿದ. ನಾನು "ವಾಸಿಷ್ಟ" ಗೋತ್ರವೆಂದೆ. "ಆಹಾ! ನೋಡಿದಿರಾ? ಅವರದು ವಾಸಿಷ್ಠ ಗೋತ್ರ. ನನ್ನದು ಕೌಂಡಿನ್ಯ ಗೋತ್ರ. ಅವರಲ್ಲಿ ಈ ಪದ್ಧತಿ ಇಲ್ಲ" ಎಂದುತ್ತರ ಕೊಟ್ಟ.

"ಎಡ್ವಿ ಅವನ ಮಾತು ನಂಬಿದಳೋ ಇಲ್ಲವೊ ಹೇಳಲಾಗುವುದಿಲ್ಲ. ಅಂತೂ ಹೊರಟುಹೋದಳು. ನಗುತ್ತಾ ಹೊರಟುಹೋದಳು.

"ನಾನು "ಇದೇನು ಶಾಸ್ತ್ರಿಗಳೇ ಹಾಗೆ ಅವಳ ಕೈಯನ್ನು ತೆಗೆದು ಮುತ್ತಿಟ್ಟುದರಿಂದ ಲಾಭವೇನು?" ಎಂದೆ. ಆ ಶಾಸ್ತ್ರಿ ಸೀರಿಯಸ್ ಆಗಿ "ಚೆನ್ನಾಯಿತು, ಚೆನ್ನಾಯಿತು. ಕೈಯ್ಯಲ್ಲದೇ ಮುಖವನ್ನು ಮುತ್ತಿಡಲಾಗುತ್ತದೇನ್ರಿ. ಎಷ್ಟು ಲಭ್ಯವೋ ಅಷ್ಟೇ" ಎಂದ. ಹಾಗೆ, ಮಿ|| ಶಂಕರ್. ಕೆಲವಂ ಬಲ್ಲವರಿಂದ ಕಲ್ತು..................."

"ಆದರೂ ಸಂಸಾರೀ ಹೆಂಗಸರ ವಿಷಯವಾಗಿ ಹಾಗೆಲ್ಲಾ..........."

ವಾಸುದೇವ ಹೊಡೆಯುವಂತೆ ಕೇಳಿದ.

"ಯಾರು ಸಂಸಾರಿಗಳು........?"

"ಹಾಗಾದರೆ ಅವಳು ಸಂಸಾರಿಯಲ್ಲವೇ?"

"ನಿಮಗೊಂದು ಹುಚ್ಚು."

ಶಂಕರನ ತುಟಿಗಳು ಸಂಶಯಗ್ರಸ್ತ ಸಂಸಾರಿಯ ಕೆನ್ನೆಗೆ ಮೂರು ನಾಲ್ಕು ಬಾರಿ ತಗುಲಿದ್ದುವಷ್ಟೆ. ಆಗ ಅವನಿಗೆ ಎಚ್ಚರವಿದ್ದು ಸುಖಾನುಭವ ಮಾಡಿದ್ದನೋ ಇಲ್ಲವೋ. ಈಗಂತೂ ಆ ಸುಖಾನುಭವ ಮಾಡತೊಡಗಿದ. ಅವಳ ಮುಖ, ರೈಲಿನಲ್ಲಿ ಗಾಳಿಗೆ ಹಾರುತ್ತಿರುವ ಮುಂಗೂದಲು. ಮೃದುವಾದ ತುಟಿಗಳು. ತನ್ನ ತುಟಿಗಳು ತಗುಲಿರಬಹುದಾದ ಆ ಕೆನ್ನೆಗಳು. ಅಗಲವಾದ ಆ ಹಾಲುಗೆನ್ನೆಗಳು. ಅವೆಷ್ಟು ನಯವಾಗಿದ್ದಿರಬೇಕು.

ಆಸಕ್ತಿಯಿಂದ ಗೆಳೆಯನನ್ನು ಕೇಳಿದ.

"ಹಾಗಾದರೆ..................."

"ಅಲ್ಲ. ಅವಳು ಇದುವರೆವಿಗೆ ನೀವು ಹೇಳಿದಂತೆ ಪರಿಶುದ್ಧಳೇ ಆಗಿರ

ಬಹುದು. ಇನ್ನು ಎರಡು ದಿನಗಳಲ್ಲಿ ದುಡ್ಡು ಕೊಟ್ಟವರಿಗೆ ದೇಹ ಮಾರಿಕೊಳ್ಳುತ್ತಾಳೆ."

ಶಂಕರನಿಗೆ ವಿಸ್ಮಯವಾಯಿತು. ಗೆಳೆಯನ ಮುಖವನ್ನು ದುರುಗುಟ್ಟಿಕೊಂಡು ನೋಡಿದ.

"ಅದು ಹೇಗೆ ಹೇಳುತ್ತೀರಿ?"'

"ಹೇಗೆ ಹೇಳುವುದೇನು? ಚೆನ್ನಾಗಿ ಕಾಣುತ್ತಿದೆಯಲ್ಲಾ, ಚಿನ್ನದ ಸರ ಹಾಕಿಕೊಂಡು ಕುಳಿತಿದ್ದಾನಲ್ಲಾ, ಅವನು ತಲೆಹಿಡುಕ. ಅವನೇ ಈ ಹುಡುಗಿಯನ್ನು ಬೊಂಬಾಯಿಗೆ ಕರೆದುಕೊಂಡು ಹೋಗುತ್ತಿರುವುದು."

ಚಿನ್ನದ ಸರ ಹಾಕಿಕೊಂಡಿದ್ದ ಮನುಷ್ಯನನ್ನು ಶಂಕರ ನೆನೆಸಿಕೊಂಡ. ಅವನು ಪಂಪ್ ಷೂ ಹಾಕಿಕೊಂಡು, ಫಿನ್ಲೇಪಂಚೆಯುಟ್ಟು, ಮೈ ಕಾಣಿಸುವ ಮಲ್ ಷರಟು ಹಾಕಿಕೊಂಡಿದ್ದ. ಅದರೊಳಗೆ ಬಿಳಿಯ ನೆಟ್ ಬನಿಯನ್ನೂ, ಅದರ ಮೇಲೊಂದು ಒಂದೆಳೆಯ ತೆಳುವಾದ ಚಿನ್ನದ ಸರವೂ ಕಂಡುಬರುತ್ತಿದ್ದುವು. ಮಲ್ ಷರ್ಟಿನ ಜೇಬಿನಲ್ಲಿ ಗೋಲ್ಡ್ ಫ್ಲೇಕ್ ಸಿಗರೇಟ್ ಪ್ಯಾಕ್, ಬೆಂಕಿಪಟ್ಟಣಗಳು ಕಾಣುತ್ತಿದ್ದವು.

ಮುಂದಿನ ಸೀಟಿನಲ್ಲಿ ಜನ ಕುಳಿತಿದ್ದರೂ ಅವನು ಸ್ಥಳ ಮಾಡಿಕೊಂಡು ಕಾಲಿಟ್ಟಿದ್ದ. ಅರ್ಧ ಮಲಗಿದಂತೆ ಒರಗಿಕೊಂಡು ಮತ್ತೊಂದು ಸೀಟಿನ ಮೇಲೆ ಕುಳಿತಿದ್ದ. ಸ್ವರ್ಣಾಲಂಕಾರ ಭೂಷಿತೆಯಾದ ಹೆಂಗಸು ಅವನ ತೊಡೆಗಳ ಮೇಲೆ ತಲೆಯಿಟ್ಟು, ಕಾಲುಗಳನ್ನು ಮಡಚಿ ಮಲಗಿಕೊಂಡು ಕನ್ನಡ ಕಾದಂಬರಿ ಓದುತ್ತಿದ್ದಳು. ಅದರ ಹಿಂದೆ ಬರೆದವನ ಹೆಸರಿಲ್ಲದಿದ್ದರೂ ಅದು ವಾಸುದೇವರಾವ್ ಬರೆದಿದ್ದ ಕಾದಂಬರಿ ಎಂದು ಸಾಹಿತ್ಯಾಭಿಮಾನಿಯಾದ ಶಂಕರನು ತಿಳಿದಿದ್ದ. ಹಾಗೆಯೇ ಅವಳಿಗೆ ನಿದ್ದೆ ಬಂದಿತ್ತು.

ಕರೀ ಹುಡುಗಿ ಆ ಗಂಡಸಿನ ಇತ್ತಕಡೆ, ಪಕ್ಕದಲ್ಲಿ ಮೂಲೆಯಲ್ಲಿ ಕಡೆಯ ಸೀಟಿನಲ್ಲಿ ಕುಳಿತಿದ್ದಳು.

ಕೇಳಿದ ಕೂಡಲೇ ಶಂಕರನಿಗೆ ನಂಬಿಕೆ ಬರಲಿಲ್ಲ.

"ಅವನು ಬೊಂಬಾಯಿನಲ್ಲಿ ಹೋಟಲಿಟ್ಟಿರುವುದಾಗಿ ಹೇಳಿದನಲ್ಲಾ."

"ಬೊಂಬಾಯಿನಲ್ಲಿ ಹೋಟಲಿಡುವುದು ಎಂದರೆ ಸಾಮಾನ್ಯವೆಂದು ಕೊಂಡಿದ್ದೀರಾ, ಶಂಕರ್. ಎಲ್ಲಾ ಬೊಗಳೇ, ಅವರು ಹೇಳುವುದೇ

ಹಾಗೆ. ಆ ಬಿಳಿಯ ಹುಡುಗಿ ಇದ್ದಾಳೆಯಲ್ಲಾ ಅವಳಾಗಲೇ ವ್ಯಾಪಾರ ದಲ್ಲಿ ಬಿದ್ದು ಸಂಪಾದಿಸಿಕೊಂಡಿದ್ದಾಳೆ. ಈ ಕರಿಯ ಹುಡುಗಿ, ನೀನು ಮುತ್ತಿಟ್ಟ ಹುಡುಗಿ ಅವಳನ್ನು ಈಗ ತಾನೇ ಕರೆದುಕೊಂಡು ಹೋಗು ತ್ತಿದ್ದಾನೆ."

"ಒಂಟೆಯುವರೂ ಮತ್ತು ಫಕೀರನ ಕತೆ ಜ್ಞಾಪಕಕ್ಕೆ ಬರುತ್ತದೆ. ಫಕೀರ ಒಂಟೆಗಳನ್ನು ನೋಡದಿದ್ದರೂ ಅವು ಹೀಗೆಯೇ ಇದ್ದುವು. ಇತ್ತ ಕಡೆಯೇ ಹೋದುವು ಎಂದ ಹಾಗೆ ಹೇಳುತ್ತಿದ್ದೀರಲ್ಲಾ."

"ಅದರಲ್ಲಿ ಬುದ್ಧಿಶಕ್ತಿಯೇನೂ ಇಲ್ಲ. ಆ ಬಿಳಿಯ ಹುಡುಗಿಯ ಚಾಲೋಕು ನೋಡಿ. ಅದು ಬಾಲೆಯರಲ್ಲಿ ಕಂಡುಬರುವ ಮುಗ್ಧತೆಯಲ್ಲ. ನುರಿತ ಹೆಂಗಸರಿಗಿರುವ ವಯ್ಯಾರ. ಅವಳ ವಜ್ರದೋಲೆಗಳು, ಕೊರಳಿ ನಲ್ಲಿರುವ ಚಿನ್ನದ ಹಾರಗಳು, ಕೈನಲ್ಲಿರುವ ಬಳೆಗಳನ್ನು ನೋಡಿ. ಚೆನ್ನಾಗಿ ಹಣ ಮಾಡಿರುವುದು ಕಂಡುಬರುತ್ತದೆ. ಕರಿಯ ಹುಡುಗಿ ನನ್ನ ಹಾಗಿರು ವುದು ಕಂಡುಬರುವುದಿಲ್ಲವೇ ? ಅವಳ ಚೀಟೀ ಸೀರೆಯನ್ನು ನೋಡಿ. ಆ ನಿರಾಭರಣ ಸುಂದರಿ ಬಿಚ್ಚಾಲಿ ಗೌರಮ್ಮ ಇದ್ದ ಹಾಗೆ ಇದ್ದಾಳಲ್ಲ"

"ಅಂತಹವರು ಸಂಪಾದನೆ ಮಾಡಲಾಗುವುದೆ ?"

ಶಂಕರ ಅನುಭವವಿಲ್ಲದ ಹಸುಳೆ ಎಂದುಕೊಂಡು ವಾಸುದೇವ ಹೇಳಿದ.

"ಆಗದೇ ಏನು ? ಅವಳು ಕಪ್ಪಗಿದ್ದಾಳೆಂದು ಹಾಗೆಂದುಕೊಳ್ಳು ತ್ತೀರೇನು ? ಕಪ್ಪಗಿದ್ದರೇನಂತೆ. ಕಾಮನ ಅರಗಿಳಿ ಇದ್ದ ಹಾಗಿದ್ದಾಳೆ. ಇಬ್ಬರನ್ನೂ ನಿಲ್ಲಿಸಿದರೆ ಬಿಳಿ ಹುಡುಗಿಯನ್ನು ತಳ್ಳಿ, ನಾನು ಆ ಕರೀ ಹುಡುಗಿ ಯನ್ನು ಆರಿಸುತ್ತೇನೆ"

ಹರಿಹರದಲ್ಲಿ ಕಾಫೀ ಕುಡಿದ ನಂತರ ಮಾತನಾಡುವುದಕ್ಕೆ ಬೇಕಾ ದಷ್ಟು ಹೊತ್ತಿತ್ತು. ರೈಲ್ವೆ ಡಬ್ಬಿಗಳನ್ನು ಗುಡಿಸಿ, ನೀರು ತುಂಬುವವರೆವಿಗೆ ಅವಕಾಶವಿತ್ತು. ಫಸ್ಟ್ ಬೆಲ್ ಹೊಡೆದನಂತರ ವಾಸುದೇವನೂ, ಶಂಕರನೂ ಹೋಗಿ ಗಾಡಿಯಲ್ಲಿ ಕುಳಿತುಕೊಂಡರು.

ಸಿಗರೇಟು ಹಚ್ಚಿಕೊಂಡು ಇಂಗ್ಲಿಷ್ ನಾವೆಲ್ಲೊಂದನ್ನು ಓದುತ್ತಾ ವಾಸುದೇವ ತನ್ನಷ್ಟಕ್ಕೆ ತಾನು ಕುಳಿತುಕೊಂಡ.

ಶಂಕರನ ಗಮನ ಮಾತ್ರ ಕಡೂರಿನಲ್ಲಿ ಹತ್ತಿದ ಪ್ರಯಾಣಿಕರ ಮೇಲೆಯೇ ಇತ್ತು.

ಆವನು ಅವರನ್ನು ಅಡಿಗಡಿಗೆ ನೋಡುತ್ತಿದ್ದ. ಹಿಂದಿನ ರಾತ್ರಿ ಅವರು ಗಾಡೀ ಹತ್ತಿದ ಕಾಲದಿಂದ ನಡೆದ ಘಟನೆಗಳೆಲ್ಲವನ್ನೂ ಒಂದೊಂದಾಗಿ ನೆನೆಸಿಕೊಳ್ಳುತ್ತಿದ್ದ.

ಅರಸೀಕೆರೆಯಲ್ಲಿ ಕಾಫೀ ಕುಡಿದು ಬಂದು ಕುಳಿತಿದ್ದ ವಾಸುದೇವ ನಿಗೂ ಶಂಕರನಿಗೂ ಇನ್ನೂ ನಿದ್ದೆ ಬಂದಿರಲಿಲ್ಲ.

ಕಡೂರಿನಲ್ಲಿ ಅವರ ಜಬ್ಬುಸ್ ನೋಡಬೇಕಿತ್ತು. ಒಡವೆಗಳನ್ನು ಇಟ್ಟು ಕೊಂಡಿದ್ದ ಬಿಳೀ ಹುಡುಗಿ ಕಾಲಿನಲ್ಲಿ ಚಪ್ಪಲಿಗಳನ್ನು ಮೆಟ್ಟಿಕೊಂಡು ರಾಣಿಯ ಹಾಗೆ ಗಾಡೀ ಹತ್ತಿದಳು. ಜುಲೈ ತಿಂಗಳ ಆರಂಭದ ದಿನಗಳು. ಮೈಮೇಲೆಲ್ಲಾ ತೊಟ್ಟಿಕ್ಕಿದ್ದ ಮಳೆಯ ಹನಿಗಳು ಮುಂಗುರುಳುಗಳ ಮೇಲೆ ಕುಳಿತು ವಿದ್ಯುದ್ದೀಪಗಳ ಕಾಂತಿಗೆ ಕಾರ್ಮೋಡಗಳ ಮೇಲೆ ಮಿಣುಗುಟ್ಟುವ ನಕ್ಷತ್ರಗಳಂತೆ ಪ್ರಕಾಶಿಸುತ್ತಿದ್ದವು. ರವಿವರ್ಮನ ಚಿತ್ರದಲ್ಲಿ ಊರ್ವಸಿಯ ಕೆಳಗೆ ಬಿದ್ದ ಸೆರಗು ಹಾರುತ್ತಿದ್ದಂತೆ ಅವಳ ಸೆರಗೂ ಗಾಳಿಗೆ ಹಾರುತ್ತಿತ್ತು.

ಒಂದು ಕೊನೆಯಲ್ಲಿ ಹಾಸಿಗೆಯ ಸುರುಳಿಯನ್ನು ಅರ್ಧ ಬಿಚ್ಚಿ ಮೂಲೆಯಲ್ಲಿ ಶಂಕರನೂ, ಅವನ ಪಕ್ಕದಲ್ಲಿ ವಾಸುದೇವನೂ ಕುಳಿತಿದ್ದರು. ಅದಾದ ನಂತರ ಮೂರು ನಾಲ್ಕು ಮಂದಿ ಗಂಡಸರು ಕುಳಿತಿದ್ದರು. ಎದುರು ಸಾಲಿನಲ್ಲಿ ನಾಲ್ಕೈದು ಮಂದಿ ಕೊರಚರಂತೆ ಕಂಡುಬರುತ್ತಿದ್ದ ತಮಿಳು ಹೆಂಗಸರು ಕುಳಿತಿದ್ದರು. ಅವರಲ್ಲಿ ಒಬ್ಬಳು ಇನ್ನೂ ಹದಿನಾರು ವರ್ಷದ ಹುಡುಗಿ. ಮತ್ತೊಬ್ಬಳು ಅವಳಿಗಿಂತ ಪ್ರೌಢೆ. ಕಪ್ಪಿಣದಿಂದ ಮಾಡಿದಂತೆ ಕಂಡುಬರುತ್ತಿದ್ದ ಗಂಡು ಮಗುವಿಗೆ ಮೊಲೆಯುಣ್ಣಿಸುತ್ತಿದ್ದಳು. ಉಳಿದ ಮೂರು ಮಂದಿ ಆ ಇಬ್ಬರಿಗಿಂತಲೂ ವಯಸ್ಸಾದವರು.

ಹೆಂಗಸರು ಕುಳಿತಿದ್ದಾರೆಯಲ್ಲಾ ಎಂದು ಗಂಡಸರು ಆ ಸೀಟನ್ನು ಪೂರ್ಣವಾಗಿ ಅವರಿಗೆ ಬಿಟ್ಟುಬಿಟ್ಟಿದ್ದರು.

ಬಿಳಿಯ ಹುಡುಗಿ ಬಂದವಳು ಆ ಹೆಂಗಸರ ಬಳಿ ಹೋಗಿ "ಎಲ್ಲಿ ಜಾಗ ಬಿಡಿ" ಎಂದು ಗದ್ದರಿಸಿದ ಹಾಗೆ ಹೇಳಿದಳು.

ಹರಕು ಬಟ್ಟೆಯ ಆ ಹೆಂಗಸರು ನಾಗರಿಕ ಹೆಣ್ಣಿನ ಸಾಮಿಪ್ಯದಿಂದ ಸಂಕೋಚಗೊಂಡೋ ಅಥವಾ ಹೆದರಿಕೊಂಡೋ, ಸರಿದು ಕುಳಿತು ಅರ್ಧ ದಷ್ಟು ಸೀಟು ಖಾಲೀ ಮಾಡಿದರು.

ಕನ್ನಡಿತಿಯು ಬಂದುದೂ, ತಮಿಳರು ಸರಿದುದೂ ಕ್ಷಣಾರ್ಧದಲ್ಲಿ ಜರುಗಿತು.

ಮರುಕ್ಷಣದಲ್ಲಿಯೇ ನಾಲ್ಕೈದು ಮಂದಿ ಗಂಡಸರು ಧಢಧಢನೆ ಗಾಡಿ ಯನ್ನು ಹತ್ತಿದರು. ಒಂದು ಹೋಲ್ಡಾಲಿನಲ್ಲಿ ಕಟ್ಟಿದ ದೊಡ್ಡದು, ಮತ್ತೊಂ ದು ಜಮಖಾನದ ಮೇಲೆ ನೂಲಿನ ದಾರ ಬಿಗಿದ ಸಣ್ಣದು ಆದ ಎರಡು ಹಾಸಿಗೆಗಳನ್ನು ತಂದು ಸೀಟಿನ ಮೇಲೆ ಹಾಕಿದರು. ಎರಡು ಮೂರು ಪೆಟ್ಟಿಗೆಗಳನ್ನು ಪಠಾರನೆ ನೆಲದ ಮೇಲೆ ಹಾಕಿದರು. ಮೇಲಿನ ಸೀಟಿನಲ್ಲಿ ಮಲಗಿದ್ದವನನ್ನು ಎಬ್ಬಿಸಿ "ಇದು ಮಲಗುವ ಜಾಗವೋ ? ಸಾಮಾನಿ ಡುವ ಜಾಗದಲ್ಲಿ ಯಾಕೆ ಮಲಗಿದೆ ?" ಎಂದವನನ್ನು ಗದ್ದರಿಸಿ, ಅಲ್ಲಿ ಜಾಗ ಮಾಡಿ ದೊಡ್ಡ ಪೆಟ್ಟಿಗೆ ಇಟ್ಟರು. ಆ ಪೆಟ್ಟಿಗೆಯ ಮೇಲೆ ನಾಲ್ಕೈದು ಗೋಣೀ ತಾಟಿನ ಸಣ್ಣ ಕೈ ಚೀಲಗಳನ್ನು ಇರಿಸಿದರು.

ಅವೆಲ್ಲವನ್ನೂ ಶಂಕರ ನೋಡುತ್ತಲೇ ಇದ್ದ.

ಮೊದಲು ಬಂದವಳು ಬಿಳಿಯ ಹುಡುಗಿ. ತಮಿಳರು ಸರಿದು ಮಾಡಿ ಕೊಟ್ಟ ಜಾಗದಲ್ಲಿ ಅವಳು ಕುಳಿತುಬಿಟ್ಟಳು. ಅನಂತರ ಹತ್ತಿದವನು ಚಿನ್ನದ ಸರದವನು. ಅವನ ಹಿಂದೆ ಕರಿಯ ಹುಡುಗಿ. ಆ ಮೇಲೆ ಹದಿ ಮೂರು ಹದಿನಾಲ್ಕು ವರ್ಷದ ಒಬ್ಬ ಹುಡುಗ.

ಕರಿಯ ಹುಡುಗಿಯೂ ಸಣ್ಣ ಹುಡುಗನೂ ಪ್ರಯಾಣ ಮಾಡಿ ರೂಢಿ ಇಲ್ಲದವರೆಂದು ಕಾಣುತ್ತಿತ್ತು. ಅವರೊಂದು ಬದಿಯಲ್ಲಿ ಮುದುರಿಕೊಂಡು ನಿಂತಿದ್ದರು.

ಚಿನ್ನದ ಸರದವನು ಬಹಳ ಅನುಭೋಗ (ಭವ) ಸ್ಥ. ಹಾಸಿಗೆಯನ್ನು ತೆಗೆದು ಸೀಟಿನ ಮೇಲೆ ಹಾಕಿ, ಕೈ ಚೀಲಗಳೆರಡನ್ನು ದೂರದಿಂದಲೇ ಎಸೆದು, ಪೆಟ್ಟಿಗೆಯನ್ನು ಮೇಲುಗಡೆ ಸೀಟಿನಲ್ಲಿಡಲು ಹೋದ. ತೆಳ್ಳಗೆ ಜಿರಲೆಯಂ ತಿದ್ದ ಅವನಿಂದದು ಆಗಲಿಲ್ಲ. ಆಗ ಬಿಳಿಯ ಬಟ್ಟೆಗಳನ್ನು ಧರಿಸಿದ್ದ ವೃಧ್ಧ ಕಾಯನೊಬ್ಬ ಬಂದು ಕೈಕೊಟ್ಟು, ಸರಿಯಾಗಿಟ್ಟ.

ಸಾಮಾನುಗಳೆಲ್ಲವನ್ನೂ ಗಾಡಿಯಲ್ಲಿಟ್ಟ ನಂತರ ಕೊಳೆಯಾದ ಚಡ್ಡಿ, ಬನಿಯನ್ನುಗಳನ್ನು ಹಾಕಿಕೊಂಡಿದ್ದ ಕರಿಯ ಶೋಣಪರಿಬ್ಬರು ಒಳಗೆ ಬಂದರು.

ಚಿನ್ನದ ಸರದವನು ಬಿಳಿಯ ಹುಡುಗಿಯನ್ನು ಮೇಲೇಳುವಂತೆ ಸಮಾಧಾನದಿಂದ ಹೇಳಿದ. ನೂಲು ದಾರದಲ್ಲಿ ಕಟ್ಟಿದ್ದ ಹಾಸಿಗೆಯನ್ನು ಬಿಚ್ಚಿ, ಇದ್ದ ಸ್ಥಳದಲ್ಲಿ ಹರಡಿದ. ಅದರ ಮೇಲೆ ಮೊದಲು ಬಿಳಿಯವಳೂ ಅನಂತರ ಅವನೂ ಕುಳಿತರು.

ಕಟ್ಟಿಕೊಂಡಿದ್ದ ಕೈಗಡಿಯಾರವನ್ನೊಮ್ಮೆ ನೋಡಿಕೊಂಡು ಪಕ್ಕದ್ದಲ್ಲಿದ್ದವಳಿಗೆ ಗಂಟೆ ಎಷ್ಟೆಂಬುದನ್ನು ಅವಳಿಗೆ ಬೇಡವಾಗಿದ್ದರೂ ಹೇಳಿದ. ಜೇಬಿನಿಂದ ಗೋಲ್ಡ್ ಫ್ಲೇಕ್ ಸಿಗರೇಟ್ ಪ್ಯಾಕ್ ತೆಗೆದು ಎಲ್ಲರಿಗೂ ಕಾಣುವಂತೆ ಸಿಗರೇಟಿನ ಒಂದು ಕೊನೆಯನ್ನು ಪ್ಯಾಕ್ ಮೇಲೆ ಎರಡು ಬಾರಿ ಹೊಡೆದು, ಕಾಕಾ ಮ್ಯಾಚಸ್‌ನಿಂದ ಹಚ್ಚಿದ. ಅನಂತರ ಸ್ವಲ್ಪ ದೂರದಲ್ಲಿ ನಿಂತಿದ್ದ ಕರಿಯ ಹುಡುಗಿಗೆ ಆಜ್ಞೆ ಮಾಡಿದ.

"ಅಲ್ಲೇನು ನಿಂತಿದ್ದೀಯೇ. ಇತ್ತ ಕಡೆ ಬಾ."

ಅವಳು ಬಂದು, ಬಿಳಿಯ ಹುಡುಗಿಯ ಪಕ್ಕದಲ್ಲಿ ಮತ್ತಷ್ಟು ಮುದುರಿಕೊಂಡು ನಿಂತುಕೊಂಡಳು.

ಬೆಪ್ಪನಂತೆ ನಿಂತಿದ್ದ ಹುಡುಗನಿಗೆ ಶಂಕರನ ಸೀಟಿನಲ್ಲಿ ಕುಳಿತಿದ್ದವರು ಸರಿದು ಕುಳಿತುಕೊಳ್ಳಲು ಜಾಗ ಕೊಟ್ಟರು.

ಇನ್ನುಳಿದವರು ಮೂರು ಮಂದಿ ಅವರಿಗೆ ಕುಳಿತುಕೊಳ್ಳಲು ಜಾಗವಿರಲಿಲ್ಲ.

ಅವರು ಬಂದು ಯಮದೂತರಂತೆ ತಮಿಳು ಹೆಂಗಸರ ಮುಂದೆ ಹೋಗಿ ನಿಂತರು.

ಅವರಲ್ಲಿ ಶ್ವೇತವಸ್ತ್ರಧಾರಿಯು ದಪ್ಪನೆಯ ದನಿಯಲ್ಲಿ ಅವರನ್ನು ಕೇಳಿದ.

"ಇದು ಮುಂಬೈ ಗಾಡಿ, ಇಲ್ಲೇಕೆ ಹತ್ತಿದಿರಿ?"

ದನಿಯಲ್ಲಿದ್ದ ದೋಷವನ್ನು ಬಿಟ್ಟರೆ ಅವನು ಕೇಳಿದುದು ಶುದ್ಧವಾದ

ಸರಳ ಕನ್ನಡ ಮಾತು. ಬಲು ದಿನಗಳಿಂದ ಕನ್ನಡನಾಡಿನಲ್ಲಿಯೇ ಕೂಲೀ ನಾಲೀ ಮಾಡಿಕೊಂಡು ಜೀವಿಸುತ್ತಿದ್ದ ಆ ಹೆಂಗಸರಿಗೆ ಅದು ಅರ್ಥವಾಗದ ಕಾರಣವೇನೂ ಇಲ್ಲ.

ಆದರೂ ಅದವರಿಗೆ ಅರ್ಥವಾಗಲಿಲ್ಲ. ಗದ್ದರಿಸಿದಂತೆ ಭಾಸವಾಗಿರ ಬೇಕಷ್ಟೆ.

"ಇಲ್ಲ. ನಾವು ಮುಂದಿನ ಸ್ಟೇಷನ್ನಿನಲ್ಲಿ ಇಳಿದುಬಿಡುತ್ತೇವೆ."

"ಹಾಗಾದರೆ ನಮಗೆ ಜಾಗ ಬಿಡಿ. ಇನ್ನು ಮೂರು ಮೈಲು. ಇಷ್ಟು ಹೊತ್ತೂ ಕುಳಿತಿದ್ದೀರಿ.''

ಇನ್ನು ಮೂರು ಮೈಲಾದರೆ ಯಾಕೆ ಕುಳಿತುಕೊಂಡೇ ಹೋಗಬಾರದೋ ಅಷ್ಟು ಪರಿಜ್ಞಾನವೂ ಅವಗಿರಿಲಿಲ್ಲ.

ಮುದುಕಿಯೊಬ್ಬಳು ಹೇಳಿದಳು.

''ಇನ್ನೇನು ಎರಡು ನಿಮಿಷ. ನಮ್ಮದ್ದು ಹೇಗೋ ಆಗುತ್ತದೆ. ದೂರ ಹೋಗುವವರು. ಅವರಿಗೆ ಜಾಗ ಕೊಡಿ."

ಆ ಹೆಂಗಸರಷ್ಟು ಜನವೂ ಕೆಳಗಿಳಿದು ಕುಳಿತುಕೊಂಡರು. ಆ ಮೂರು ಮಂದಿ ಗಂಡಸರೂ ಆ ಸ್ಥಳ ಅಕ್ರಮಿಸಿದರು.

ಅವರದನ್ನು ಆಕ್ರಮಿಸಿದ್ದದು ಕ್ಷಣ ಕಾಲ. ಆ ಹೆಂಗಸರನ್ನು ಮೆಚ್ಚಿಸುವುದಕ್ಕೆ ಎಂದು ತೋರುತ್ತದೆ.

ಕರಿಯ ಕೋಣಪರಿಬ್ಬರೂ ಚೌಕಗಳನ್ನು ಹಾಕಿಕೊಂಡು ಕೆಳಗೆ ಮಲಗಿಬಿಟ್ಟರು. ಶ್ವೇತವಸ್ತ್ರಧಾರಿಯು ಸರಿದು ಸೀಟಿನ ಕೊನೆಯಲ್ಲಿ ಕುಳಿತುಕೊಂಡ. ಚಿನ್ನದ ಸರದವನು ಎದ್ದು ಹಾಸಿಗೆಯನ್ನು ಮತ್ತಷ್ಟು ಬಿಚ್ಚಿ ಕೆಳಗೆ ಸರಿಸಿದ. ಸರಿಸಿ ಜಾಗ ಮಾಡಿದಲ್ಲಿ ಕರಿಯ ಹುಡುಗಿ ಕುಳಿತಳು. ದಿಂಬು ತೆಗೆದು ಪಕ್ಕದಲ್ಲಿಟ್ಟು ಅದಿದ್ದ ಕಡೆ ಅವನು ಮುಂದಿನ ಸೀಟಿನ ಮೇಲೆ ಕಾಲಿಟ್ಟು ಈಸೀಚೇರಿನ ಮೇಲೆ ಮಲಗುವಂತೆ ಒರಗಿದ. ಕಿಟಕಿಯ ಬಳಿ ಹಲಗೆಯ ಪಕ್ಕದಲ್ಲಿ ದಿಂಬನ್ನು ಇಟ್ಟು ಅವನ ತೊಡೆಯ ಮೇಲೆ ತಲೆಯಿಟ್ಟು ಬಿಳಿಯ ಹುಡುಗಿ ಮಲಗಿದಳು. ಮಗ್ಗುಲಲ್ಲಿದ್ದ ದಿಂಬಿನ ಮೇಲೆ ಬಲ ತೋಳು ಹಾಕಿದಳು.

ಮರುಕ್ಷಣದಲ್ಲಿ ಅರ್ಥ ಎದ್ದು ಹೇಳಿದಳು.

"ನಿದ್ದೆ ಬರುವುದಿಲ್ಲ, ಯಾವುದಾದರೂ ನಾವೆಲ್ ಕೊಡಿ."

ಚಿನ್ನದ ಸರದವನು ಎದ್ದು ಸಣ್ಣ ಪೆಟ್ಟಿಗೆಯೊಂದನ್ನು ತೆಗೆದು ಎರಡು ಮೂರು ಒಂದೂವರೆ ರೂಪಾಯಿನ ಪುಸ್ತಕಗಳನ್ನು ತೋರಿಸಿದ. ಒಂದನ್ನು ವಳು ಆರಿಸಿಕೊಂಡಳು.

ಪುನಃ ಅವನು ಮೊದಲಿನಂತೆಯೇ ಕುಳಿತ. ಅವಳು ಹಾಗೆಯೇ ಮಲಗಿ ಓದಲಾರಂಭಿಸಿದಳು.

ಅದು ವಾಸುದೇವ ತಾನು ಬರೆದ ಪುಸ್ತಕವೆಂದು ಅನಂತರ ಶಂಕರನಿಗೆ ತಿಳಿಸಿದ.

ಆ ಪರಿವಾರದಲ್ಲಿ ಚಿನ್ನದ ಸರದವನು ನಾಯಕನಂತೆಯೂ, ಇತರರು ಆಶ್ರಿತರಂತೆಯೂ ಕಂಡುಬರುತ್ತಿದ್ದರು.

ಅವರಿದ್ದ ತರಹವನ್ನೂ, ಅವರು ಆಗಾಗ ಆಡಿದ ಒಂದೊಂದು ಮಾತಿನ ಅರ್ಥವನ್ನೂ ಹಿಡಿದು ಶಂಕರ ಏನೇನೋ ಅರ್ಥ ಮಾಡಿಕೊಂಡ. ಸರದವನು ಹೋಟಲಿಟ್ಟಿದ್ದಾನೆಂದೂ ಬಿಳಿಯ ಹುಡುಗಿ ಅವನ ಹೆಂಡತಿ ಎಂದೂ, ಮಿಕ್ಕವರೆಲ್ಲರೂ ಅವನ ಹೋಟಲಿನಲ್ಲಿ ಕೆಲಸ ಮಾಡುವ ನೌಕರ ರೆಂದೂ ಅಂದುಕೊಂಡ.

ಚಿನ್ನದ ಸರದವನು ಎರಡನೆಯ ಗೋಲ್ಡ್ ಫ್ಲೇಕ್ ಹಚ್ಚಿದಾಗ ಕೆಳಗೆ ಮಲಗಿದ್ದವರಲ್ಲಿ ಒಬ್ಬ ಕರಿಯ ಕೊಣಪ ಹೇಳಿದ.

"ಹೀಗೊಂದು ಸಿಗರೇಟು ಹಾಕಿ, ಮಹರಾಯರೇ ! ಹಚ್ಚಿ ನೋಡುವಾ."

ಅವನು ಗೋಲ್ಡ್ ಫ್ಲೇಕ್ ಇಟ್ಟುಕೊಂಡುಧು ತೋರಿಕೆಗಾಗಿ ಹಚ್ಚುವುದಕ್ಕೆ. ಯಾವನೋ ಕೇಳಿದರೆ ಕೊಡುವುದಕ್ಕಲ್ಲ. ಈಗ ಕೊಡುವಂ ತಿಲ್ಲ, ಕೊಡದಿರುವಂತಿಲ್ಲ, ದಾಕ್ಷಿಣ್ಯ.

ಅವರವರ ದಾಕ್ಷಿಣ್ಯಕ್ಕಿಂತಲೂ ಒಂದೂವರೆಯಾಣೆಯು ಭಾರವಾಗಿ ತೂಗಿತು.

ಗೋಲ್ಡ್ ಫ್ಲೇಕಿನೊಡನೆ ಜೇಬಿನಲ್ಲಿ ಪ್ರಭು ಬೀಡಿ ಕಟ್ಟು ಇದ್ದಿತು. ಒಡ್ಡಿದ್ದ ಕೈಗೆ ಒಂದೆರಡು ಬೀಡಿ ತೆಗೆದು ಹಾಕುತ್ತಾ ಹೇಳಿದ್ದ.

"ಪ್ರುಂಬೈನಲ್ಲಿ ಸಿಗರೇಟು ಹಚ್ಚುವೆಯಂತೆ. ಅಲ್ಲಿಯವರೆಗೆ ಬೀಡಿ ಯಲ್ಲಿಯೇ ಮುಗಿಸು."

ಇದ್ದುದರಲ್ಲಿ ಮಜಾ ಉಡಾಯಿಸೋಣವೆಂದು ಸಿಗರೇಟು ಕೇಳಿದ್ದ. ಬೀಡೀ ಸಿಕ್ಕಿದರೆ ಬಿಡುವರೇ! ಅದನ್ನೇ ತೆಗೆದುಕೊಂಡು ಹಚ್ಚಿದ.

ನಿರಾತಂಕವಾಗಿ ಜಾಗ ಸಿಕ್ಕಿತು. ಮೇಲೋ ಕೆಳಗೋ ಅಂತೂ ಚೌಕ ಹಾಸಿ ಮಲಗಲು ಎಡೆಯಾಯಿತು. ನಿರಾಳವಾಗಿ ಬೀಡಿ ಹಚ್ಚಿ ಕೊಂಡಾಗ ವಯಸ್ಸಿಗೆ ಬಂದಿದ್ದ ಶೋಣಪನ ಮನಸ್ಸಿನಲ್ಲಿ ನಾನಾ ವಿಧವಾದ ಆಲೋಚನೆಗಳು ಬಂದಿರಬೇಕು.

ಬರಬೇಡವೇ ! ಎದುರಿಗೇ ಒಬ್ಬ ಹುಡುಗಿ ಮತ್ತೊಬ್ಬನ ತೊಡೆಯ ಮೇಲೆ ಮಲಗಿರುವಾಗ.

ಹಾಗೇ ನೋಡುವಾಗ ಅವನ ಕಣ್ಣು ಕೆಳಗೆ ಕುಳಿತಿದ್ದ ಕೊರಚರ ಹೆಣ್ಣುಗಳ ಕಡೆ ಹರಿಯಿತು. ಮುಖ್ಯವಾಗಿ ವಯಸ್ಸಾದವರನ್ನೂ ಮತ್ತು ಹುಡುಗಿಯನ್ನು ಬಿಟ್ಟು, ಪ್ರೌಢೆಯ ಕಡೆಗೆ.

ಅವಳೂ ಅವಳ ಮಗುವಿನಂತೆಯೇ ಕಲ್ಲಿನಲ್ಲಿ ಕೆತ್ತಿದ ವಿಗ್ರಹದಂತಿದ್ದಳು. ದಪ್ಪ ಪುಷ್ಟವಾದ ಕೈಕಾಲುಗಳು, ದೇಹ. ಮುಖದಲ್ಲಿ ಸೌಂದರ್ಯವಿತ್ತೆಂದು ಹೇಳಲಾಗವಿದ್ದರೂ ಆರೋಗ್ಯವು ಉಕ್ಕಿ ಕಂಡುಬರುತ್ತಿತ್ತು.

ನಾಗರಿಕರು ಪ್ರದರ್ಶಿಸುವ ನಾಚಿಕೆ, ಸಂಕೋಚಗಳು ಅವಳಲ್ಲಿರಲಿಲ್ಲ. ಮಗುವಿಗೆ ಮೊಲೆಯುಣಿಸುತ್ತಿದ್ದ ಅವಳು ಸೆರಗಿನ ಕಡೆ ಹೆಚ್ಚು ಗಮನ ಕೊಟ್ಟಿರಲಿಲ್ಲ.

ಜೊತೆ ಚೆಂಡುಗಳಂತೆ ಪಯೋಧರಗಳೆರಡು ಅವಳ ಎದೆಯ ಮೇಲೆ ನಿಂತಿದ್ದವು.

ಬೀಡೀ ಹಚ್ಚಿಕೊಂಡ ಶೋಣಪ ಅವಳನ್ನು ಮಾತನಾಡಿಸಿದ.

"ನೀವುಗಳು ಯಾವ ಊರಿಗೆ ಹೋಗುತ್ತಿದ್ದೀರಿ?"

ತಮಿಳು ದನಿಯ ಅರ್ಧ ಅರ್ಧ ಕನ್ನಡದಲ್ಲಿ ಅವಳು ಉತ್ತರ ಕೊಟ್ಟಳು.

"ಲಕ್ಕವಳ್ಳಿಗೆ......."

"ಅಲ್ಲೇನು ಮಾಡುತ್ತೀರಿ?"

ಮುಂಬೈ ಪಟ್ಟಣದಲ್ಲಿಯೇ ಹೆಚ್ಚು ದಿನಗಳನ್ನು ಕಳೆದ ಅವನಿಗೆ ಕನ್ನಡ ನಾಡಿನ ಲಕ್ಕವಳ್ಳಿಯಲ್ಲಿ ಏನು ನಡೆಯುತ್ತಿದೆ ಎಂಬುದು ತಿಳಿದಿರಲಿಲ್ಲ.

"ಅಣೆಕಟ್ಟಿನಲ್ಲಿ ಕೆಲಸ ಮಾಡುತ್ತೇವೆ."

"ಕೇಳಿ ಉಂಟು. ಅಲ್ಲಿ ನಿಮಗೆಲ್ಲಾ ಕೆಲಸ ಸಿಕ್ಕುತ್ತದೆಯೇನು?"

"ಸಿಕ್ಕುತ್ತದೆ. ಅಲ್ಲಿ ನಮ್ಮವರು ಬಹಳ ಜನ ಇದ್ದಾರೆ."

"ಮತ್ತೆ ಮುಂದಿನ ಸ್ಟೇಷನ್ನಿನಲ್ಲಿ ಇಳಿಯುವುದಾಗಿ ಹೇಳುತ್ತೀರಿ."

"ಇಳಿದು ತರೀಕೆರೆಗೆ ಹೋಗುತ್ತೇವೆ. ಅಲ್ಲಿಂದ ಅಣೆಕಟ್ಟೆಗೆ ಹನ್ನೊಂದು ಮೈಲಿ."

"ಇದುವರೆವಿಗೆ ಅಲ್ಲಿ ಕೆಲಸ ಮಾಡಿದ್ದೀರಿಯೇನು?"

"ಮೂರು ನಾಲ್ಕು ವರ್ಷಗಳಿಂದ ಅಲ್ಲಿಯೇ ಇದ್ದೇವೆ. ಈ ಮಗು ಹುಟ್ಟಿದ್ದು ಅಲ್ಲಿಯೇ?"

"ಬೆಂಗಳೂರಿನಿಂದ ಬರುತ್ತಿದ್ದೀರಲ್ಲಾ."

"ನಮ್ಮದು ಸೇಲಂ ಕಡೆ. ಊರಿಗೆ ಹೋಗಿ ಬರುತ್ತಿದ್ದೇವೆ."

ತೋಣಪ ಮಾತು ಆರಂಭಿಸಿದ್ದು ಅವಳನ್ನು ನೋಡಿದಾಗ ಮನಸ್ಸಿನಲ್ಲಿ ಹುಟ್ಟಿದ ಕಾಮದಿಂದ. ಕಾಮಸಂಬಂಧವಾದ ಮಾತನಾಡದೇ ಮನಸ್ಸಿಗೆ ತೃಪ್ತಿಯಾಗದು. ಹೇಗಾದರೂ ಕಾಮಕ್ಕೆ ಸ್ವಲ್ಪವಾದರೂ ಸಂಬಂಧಪಟ್ಟ ಮಾತು ಆಡಬೇಕು.

"ನಿನ್ನ ಗಂಡ ಎಲ್ಲಿದ್ದಾನೆ?"

"ಲಕ್ಕವಳ್ಳಿಯಲ್ಲಿಯೇ ಇದ್ದಾರೆ."

"ನೀನೊಬ್ಬಳೇ ಹೋಗಿದ್ದೆಯಾ?"

"ಹೌದು. ಮನೆಯ ಕಡೆ ನೋಡಿಕೊಂಡು ಬರಲು ಹೋಗಿದ್ದೆ."

ಇನ್ನೇನು ಕೇಳುವುದಕ್ಕೂ ವಿಷಯವಿರಲಿಲ್ಲ. ಅವಳು ಒಂದು ಪ್ರಶ್ನೆ ಕೇಳಿದಳು.

"ನೀವೆಲ್ಲಿಗೆ ಹೋಗುತ್ತಿದ್ದೀರಣ್ಣಾ."

ಹೆಣ್ಣು ಯಾವುದೋ ವಿಧವಾಗಿ ತನ್ನಲ್ಲಿ ಆಸಕ್ತಳಾದುದಕ್ಕೆ ತೋಣಪ ನಿಗೆ ಸಂತೋಷವಾಯಿತು. ಮಾತು ಹೀಗೆ ಆರಂಭವಾದರೂ ಅದರ ಜಾಡು ಎಲ್ಲೆಲ್ಲಿಗೆ ಹರಿಯುತ್ತದೆಯೋ?

"ನನಗೆ ಮುಂಬೈನಲ್ಲಿ ಕೆಲಸ. ಅಲ್ಲಿಗೆ ಹೋಗುತ್ತಿದ್ದೇನೆ."

ಅವಳೆಂದೂ ಬೊಂಬಾಯಿ ನೋಡಿಲ್ಲ. ಅದು ಬಹಳ ದೊಡ್ಡ ನಗರವೆಂದು ಕೇಳಿದ್ದಳು.

"ಬೊಂಬಾಯಿ ಪಟ್ಟಣವು ದೊಡ್ಡ ಊರೇನು?"

"ಸಂದೇಹವೇನು? ಬಹಳ ದೊಡ್ಡ ಷಹರು. ಇಂಡಿಯಾ ದೇಶವನ್ನೆಲ್ಲಾ ಸುತ್ತಿದ್ದೇನೆ. ಅಂತಹ ದೊಡ್ಡ ಷಹರು ಬೇರೆ ಇಲ್ಲವೇ ಇಲ್ಲ."

ಹೆಣ್ಣು ಆಶ್ಚರ್ಯಪಟ್ಟಳು.

"ದೇಶವೆಲ್ಲಾ ನೋಡಿದ್ದೀರಾ?"

"ಹೂಂ........"

"ಪಟ್ಟಣ ನೋಡಿದ್ದೀರಾ?"

"ಹಾಗೆಂದರೆ——?"

"ಮದರಾಸು?"

"ಮುಂಬೈ ನೋಡಿದ ಮೇಲೆ ಬೇರೆ ಯಾವ ಊರನ್ನೂ ನೋಡಬೇಕಾಗಿಲ್ಲ."

ಅವಳು ಒಪ್ಪಿಕೊಂಡಳು.

"ಇವರೆಲ್ಲಾ ನಿನ್ನ ಬಳಗದವರೇನು?"

"ಇಲ್ಲ. ಅವರು ಬೇರೆ. ನಾನು ಬೇರೇ. ಒಂದು ಊರು ಅಷ್ಟೇ. ಸೇರಿ ಲಕ್ಷ್ಮವಳ್ಳಿಗೆ ಹೋಗುತ್ತಿದ್ದೇವೆ."

ಮಗು ಹಾಲು ಕುಡಿದು ಮುಗಿದಿತ್ತು. ಮೊಲೆ ಬಿಡಿಸಿ ಅದನ್ನು ತೊಡೆಯ ಮೇಲೆ ಹಾಕಿಕೊಂಡು, ಇದ್ದುದರಲ್ಲಿ ಎದೆಯ ಮೇಲೆ ಸೆರಗು ಎಳೆದುಕೊಂಡು, ತೊಡೆಯಾಡಿಸಿ ಮಗುವನ್ನು ತೂಗತೊಡಗಿದಳು.

ಮುಚ್ಚಿಕೊಂಡರೂ ದಪ್ಪವಾದ, ಕಠಿಣವಾದ ಕುಚಗಳು ಸೆರಗಿನೊಳಗಿನಿಂದ ಮುಂದೆ ನುಗ್ಗಿ ಬಂದಿದ್ದವು.

ಜನಗಳೆಲ್ಲಾ ಅನ್ಯಾಸಕ್ತರಾಗಿದ್ದಾರೆ. ಹದಿನಾರು ವರ್ಷದ ಹುಡುಗಿ ಮಲಗಿಬಿಟ್ಟಿದ್ದಾಳೆ. ವಯಸ್ಸಾದ ಮೂರು ಮಂದಿ ಅವಳ ಜೊತೆಯವರು ತೂಕಡಿಸುತ್ತಿದ್ದಾರೆ.

ಬೆಂಚಿನ ಕೆಳಗೆ ಅವಳೂ ಮಲಗಿಬಿಟ್ಟರೆ-! ಅವಳ ದುಂಡು ಮೊಲೆಗಳ

ಮೇಲೆ ಕೈಯಾಡಿಸುವುದು ಸಾಧ್ಯವಾದರೆ ! ಮುಂಬೈ ವಿಷಯ ಬಹಳವಾಗಿ ಕೇಳಿದ್ದಾಳೆ. ಮನಸ್ಸಿನಲ್ಲಿ ತನ್ನ ಮೇಲೆ ಆಶೆಯಿದೆಯೋ ಏನೋ ?

ಹಾಳು ! ಬೀರೂರು ! ಅಲ್ಲಿ ಇಳಿದುಬಿಡುತ್ತಾಳೆ. ಚಾನ್ಸ್ ಇಲ್ಲದೇ ಹೋಗುತ್ತದೆ.

ಹಾ ! ಬೀರೂರು ಬಂದೇಬಿಟ್ಟಿತು. ಆ ತಮಿಳು ಹೆಂಗಸರು ಗಾಡೀ ಇಳಿದು ಹೊರಟುಹೋದರು.

ಕೊಣಪ ಆ ಹೆಂಗಸಿನೊಡನೆ ಮಾತನಾಡಿದ್ದನ್ನೂ ಆ ಹೆಂಗಸು ಅವನೊಡನೆ ಮಾತನಾಡಿದ್ದನ್ನೂ ಶಂಕರ ಕೇಳಿದ್ದ. ಆದರೆ ಕೊಣಪನ ಮನಸ್ಸಿನಲ್ಲಿದ್ದುದನ್ನು ತಿಳಿದುಕೊಳ್ಳಲು ಜ್ಞಾನದೃಷ್ಟಿ ಇರಲಿಲ್ಲ.

ಮಾತು, ಗಮನಗಳು ಹಠಾತ್ತನೆ ಬೇರೇ ಕಡೆಗೆ ತಿರುಗಿದುವು.

ಬೀರೂರು ಫ್ಲಾಟ್‌ಫಾರಂನಲ್ಲಿ ಬೀಡೀಸೀಗರೇಟು, ವಡೆ, ಕಾಫಿಗಳು ಮಾರಾಟಕ್ಕೆ ಬಂದುವು. ಚಿನ್ನದ ಸರದವನು ಕೂಗಿದ.

"ಏ, ಕಾಫೀ————"

ಇವರೆಲ್ಲಾ ಹೋಟಲಿನವರೆಂದು ಶಂಕರ ಊಹೆ ಮಾಡಿದ್ದ. "ಏ ಕಾಫೀ——ಎಂದು ಅಷ್ಟೊಂದು ತಿರಸ್ಕಾರವಾಗಿ ಕರೆಯುತ್ತಾನೆ. ಅದೇ ಇವನ ಹೋಟಲಿನಲ್ಲಿ ಗಿರಾಕಿ ಹೀಗೆ ಕರೆದರೆ ಸುಮ್ಮನಿರುತ್ತಾನೆಯೋ ? ಆದರೆ ಕಾಫಿಯವನು "ಎಷ್ಟು ಬೇಕ್ರಿ" ಎಂದು ನಿಂತುಕೊಂಡ.

ತೊಡೆಯ ಮೇಲೆ ಮಲಗಿದ್ದವಳನ್ನು ಕುರಿತು ಕೇಳಿದ.

"ಕುಮುದ. ಕಾಫೀ ಕುಡಿಯುತ್ತೀಯೋ, ಹೇಗೆ ?"

ಎದ್ದು ಕುಳಿತು, ಕಣ್ಣುಜ್ಜಿಕೊಂಡು, ವಯ್ಯಾರದಿಂದ ಸುತ್ತಲೂ ತಿರುಗಿ ನೋಡಿ ಅಂದಳು.

"ತೆಗೆದುಕೊಳ್ಳಿ. ನೋಡುವ"

"ಒಂದು ಕೊಡು"

ಚಿನ್ನದ ಸರದವನು ಕಾಫಿಯವನಿಂದ ಗ್ಲಾಸು ತೆಗೆದುಕೊಂಡು ಕುಮುದಳ ಕೈಗೆ ಕೊಟ್ಟ.

ಅವಳು ಕೈಗೆ ತೆಗೆದುಕೊಂಡು, ಮೂಸಿ ನೋಡಿ, ಸ್ವಲ್ಪ ಕುಡಿದು, "ಆರಿಹೋಗಿದೆ" ಎಂದು ಹೇಳಿ, ಎರಡು ಮೂರು ಗುಟುಕುಗಳನ್ನು ಕುಡಿ

ಯುವುದರೊಳಗೆ ಹತ್ತಾರು ಬಾರಿ ಮುಖ ಕೊಂಕು ಮಾಡಿ, ಕಾಫೀ ವಾಪ್ಸು ಕೊಡುತ್ತಾ ಹೇಳಿದಳು.

"ಚೆನ್ನಾಗಿಲ್ಲ. ಹೊಟ್ಟೆ ತೊಳೆಸಿಕೊಂಡು ಬರುತ್ತದೆ. ನನಗೆ ಬೇಡಪ್ಪ"

"ಏ. ಸ್ಪೆಷಲ್ ಕಾಫೀ ಇಲ್ಲವೇನೋ ?"

ಕಾಫಿಯವನು ಮುಂದೆ ಹೊರಟುಹೋಗಿ ಇನ್ನಾರೋ ಗಿರಾಕಿಗೆ ಗ್ಲಾಸು ಕೊಡುತ್ತಿದ್ದ.

ಸರದವನು ಉಳಿದ ಕಾಫೀ ಅನ್ಯಾಯವಾಗುತ್ತದೆಯಲ್ಲ ಎಂದು ಉಳಿದಿದ್ದನ್ನು ಕುಡಿದು, ಹೇಳಿದ.

"ಹೌದು. ಚೆನ್ನಾಗಿಲ್ಲ"

ಆ ಗುಂಪಿನಲ್ಲಿ ಇನ್ನಾರೂ ಕಾಫೀ ತೆಗೆದುಕೊಳ್ಳಲಿಲ್ಲ.

ರೈಲು ಹೊರಟಿತು. ರೈಲು ಹೊರಟ ಎರಡು ನಿಮಿಷ ಕುಮುದ ಕುಳಿತೇ ಇದ್ದಳು.

ಕೆಳಗೆ ಕುಳಿತಿದ್ದ ಕೂಲೀ ಹೆಂಗಸನ್ನು ಶಂಕರನೂ ನೋಡಿದ್ದ. ಅವಳ ದುಂಡು ಮೊಲೆಗಳನ್ನು ಗಮನಿಸಿಯೂ ಇದ್ದ. ಅಂತಹ ಕುಚಗಳು ಕುಮುದೆಗೆ ಇರಲಿಲ್ಲ. ರಾತ್ರಿಯ ಹೊತ್ತೆಂದು ಬ್ರೆಸರೀಸ್ ಹಾಕಿಕೊಂಡಿರಲಿಲ್ಲ.

ಅವಳ ಕುಚಗಳು ಇಳಿ ಬಿದ್ದಿದ್ದುದು ಸ್ಪಷ್ಟವಾಗಿ ಕಂಡುಬರುತ್ತಿದ್ದವು,

ಅದೆಲ್ಲಾ ರಾತ್ರಿಯ ಮಾತು !

ಬೆಳಗಾಗ ಶಂಕರ ಅವರಿಬ್ಬರು ಹೆಂಗಸರನ್ನು ನೋಡುವ ದೃಷ್ಟಿಯೇ ಬದಲಾಗಿ ಹೋಗಿತ್ತು.

ಹೆಂಗಸರ ಕಡೆ ಕ್ಷಣಕಾಲ ನೋಡುವುದಕ್ಕೇ ಅವನಿಗೆ ಹೆದರಿಕೆ. ಸಂಸಾರಿಗಳ ಕಡೆ ನೋಡಿದರೆ ಏನೆಂದುಕೊಳ್ಳುತ್ತಾರೆಯೋ ಎಂದು ಸಂಕೋಚ. ಅದರ ಮೇಲೆ ಗಂಡಸರೊಡನಿರುವ ಹೆಂಗಸರನ್ನು ನೋಡಿದರೆ ಜೊತೆಯಲ್ಲಿರುವವರು ಎಲ್ಲಿ ಕೆನ್ನೆಗೆ ಹಾಕುತ್ತಾರೆಯೋ ಎಂದು ಭಯ.

ಅಂತಹ ಶಂಕರ ಸಹ ಕದ್ದು ಆ ಹೆಂಗಸರಿಬ್ಬರ ಕಡೆ ನೋಡುತ್ತಿದ್ದ. ಆ ಕಳ್ಳ ನೋಟದಿಂದ ಮನಸ್ಸಿಗೆಷ್ಟೋ ಆಪ್ಯಾಯಮಾನವಾಗುತ್ತಿತ್ತು.

ಎದುರಿಗೆ ಕುಳಿತಿದ್ದ ಆ ಹೆಂಗಸರನ್ನು ಪರಸ್ಪರ ಹೋಲಿಸಿದಾಗ

ಕುಮುದೆಗಿಂತ ಮತ್ತೊಬ್ಬಳೇ ಚೆನ್ನಾಗಿದ್ದಾಳೆಂದು ಭಾಸವಾಗುತ್ತಿತ್ತು. ವಾಸುದೇವ ಹೇಳಿದಂತೆ ಕರಿಯ ಹುಡುಗಿಯೇ ಚೆನ್ನ.

ಹೌದು ! ಅವಳ ಮುಖದಲ್ಲಿ ಸ್ತ್ರೀಯರಿಗೆ ಆವಶ್ಯಕವಾದ ಮುಗ್ಧತೆಯಿದೆ. ಎದೆಯ ಮಾಟ, ದೇಹಸೌಷ್ಟವಗಳು ಆಕರ್ಷಣೀಯವಾಗಿವೆ.

ವಾಸುದೇವ ಆ ಪ್ರಯಾಣಿಕರ ವಿಷಯ ಎಷ್ಟೋ ಬಲ್ಲವನಂತೆ ಹೇಳಿದ. ಅವೆಲ್ಲವೂ ಪೂರ್ಣವಾಗಿ ನಿಜವಿರಬಹುದು. ಸ್ವಲ್ಪ, ಸ್ವಲ್ಪವಾದರೂ ನಿಜವಾಗಿರಬಹುದು.

ಅದರಲ್ಲಿ ಸ್ವಲ್ಪ ನಿಜವಾಗಿದ್ದರೂ ಎಂತಹ ಅನ್ಯಾಯ !

ಕುಮುದೆಗಾಗಿ ಅವನಿಗೆ ಪರಿತಾಪವಾಗಲಿಲ್ಲ. ಅವಳು ಗಂಡಸರ ಕಡೆಗೆ ನೋಡುವ ನೋಟದಲ್ಲಿ ಎಷ್ಟೋ ತಿರಸ್ಕಾರವಿದೆ. ಅಂತಹ ಹೆಂಗಸಿಗಾಗಿ ಯಾವ ಗಂಡಸು ತಾನೇ ಪರಿತಾಪಪಡುತ್ತಾನೆ.

ಆದರೆ ಆ ಕರಿಯ ಹುಡುಗಿ, ಮುದ್ದು ಹುಡುಗಿ. ಮೂರು ನಾಲ್ಕು ಬಾರಿಯಾದರೂ ಅವಳು ಶಂಕರನ ಕಡೆಗೆ ತಿರುಗಿ ನೋಡಿದ್ದಾಳೆ. ಕವಿಗಳು ಹೇಳುವ ಮಾತಿನಲ್ಲಿ ಹೇಳಬೇಕಾದರೆ ಹೆದರಿದ ಹರಿಣವಂತೆ ನೋಡಿದ್ದಾಳೆ! ಅಲ್ಲ, ಆ ಮಾತು ಸರಿಯಲ್ಲ. ವಾಸ್ತವವಾಗಿ ಹೇಳಬೇಕು. ಕುರಿಯಂತೆ, ಕಸಾಯಿ ಖಾನೆಗೆ ಹೋಗುವಾಗಲೂ ಅರಿಯದೇ ಸುಮ್ಮನೆ ನೋಡುವ ಕುರಿಯಂತೆ ನೋಡುತ್ತಿದ್ದಾಳೆ.

ಅಂತಹವಳನ್ನು ವ್ಯಾಪಾರಕ್ಕಾಗಿ ಕೊಂಡು ಹೋಗುತ್ತಿದ್ದಾರೆ! ಏನೋ ಅಣ್ಣ ಅತ್ತಿಗೆ ಮುಂಬೈ ಷಹರಿನಲ್ಲಿ ಚೆನ್ನಾಗಿ ಬದುಕಿದ್ದಾರಲ್ಲ. ಅಲ್ಲಿದ್ದುಕೊಂಡಿರೋಣವೆಂದು ಹೋಗುತ್ತಿರಬಹುದು.

ಜಿರಲೆಯಂತೆ ಕಂಡುಬರುತ್ತಿರುವ ಚಿನ್ನದ ಸರದವನು ಗಿರಾಕಿಯೊಬ್ಬನನ್ನು ಕರೆತಂದು "ಇವನ ಬಳಿಗೆ ಹೋಗು" ಎಂದು ಹೇಳುವಾಗ ಅವಳಿಗೆ ಹೇಗಾಗಬೇಕು? ಈಗ ರೈಲಿನಲ್ಲಿ ಪ್ರಯಾಣ ಮಾಡುತ್ತಿರುವಾಗಲೇ ಸೆರಗನ್ನು ಪೂರಾ ಹೊದ್ದುಕೊಂಡು, ಮೈಯನ್ನೆಲ್ಲಾ ಮುದುರಿಕೊಂಡು ಕುಳಿತಿದ್ದಾಳೆ. ನಾಳೆ ಬೊಂಬಾಯಿನಲ್ಲಿ ಯಾರೋ ಬೀದಿಯಲ್ಲಿ ಹೋಗುವವನು ಬಂದು, ಎರಡು ಕಾಸೆಸೆದು, ದೇಹವನ್ನೆಲ್ಲಾ ಮುಟ್ಟುವಾಗ ಅವಳಿಗೆ ಹೇಗಾಗಬೇಕು?

ಭೂಲೋಕದಲ್ಲಿ ವ್ಯಭಿಚಾರ ಮಾಡಿದ ಹೆಂಗಸರಿಗೆ ನರಕದಲ್ಲಿ ಹೀಗಾಗುತ್ತದೆ, ಹಾಗಾಗುತ್ತದೆ ಎಂದು ಗರುಡಪುರಾಣದಲ್ಲಿ ಬರೆದಿದೆಯಂತೆ! ಕಾದ ಕಬ್ಬಿಣದಲ್ಲಿ ಮಾಡಲ್ಪಟ್ಟ ಪುರುಷರು ವ್ಯಭಿಚಾರಿಣಿಯರನ್ನು ಆಲಂಗಿಸಿ ಕೊಡುತ್ತಾರಂತೆ. ಹೆಂಗಸರು ಕೈ ತಪ್ಪಿ ಹೋಗುತ್ತಾರೆಂದು ಹೆದರಿಸಲು ಗಂಡಸರು ಬರೆದಿಟ್ಟಿರುವ ಆ ಪುರಾಣಗಳು ಎಷ್ಟು ನಿಜವೋ ಹೇಳಲಾಗುವುದಿಲ್ಲ.

ಆದರೆ ಒಂದಂತೂ ನಿಜ. ಯಾವನೋ ಬಂದು ಕೂಡುವಾಗ ಆ ಕರಿಯ ಹುಡುಗಿಗೆ ಹಾಗೆ ಆಗಿಯೇ ಆಗುತ್ತದೆ-ಎಂದು ಶಂಕರನಿಗೆ ತೋರುತ್ತಿತ್ತು.

ಪತಿತಳಾಗಿ ಹೋಗುತ್ತಿರುವ ಆ ಹುಡುಗಿಯನ್ನು ಉಳಿಸಲು ಅವನು ಎಷ್ಟು ತ್ಯಾಗವನ್ನು ಬೇಕಾದರೂ ಮಾಡಲು ತಯಾರಾಗಿದ್ದ.

ಹತ್ತುಗಂಟೆಯ ಸುಮಾರಿಗೆ ಗಾಡಿಯು ಹುಬ್ಬಳ್ಳಿ ಸ್ಟೇಷನ್ನಿಗೆ ಬಂದಿತು. ಊಟ ಮಾಡಿದ ಮೇಲೂ ರೈಲು ಹೊರಡಲು ಬೇಕಾದಷ್ಟು ಹೊತ್ತಿತ್ತು. ವಾಸುದೇವನೂ ಶಂಕರೂ ಫ್ಲಾಟ್‌ಫಾರಂನಲ್ಲಿ ಹಾಕಿದ್ದ ಬೆಂಚೊಂದರ ಮೇಲೆ ಕುಳಿತು ಸಿಗರೇಟು ಸೇದುತ್ತಿದ್ದರು.

ಆಗ ಶಂಕರ ಕೇಳಿದ.

"ಏನು ವಾಸುದೇವರಾವ್. ಇವರೆಲ್ಲರೂ ಬೊಂಬಾಯಿಗೆ ಹೋಗುತ್ತಿದ್ದಾರೆಯಲ್ಲ. ಅಲ್ಲಿ ಮಾತ್ರವೇ ಏನು ಈ ವ್ಯಾಪಾರ ನಡೆಯುವುದು?"

ವಾಸುದೇವ್ ನಕ್ಕು ಉತ್ತರ ಹೇಳಿದ.

"ಅಲ್ಲಿ ಮಾತ್ರವೇ ಏಕೆ? ಎಲ್ಲಾ ಕಡೆಗಳಲ್ಲಿಯೂ ನಡೆಯುತ್ತದೆ. ನಿಮ್ಮ ಬೆಂಗಳೂರಿನಲ್ಲಿಯೂ ನಡೆಯುತ್ತದೆ."

"ನಮ್ಮ ಬೆಂಗಳೂರಿನಲ್ಲಿ ನಡೆಯುತ್ತದೆಯೇ?"

"ನಡೆಯುದೇ ಏನು ? ಬೇಕಾದ ಹಾಗೆ ನಡೆಯುತ್ತದೆ."

"ನನಗೆಲ್ಲಿಯೂ ಕಣ್ಣಿಗೆ ಬೀಳಲೇ ಇಲ್ಲವಲ್ಲ?"

ಒಂದು ಗಳಿಗೆ ತಡೆದು ವಾಸುದೇವ್ ಪ್ರಶ್ನಿಸಿದ.

"ಅದಿರಲಿ, ನೀವು ಈಗ ಕೆಲವು ದಿನಗಳಿಂದ ಬೆಳಗಾವಿನಲ್ಲಿದ್ದೀರಲ್ಲಾ. ಅಲ್ಲಿ ಇಂತಹವರಿರುವುದು ಗೊತ್ತೊ?"

"ಇದ್ದಾರೆಂದು ಕೆಲವರು ಹೇಳಿದುದನ್ನು ಕೇಳಿದ್ದೇನೆ. ನಾನೆಂದೂ ನೋಡಿಲ್ಲ."

ಶಂಕರ ಹೇಳುತ್ತಿರುವುದು ಸುಳ್ಳೆಂದು ಅವನ ಗೆಳೆಯನಿಗೆ ತೋರಿತು. "ನೋಡಿದ್ದಾನೆ. ಎಂದೂ ಹೋಗಿಲ್ಲ. ಹೋಗಲು ಆಸೆ. ತನ್ನ ಮುಖಾಂತರ ಹೋಗಬೇಕೆಂದು ಪ್ಲಾನ್ ಮಾಡುತ್ತಿದ್ದಾನೆ" ಎಂದುಕೊಂಡ.

"ನೀವು ಸುಳ್ಳು ಹೇಳುತ್ತಿದ್ದೀರಿ. ಬೆಳಗಾಂನಲ್ಲಿದ್ದು ಸೂಳೆಯರನ್ನು ನೋಡಿಲ್ಲವೆಂದು ಹೇಳಿದರೆ ನಂಬುವುದು ಹೇಗೆ?"

"ದೇವರಾಣೆ. ನಾನು ಸುಳ್ಳು ಹೇಳುತ್ತಿಲ್ಲ."

"ಆಣೆ ಇಡಬೇಡಿರೆಂದು ನಾನು ಮೊದಲೇ ಹೇಳಿದ್ದೇನೆ. ದಕ್ಷಿಣ ಕನ್ನಡದಿಂದ ಬೊಂಬಾಯಿಗೆ ಹೋಗುವ ಹುಡುಗಿಯರಿಗೆ ಬೆಳಗಾವಿಯು ಒಂದು ಹಾಲ್ಟಿಂಗ್ ಸ್ಟೇಷನ್."

"ಹಾಗೆಂದರೆ................

"ಹುಡುಗಿಯರು ಬೊಂಬಾಯಿಯಲ್ಲಿ ಹೋಗಿ ನಿಂತುಕೊಂಡರೆ ಯಾರೂ ಬಂದು ಹಣ ಕೊಟ್ಟುಬಿಡುವುದಿಲ್ಲ. ಅಲ್ಲಿಗೆ ಹೋಗುವ ಮೊದಲು ಮಾಡಿಕೊಳ್ಳಬೇಕಾದ್ದು ಎಷ್ಟೋ ಇದೆ. ಬಟ್ಟೆಬರೆ ಮಾಡಿಕೊಳ್ಳಬೇಕು. ಸಾಧ್ಯವಾದರೆ ಒಂದೆರಡು ಒಡವೆಗಳಿದ್ದರೂ ಒಳ್ಳೆಯದು. ಮನೆಗಿನೆ ಮಾಡಿಕೊಳ್ಳಲು, ಒಂದೆರಡು ತಿಂಗಳುಗಳಾಗುವಷ್ಟು, ಕಾಸುಮಾಡಿಕೊಳ್ಳಬೇಕು. ಮೈಸೂರು, ಬೆಂಗಳೂರು, ಕಡೆಯಲ್ಲಿ ಬೆಳಗಾವಿನಲ್ಲಿದ್ದು ಸಾಧ್ಯವಾದಷ್ಟು ಕಾಸು ಉಳಿಸಿಕೊಂಡು ಬೊಂಬಾಯಿಗೆ ಹೋಗುತ್ತಾರೆ"

ಶಂಕರನು ಇನ್ನೇನೂ ಕೇಳಲಿಲ್ಲ. ಕೇಳಲಿಲ್ಲವೆಂದು ವಾಸುದೇವನೂ ಹೇಳಲಿಲ್ಲ. ಸ್ವಲ್ಪ ಹೊತ್ತು ತಡೆದು ಶಂಕರನೇ ಮಾತನಾಡಿದ.

"ನೀವು ತಪ್ಪುತಿಳಿದುಕೊಳ್ಳದಿದ್ದರೆ ನಾನೊಂದು ಮಾತು ಕೇಳುತ್ತೇನೆ"

"ನಾನು ತಪ್ಪುತಿಳಿದುಕೊಳ್ಳುವುದೇ ಇಲ್ಲ. ಪೀಠಿಕೆ ಬೇಡ. ಮಾತನಾಡು"

"ನೀವೂ ಬೆಳಗಾಂಗೆ ಬರುವುದಾಗಿ ಹೇಳಿದಿರಲ್ಲವೇ ?"

"ಹೌದು. ಅಲ್ಲಿ ಕೆಲದಿನಗಳಿರಬೇಕೆಂದೇ ಬರುತ್ತಿದ್ದೇನೆ."

"ನೀವು ಹೇಳುವುದನ್ನು ಕೇಳಿದರೆ ಅವರ ಮನೆಗಳು ಹೇಗಿರುತ್ತವೆಯೋ, ಅವರುಗಳು ಹೇಗಿರುತ್ತಾರೆಯೋ ನೋಡಬೇಕೆನ್ನಿಸುತ್ತದೆ."

"ಅಷ್ಟೇ ತಾನೆ. ಅದಕ್ಕೇನು ಆಗಬಹುದು, ದೊರೆ."

ಶಂಕರ ಸುಮ್ಮನೇ ಇದ್ದ.

"ಬೆಂಗಳೂರಿನಲ್ಲಿ ನೀನು ಎಲ್ಲಿರುವುದು?"

"ಹಾಸ್ಟಲಿನಲ್ಲಿ."

"ಅದು ಬೇಡ. ನನ್ನೊಂದಿಗೆ ಬಂದು ಎರಡು ದಿನ ಹೋಟಲಿನಲ್ಲಿರು."

ರೈಲುಗಾಡಿಯ ಕಡೆಗೆ ಹೋಗುತ್ತಾ ವಾಸುದೇವ ಹೇಳಿದ.

ಗೆಳೆಯ ಕಡೆಯ ಮಾತುಗಳನ್ನು ಏಕವಚನದಲ್ಲಿ ಹೇಳಿದನಲ್ಲಾ ಎಂದು ಶಂಕರ ಯೋಚಿಸಿದ.

ಪರಿಚಯವಾದ ಎರಡು ಗಂಟೆಗಳಿಗೆಲ್ಲಾ ವಾಸುದೇವ್ ಏಕವಚನ ಪ್ರಯೋಗ ಮಾಡುತ್ತಾನೆಂಬುದು ಅವನಿಗೆ ತಿಳಿದಿರಲಿಲ್ಲ.

೨

ಬೆಳಗಾಂನಲ್ಲಿ ರೈಲು ನಿಂತಾಗ ಸಾಯಂಕಾಲ.

ವಾಸುದೇವ್ ನೇರವಾಗಿ ಹೊರಗೆ ಬಂದ. ಬರುತ್ತಿದ್ದ ಹಾಗೆಯೇ ಒಂದಿಬ್ಬರು ಟಾಂಗಾದವರು ಬಂದು ಅವನನ್ನು ಸ್ವಾಗತಿಸಿದರು. ಅದರಲ್ಲಿ ಒಬ್ಬನು ಮುಂದೆ ಬಂದು ಕೂಲಿಯನ್ನು ತನ್ನ ಗಾಡಿಗೆ ಕರೆದುಕೊಂಡು ಹೋಗಿ, ಸಾಮಾನುಗಳನ್ನಿಡಿಸಿ ಕುಳಿತುಕೊಳ್ಳಲು ಹೇಳಿದ.

ಸಾಧಾರಣವಾಗಿ ಶಂಕರ ಬೆಳಗಾಂನಲ್ಲಿ ರೈಲಿಳಿದು ಹೋಗುವಾಗ ಟಾಂಗಾ ಸ್ಟ್ಯಾಂಡಿನ ಬಳಿಗೆ ಹೋಗಿ ನಾಲ್ಕೈದು ಮಂದಿಯೊಡನೆ ಚೌಕಾಸೀ ಮಾಡಿ ಕಡಿಮೆ ಬಾಡಿಗೆಗೆ ಬರುವ ಗಾಡಿಯಲ್ಲಿ ಕುಳಿತು ಹೋಗುತ್ತಿದ್ದ.

ಈಗ ಅವೆಲ್ಲವೂ ಭಿನ್ನ. ಬಾಡಿಗೆ ಮಾತನಾಡಲಿಲ್ಲ. ಗಾಡಿಯಲ್ಲಿ ಕುಳಿತುಕೊಂಡನಂತರ ಟಾಂಗಾವಾಲಾ ಎಲ್ಲಿಗೆ ಎಂದು ಕೇಳಲಿಲ್ಲ. ರಾಯರನ್ನು ಎಲ್ಲಿ ಬಿಡಬೇಕೆಂಬುದು ಗಾಡಿಯವನಿಗೆ ಗೊತ್ತಿತ್ತೋ ಏನೋ?

ನೇರವಾಗಿ ಗಾಡೀ ಹೊಡೆದುಕೊಂಡು ಹೊರಟ. ಅದು ಖಡೇ ಬಜಾರಿನ ಹಿಂದುಗಡೆ ಇತ್ತಕಡೆ ಯಾವುಯಾವೋ ಗಲ್ಲಿಗಳಲ್ಲಿ ನಡೆದು ಹೋಯಿತು. ಶಂಕರ ಈ ಗಲ್ಲಿಗಳಲ್ಲಿ ಹೆಚ್ಚಾಗಿ ಓಡಿಯಾಡಿರಲಿಲ್ಲ. ಅದಾವುದೆಂದು ಅವನಿಗೆ ತಿಳಿಯದು.

ಅಂತೂ ಗಾಡೀ ನಿಂತಾಗ ದೂರದಲ್ಲಿ ಎಲ್ಲೋ ಕೃಷ್ಣ ಸಿನಿಮಾದ

ಮೇಲುಭಾಗ ಕಂಡುಬರುತ್ತಿತ್ತು. ಅಂತೂ ತಾವು ಬಂದಿರುವುದು ಕೃಷ್ಣ ಸಿನಿಮಾದ ಬಳಿ ಎಂದುಕೊಂಡ ಶಂಕರ.

ಹೋಟಲಿಗೆ ಬೋರ್ಡ್ ಇರಲಿಲ್ಲ. ಅಲ್ಲಿ ಗಲಾಟೆ ಇರಲಿಲ್ಲ. ಗಾಡೀ ನಿಂತು ಕೆಳಗಿಳಿದು ಹೋಗುತ್ತಲೇ ಯಾರೂ ಬಂದು ಎದುರುಗೊಳ್ಳಲಿಲ್ಲ.

ಆದರೂ ವಾಸುದೇವ ಸಾಮಾನುಗಳನ್ನು ಮುಂದುಗಡೆಯ ಹಜಾರದಲ್ಲಿರಿಸಿ, ಅಲ್ಲಿ ಹಾಕಿದ್ದ ಕುರ್ಚಿಗಳ ಮೇಲೆ ಕುಳಿತ. ಶಂಕರನೂ ಅವನೊಂದಿಗೆ ಕುಳಿತುಕೊಂಡ.

ಸುಮಾರು ಹತ್ತು ನಿಮಿಷಗಳಲ್ಲಿ ಇಪ್ಪತ್ತು, ಇಪ್ಪತ್ತೆರಡು ವರ್ಷದ ಹುಡುಗ ಥರ್ಮಾಫ್ಲಾಸ್ಕಿನಲ್ಲಿ ಕಾಫಿಯನ್ನೋ ಚಹವನ್ನೋ ತೆಗೆದುಕೊಂಡು ಬಂದ.

ಬಂದವನೇ ವಾಸುದೇವನನ್ನು ನೋಡಿ ಹೇಳಿದ.

"ರಾಯರು ಇಳಿದುಬಿಟ್ಟಿದ್ದಾರೆ."

"ಇಳಿದಿದ್ದಾರೆ. ಈಗ ಹತ್ತಬೇಕಾಗಿದೆ. ಮಹಡೀ ಮೇಲೆ ನಮ್ಮ ಮಾಮೂಲು ರೂಂ ಬಾಗಲು ತೆಗೆ. ಅವರ ಪಕ್ಕದಲ್ಲಿ ಯಾರಾದರೂ ಇದ್ದರೆ ಅವರನ್ನು ಖಾಲೀ ಮಾಡಿಸಿ ಬೇರೇ ರೂಂಗೆ ಹಾಕು."

"ಅದೇನು ಬೇಕಾಗಿಲ್ಲ. ನಿಮ್ಮ ರೂಮುಗಳೆರಡೂ ಖಾಲಿಯಾಗಿಯೇ ಇದೆ."

ಉತ್ತರವನ್ನು ಸಹ ನಿರೀಕ್ಷಿಸದೇ ಅವನು ಹೊರಟುಹೋದ. ಐದು ನಿಮಿಷವಾಯಿತು. ಬರಲಿಲ್ಲ. ರೂಮಿಗೆ ಕಾಫಿ ಕೊಟ್ಟು ಬರಲು ಯಾಕೆ ಇಷ್ಟು ನಿಧಾನ.

ವಾಸುದೇವನಲ್ಲಿ ಹೋಟಲು ಮಾಣಿಗೆ ತಾತ್ಸಾರವೇ ?

ಮಾಣಿ ಬಂದ. ಅಭ್ಯಾಗತರಿಬ್ಬರನ್ನು ಮಹಡಿಯ ಮೇಲೆ ಕರೆದುಕೊಂಡು ಹೋದ. ಒಂದು ಕಡೆಯಲ್ಲಿ ಸಾಲಾಗಿ ಕೋಣೆಗಳು. ಮತ್ತೊಂದು ಕಡೆ ಹೋದರೆ ಸಣ್ಣ ವರಾಂಡ. ಅಲ್ಲಿ ಒಂದು ಮೇಜು ಹಾಕಿ ವಾಸ್‌ನಲ್ಲಿ ಪುಷ್ಪಗುಚ್ಛಗಳನ್ನು ಇಡಲಾಗಿದೆ ಅಲ್ಲಿ ಕುಳಿತುಕೊಳ್ಳಲು ಕುರ್ಚಿ ಮುಂತಾದುವುಗಳೇನೂ ಇರಲಿಲ್ಲ.

ಅಲ್ಲೊಂದು ಕೋಣೆ. ಹೋಟಲು ಹುಡುಗ ಹೋಗಿ ಬಾಗಿಲು ತೆರೆದ.

ದೊಡ್ಡ ಕೋಣೆ. ಸೊಗಸಾದ ಎರಡು ಮಂಚಗಳು. ಅವುಗಳ ಮೇಲೆ ಒಳ್ಳೆಯ ಹಾಸಿಗೆಗಳು. ಮಾಮೂಲಾಗಿ ಮುಖ ನೋಡಿಕೊಳ್ಳಲು ಕನ್ನಡಿ. ಬಾಚಣಿಗೆ, ಹೇರ್ ಆಯಿಲ್, ಸ್ನೋಗಳು ಕೈಗೆಸಿಕ್ಕುವಂತಿಡಲು ಕನ್ನಡಿಗೆ ಸೇರಿದಂತೆಯೇ ಮೇಜು. ಬಂದವರಿಗೆ ಅಥವಾ ಇರುವವರಿಗೇನೋ ಕುಳಿತುಕೊಳ್ಳಲು ನಾಲ್ಕು ಕುರ್ಚಿಗಳು.

ವಾಸುದೇವ್ ಮಂಚವೊಂದರಮೇಲೆ ಕುಳಿತು ಸಿಗರೇಟು ಹಚ್ಚಿಕೊಂಡು ಸೇದಿದ.

"ಪಕ್ಕದ ಕೋಣೆ——?"

"ಖಾಲಿಯಾಗಿಯೇ ಇದೆ, ಸ್ವಾಮಿ. ಬಾಗಿಲು ಸರಿಸಬೇಕಷ್ಟೇ"

ಮಾಣಿ ಬಾಗಿಲು ತೆಗೆದು ತೋರಿಸಿದ. ಅದು ಇದಕ್ಕಿಂತ ಸಣ್ಣ ಕೋಣೆ. ಸಾಧಾರಣವಾದ ಕೋಣೆ. ಅಲ್ಲಿಯೂ ಸಹ ಹಾಸಿಗೆಗಳನ್ನು ಹಾಸಿದ ಎರಡು ಮಂಚಗಳಿದ್ದವು.

ತೆರೆದ ಬಾಗಿಲನ್ನು ಹಾಗೆಯೇ ಬಿಟ್ಟು ಹುಡುಗ ಕೋಣೆಯಿಂದ ಹೊರಗೆ ಹೋದ.

ಸೊಗಸಾದ ಕೋಣೆ ವಿಶಾಲವಾಗಿದೆ. ಎರಡು ಮಂಚಗಳಿವೆ. ಇರುವವರು ಇಬ್ಬರೇ. ಇನ್ನೊಂದು ಕೋಣೆಯೇಕೆ?

ತಾನೂ ಇನ್ನೊಂದು ಮಂಚದ ಮೇಲೆ ಕುಳಿತು, ಸಿಗರೇಟು ಹಚ್ಚಿಕೊಂಡಿದ್ದ ಶಂಕರ "ಇನ್ನೊಂದು ಯಾಕೆ"ಂದು ವಿಚಾರಿಸಲಿಲ್ಲ.

ಹುಡುಗ ಎರಡು ಬಾರಿ ಕೆಳಗೆ ಹೋಗಿ ಸಾಮಾನುಗಳನ್ನು ತಂದಿಟ್ಟು ಹೇಳಿದ.

"ನೀವೇನು ಸ್ನಾನ ಮಾಡುತ್ತೀರೋ ಇಲ್ಲವೋ. ನಾನು ನೀರು ಕಾಸುವಂತೆ ಶ್ಯಾಮ್ಯಾಗೆ ಹೇಳಿಯಾಯಿತು.

ವಾಸುದೇವನ ಮಾಮೂಲಿಯನ್ನು ಅನುಸರಿಸಿ ಸಂಜೆಯ ಹೊತ್ತಾದರೂ ಸ್ನಾನಕ್ಕೆ ನೀರು ಸಿದ್ಧಮಾಡಲು ಮಾಣಿ ಹೇಳಿದ್ದ.

"ನೀನು ಮಾಡಿದ ಏರ್ಪಾಟಿಗೆ ಮರುಮಾತನಾಡಿದವರುಂಟೆ? ನನ್ನ ಹತ್ತಿರವೇನಾದರೂ ದುಡ್ಡಿದ್ದರೆ ನಿನ್ನ ಕೈಲಿ ಹೋಟಲು ಇಡಿಸುತ್ತಿದ್ದೆ"

"ಹೋಗೀ, ಸ್ವಾಮಿ. ನಿಮ್ಮದು ಬರೀ ಮಾತು"

ಬರೀ ಮಾತೇ ಆಗಿದ್ದರೂ ಆ ಮಾತು ಮಾಣಿಯ ಮನಸ್ಸಿಗೆ ಪ್ರಿಯ ವಾಗಿತ್ತು. "ಹಣವಿದಿದ್ದರೆ ಅದೂ ಮಾಡುವ ಆಸಾಮಿಯೇ ಇವನು" ಎಂದುಕೊಂಡು ಹೊರಗೆ ಹೊರಟ. ಹೋಗುತ್ತಿದ್ದವನನ್ನು ಕರೆದು ವಾಸು ಹೇಳಿದ.

"ಮೊದಲು ಎರಡು ಫಸ್ಟ್‌ಕ್ಲಾಸ್ ಚಹಾ ಬರಲಿ. ಇಲ್ಲಿಂದ ನಿಮ್ಮ ಹೋಟಲಿಗೊಂದು ಮೈಲಿ ಓಡಬೇಡ. ಪಕ್ಕದಲ್ಲಿರುವ ಚಹಾ ಅಂಗಡಿಯ ವನಿಗೆ ಹೇಳು. ಅವನನ್ನೇ ಕ್ಷೌರಕ್ಕೆ ಸ್ವಲ್ಪ ಬಿಸಿನೀರು ತರುವಂತೆ ಹೇಳು."

"ನಿಮ್ಮ ಹೋಟಲು——'' ಎಂದರೆನೋ ಶಂಕರನಿಗೆ ಅರ್ಥವಾಗಲಿಲ್ಲ. ಸುಮ್ಮನೆ ಕುಳಿತು ಬೇಜಾರಾಗಿ "ಹಾಗೆಂದರೇನು" ಎಂಬುದಾಗಿ ಕೇಳಿದ.

"ಇಲ್ಲಿ ಬಜಾರಿನಲ್ಲಿ ದೊಡ್ಡ ಹೋಟಲಿದೆಯಲ್ಲಾ. ಆತನದೇ ಈ ಹೋಟಲು. ಗಿರಾಕಿಗಳು ಕಾಫೀತಿಂಡಿ ಊಟಗಳನ್ನು ಕೇಳಿದರೆ ಆ ದೊಡ್ಡ ಹೋಟಲಿಗೆ ಹೋಗಿ ತಂದುಕೊಡಬೇಕೆಂದು ಯಜಮಾನನ ಅಪ್ಪಣೆ. ಚಹಾಗೆ ಹೇಳಿದರೆ ಬರುವುದು ಗಂಟೆಯಾಗುವುದು. ಅದರಿಂದ ನಾನು ಪಕ್ಕದ ಹೋಟಲಿಂದಲೇ ತರಿಸುವುದು."

ಆ ದೊಡ್ಡ ಹೋಟಲನ್ನು ಶಂಕರನು ನೋಡಿದ್ದ. ಅಂತಹ ಹೋಟಲಿಟ್ಟಿರುವವನು ಈ ಹೋಟಲನ್ನು ಯಾಕೆ ಹೀಗಿಟ್ಟಿದ್ದಾನೆ?

"ಅಲ್ಲ, ಇದನ್ನೇಕೆ ಹೀಗಿಟ್ಟಿದ್ದಾನೆ"

"ಇಲ್ಲಿ ಹೋಟಲನ್ನು ಕುದಿರಿಸುತ್ತಿದ್ದಾನೆ. ಬಾಡಿಗೆ ಮಾತ್ರ ಖರ್ಚು. ಅದೂ ಬಂದುಹೋಗುವ ಗಿರಾಕಿಗಳು ಕೊಡುವ ರೂಂ ರೆಂಟಿನಿಂದ ಗಿಟ್ಟಿ ಹೋಗುತ್ತದೆ. ಅಲ್ಲಿಯೇ ಕೆಲಸಮಾಡುತ್ತಿದ್ದ ಹುಡುಗನೊಬ್ಬನನ್ನು ಹಾಕಿದ್ದಾನೆ. ಇದಕ್ಕೂ ಸರಿಯಾಗಿ ಗಿರಾಕಿ ಸಿಕ್ಕಿದರೆ ಇದನ್ನು ಸರಿಯಾದ ಹೋಟಲು ಮಾಡುತ್ತಾನೆ. ಅದಾಗುವ ಹೊತ್ತಿಗೆ ನಾನು ಬೇರೇ ಹೋಟಲು ನೋಡಿಕೊಳ್ಳಬೇಕು."

"ಅದೇಕೆ..................?"

"ಜನ ಹೆಚ್ಚಾಗಿರುವ ಕಡೆ ನನ್ನಂತಹವರು ಇರಬಾರದು. ಸಿಕ್ಕಿದವರ ಬಾಯಿಗೇಕೆ ಸಿಕ್ಕಬೇಕು, ನಾವು."

ಪಕ್ಕದ ಚಹಾ ಅಂಗಡಿ ತುರುಕರವನದು. ಬೋಳುತಲೆಯ ಕಾಕಾ ಹುಡುಗ ಎರಡು ಕಪ್ಪುಗಳಲ್ಲಿ ಚಹಾ ತಂದ.

ವಾಸು ಸಾಸರು, ಕಪ್ಪುಗಳನ್ನು ತೆಗೆದುಕೊಂಡು ಗುಟುಕು ಕುಡಿದು, ನೋಡಿದ. ಚಹಾ ಚೆನ್ನಾಗಿತ್ತು.

"ಸರಿ, ಬಿಸಿನೀರಿಗೆ ಹೇಳಿತ್ತಲ್ಲಾ, ಎಲ್ಲೋ."

ಕನ್ನಡ ದೇಶದಲ್ಲಿದ್ದರೂ "ಕೊಂಡೊರೆ, ಸಾರ್" ಎಂದು ಅರವದಲ್ಲಿ ಹೇಳಿ, ಅವನು ನೋಡಿದ.

ಚಹ ಕುಡಿದು ಮುಗಿಸುವುದರಲ್ಲಿ ಬಿಸಿ ನೀರು ಬಂದಿತು.

"ಎದ್ದು ಗಡ್ಡಾ ಕೆರೆದುಕೊಳ್ಳುತ್ತೀಯಾ?"

ಶಂಕರ ಸಾಯಂಕಾಲದ ಹೊತ್ತು ಮುಖಕ್ಷೌರ ಮಾಡಿಕೊಳ್ಳುವಷ್ಟು ಮುಟ್ಟಿನ ನಾಗರಿಕನಾಗಿರಲಿಲ್ಲ.

"ಸಾಯಂಕಾಲದ ಹೊತ್ತು........?"

"ಅದಕ್ಕೇನು? ಸೆವೆ ಓ ಕ್ಲಾಕ್ ಬ್ಲೇಡನ್ನು ತಯಾರು ಮಾಡಿರುವುದೇ ಸೆವೆ ಓ ಕ್ಲಾಕ್‌ಗಳನ್ನೆಲ್ಲಾ ಕ್ಷೌರ ಮಾಡಿಕೊಳ್ಳುವುದಕ್ಕೆ."

ಶಂಕರನೇನೂ ಮಾತನಾಡಲಿಲ್ಲ.

ವಾಸು ಮುಖದ ಅರ್ಧ ಭಾಗಕ್ಕೆಲ್ಲಾ ಸೋಪು ಹಚ್ಚಿಕೊಂಡು ಬ್ರಷ್‌ನಿಂದ ಗಡ್ಡದ ಕೆಳಭಾಗವನ್ನು ತಿಕ್ಕಿಕೊಳ್ಳುತ್ತಾ ಹೇಳಿದ.

"ಬೆಳಿಗ್ಗೆಯೂ ಕ್ಷೌರವಾಗಲಿಲ್ಲ. ಈಗಲೂ ಆಗದಿದ್ದರೆ ಹೇಗೆ?"

ವಾಸುವಿನ ದನಿಯು ಸ್ಪಷ್ಟವಾಗಿರಲಿಲ್ಲ. ಯಾಕೆಂದರೆ ಸೋಪುನೊರೆಯಿಂದ ಮುಚ್ಚಿಹೋಗಿದ್ದ. ತುಟಿಗಳು ಉರಿಯುತ್ತಿರುವ ಸಿಗರೇಟು ಹಿಡಿದಿದ್ದವು.

ಅವನ ಷೇವ್ ಮುಗಿಯುವ ವೇಳೆಗೆ ಶಂಕರನೂ ಷೇವ್ ಮಾಡಿಕೊಳ್ಳಲು ತಯಾರಿಗಿದ್ದ. ರೋಮ್‌ನಲ್ಲಿರುವಾಗ ರೋಮನ್ನರ ಹಾಗಿರಬೇಕು ಎಂದುಕೊಂಡಿದ್ದಿರಬೇಕವನು.

ಕ್ಷೌರಗಳಾದನಂತರ ಇಬ್ಬರೂ ಕೆಳಗಡೆ ಬಚ್ಚಲು ಮನೆಗೆ ಹೋಗಿ ಸ್ನಾನಮಾಡಿಕೊಂಡು ಬಂದರು.

[೪]

ಮೇಲೆ ಬಂದನಂತರ ವಾಸುದೇವ್ ಹೋಟಲಿನ ಮಾಣಿಗಾಗಿ ಕೂಗಿ ಕೊಂಡ.

ಬಂದು ನಿಂತುಕೊಂಡ ಮಾಣಿ ನಕ್ಕ.

"ಇಲ್ಲ ಸ್ವಾಮಿ. ಆಸವಗಳು ಬೇಕಾದರೆ ತಂದುಕೊಡುತ್ತೇನೆ. ತಾಜಾ ಮಾಲೂ ಸಿಕ್ಕುವುದಿಲ್ಲ."

"ಈ ಕಾಂಗ್ರೆಸ್ ಬಂದು ನಮಗೆ ಉಳಿಗಾಲವಿಲ್ಲ."

ವಾಸುದೇವ ಗೊಣಗುಟ್ಟುತ್ತಾ ಬಟ್ಟೆಗಳನ್ನು ಹಾಕಿಕೊಳ್ಳಲಾರಂಭಿಸಿದ.

ಇಬ್ಬರೂ ಹೊರಗೆ ಹೋಗುವ ವೇಳೆಗೆ ಏಳು ಏಳೂವರೆಯಾಗಿತ್ತು. ದೀಪಬೇಕೆಂದು ಕಣ್ಣಿಗನ್ನಿಸುವಷ್ಟು ಕತ್ತಲಾಗಿತ್ತು.

ಬೀದಿಯಲ್ಲಿ ಹೊರಟಾಗಲೂ ವಾಸುವಿನ ಕೈಯಲ್ಲಿ ಸಿಗರೇಟಿತ್ತು. ಶಂಕರ ಮಾತ್ರ ಎಸೆದುಬಿಟ್ಟ. ಯಾರಾದರೂ ನೋಡಿದರೆ ಏನೆಂದು ಕೊಂಡಾರು. ಅವರು ಬೆಳಗಾಂನಲ್ಲಿ ಲಾಗೆ ಓದುತ್ತಿರುವ ವಿದ್ಯಾರ್ಥಿ.

ಅವರು ಹೋಗುತ್ತಿದ್ದುದು ಇಳಿದುಕೊಂಡಿದ್ದ ಹೋಟಲಿದ್ದ ದಾರಿಯ ಲ್ಲಿಯೇ. ಎಡಗಡೆ ಹೋದರು. ಆ ದಾರಿಯಲ್ಲಿ ಅರ್ಧ ದೂರದವರೆವಿಗೆ ಹೋಗುವವರೆವಿಗೂ ಸುಮ್ಮನಿದ್ದು ಅನಂತರ ವಾಸುಹೇಳಿದ.

"ನೋಡಿದೆ ಏನಯ್ಯ!"

"ಏನು....................?"

"ನಿನಗೆ ಬಡಕೊಂಡರು. ತಲೆ ಅತ್ತಿತ್ತ ತಿರುಗಿಸಿ ಎರಡು ಕಡೆಯೂ ನೋಡಿಕೊಂಡುಬಾ. ಹುಡುಗಿಯರು ಮನೆಮುಂದೆ ಹದ್ದುಗಳಂತೆ ಕಾದು ನಿಂತಿದ್ದಾರೆ."

ಮೊದಲು ಶಂಕರ ನೋಡಿರಲಿಲ್ಲ. ಈಗ ನೋಡತೊಡಗಿದ. ಹೌದು. ಒಂದೊಂದು ಮನೆಯ ಮುಂದೆ ಹುಡುಗಿಯರು ನಿಂತುಕೊಂಡಿದ್ದಾರೆ. ಬೀದಿ ಯ ಎಂಜಲೆಲೆಗಳಿಗಾಗಿ ಕಾಯುವ ಹಸಿದ ನಾಯಿಗಳಂತೆ ನೋಡುತ್ತಿದ್ದಾರೆ.

ಒಂದು ಫರ್ಲಾಂಗಿನ ಮುಂದೆ ಹೋಗುವುದರೊಳಗಾಗಿ ಆ ಮನೆಗಳು ಮುಗಿವುವು. ಶಂಕರನಿಗೆ ಮೊದಲಿನಿಂದಲೂ ಇದು ಇಂತಹ ಬೀದಿ ಎಂಬು ದನ್ನು ಗಮನಿಸಲಿಲ್ಲವಲ್ಲಾ ಎಂದು ತೋರಿತು.

ಮೊದಲಿನಿಂದಲೂ ನೋಡಿದ್ದರೆ ಮತ್ತಿಷ್ಟು ಹುಡುಗಿಯರ ಮುಖಗಳನ್ನು ನೋಡಬಹುದಿತ್ತು.

ಆ ಬೀದಿಯನ್ನು ಬಿಟ್ಟು ಸಿಡೇ ಬಜಾರಿಗೆ ಹೋಗಿ ವಾಸುದೇವ್ ಒಂದೆರಡು ಪ್ಯಾಕ್ ಸಿಗರೇಟು ತೆಗೆದುಕೊಂಡ. ಅನಂತರ ಗೆಳೆಯನ ಮನೋಭಾವವನ್ನು ಅರಿತನೋ ಎಂಬಂತೆ ಅದೇ ಕಡೆ ನಡೆದುಬಂದನು.

ಅಷ್ಟು ಹೊತ್ತಿಗೆ ಕತ್ತಲು ಮತ್ತಷ್ಟು ಹೆಚ್ಚಾಗಿತ್ತು. ಕತ್ತಲು ಹೆಚ್ಚಾಗುತ್ತಿದ್ದಂತೆ ಆ ಮನೆಗಳಲ್ಲಿ ಸಂಭ್ರಮವೂ ಹೆಚ್ಚುತ್ತಿದ್ದ ಹಾಗಿತ್ತು.

ಈ ಬಾರಿಯಂತೂ ವಾಸುದೇವ ನಿಧಾನವಾಗಿ ತೋರಿಸಿಕೊಂಡುಬಂದ.

ಆ ದಾರಿಯಲ್ಲಿ ಅಲ್ಲಲ್ಲಿ ಒಂದೊಂದು ಮನೆ ಒಂದೊಂದು ಮನೆಯ ಮುಂದೆಯೂ ಇಬ್ಬರೋ, ಮೂವರೋ ನಾಲ್ವರೋ ನಿಂತು ಎದುರಾಗಿ ಕಾಣುತ್ತಿದ್ದರು. ಹಗಲುಹೊತ್ತು ಅವರುಗಳನ್ನು ನೋಡಿದ್ದರೆ ಹೇಗೆ ಕಂಡುಬರುತ್ತಿದ್ದರೋ ? ಅರೆಬೆಳಕಿನಲ್ಲಿ ಸಿಂಗರಿಸಿಕೊಂಡ ಅವರು ಸುಂದರಿಯರಂತೆ ಕಂಡುಬರದಿದ್ದರೂ ಮತ್ತೊಮ್ಮೆ ತಿರುಗಿ ನೋಡೋಣವೆನ್ನುವಂತಿದ್ದಿತು.

ಅಲ್ಲಿದ್ದ ಮನೆಗಳೆಲ್ಲವೂ ಒಂದೇ ಬಗೆಯವುಗಳಾಗಿದ್ದರೂ ಅವುಗಳಲ್ಲಿ ಒಂದೊಂದು ತರಹದ ವೈವಿಧ್ಯವಿದ್ದವು. ಅವುಗಳಲ್ಲಿ ಕೆಲವು ಸ್ವಾರಸ್ಯಪೂರ್ಣವಾಗಿಯೂ ಇದ್ದವು.

ಒಂದು ಮನೆಯ ಮುಂಬಾಗಿಲಿನಿಂದ ನೋಡಿದರೆ ಎದುರಿಗೆ ಭಾವಿಯ ಕಟ್ಟೆ. ಅದರ ಮುಂದೆ ಬೃಂದಾವನ. ತುಲಸಿಗೆ ಪೂಜೆಮಾಡಿ ದೀಪಗಳನ್ನಿಡಲಾಗಿತ್ತು. ಆ ದೀಪದ ಬೆಳಕಿನಲ್ಲಿ ತಾನು ಹೊರಗೆ ಕಂಡುಬರುವಂತೊಬ್ಬಳು ಕುಳಿತಿದ್ದಳು.

ಮತ್ತೊಬ್ಬಳು ಕಿಷ್ಟಕ್ಕೆಲ್ಲಾ ಹೋಗಿರಲಿಲ್ಲ. ದೀಪದ ಜ್ವಾಲೆಯು ಹೊರಗೆ ಕಂಡು ಬರದಂತೆ ಗೋಡೆಯ ಮರೆಯಲ್ಲಿ ದೀಪವಿಟ್ಟಿದ್ದಳು. ಚಾಪೆಯ ಮೇಲೆ ನಿರಾಡಂಬರದಿಂದ ಕುಳಿತಿದ್ದಳು. ದೀಪವು ಮರೆಯಲ್ಲಿದ್ದರೂ ಅವಳು ಹೊರಕ್ಕೆ ಚೆನ್ನಾಗಿ ಕಂಡುಬರುತ್ತಿದ್ದಳು.

ಬೆಲೆವೆಣ್ಣಾದರೂ ನಾಚಿಕೆಯೋ ಏನೋ ? ಅಥವಾ ನಾಚಿಕೆಯನ್ನು ಅಭಿನಯಿಸುವುದು ಗಿರಾಕಿಯನ್ನೆಳೆಯುವ ಆಕರ್ಷಣೆ ಎಂದುಕೊಂಡಿ

ದ್ದಳೋ ಏನೊ? ಮುಂಬಾಗಿಲಿಗೆ ಎದುರಾಗಿ ನಿಲುವುಗನ್ನಡಿ. ಹೊರಗೆ ಹೋಗುವವರಿಗೆ ತನ್ನ ಪ್ರತಿಬಿಂಬವು ಕಾಣುವಂತೆ ಕುಳಿತಿದ್ದಳೊಬ್ಬಳು.

ಮಗದೊಬ್ಬಳು ಬಾಗಿಲಿನಲ್ಲಿ ನಿಂತಿದ್ದಳು. ಆ ಬಾಗಿಲಿನೊಳಗಿನ ಕೋಣೆ ಇಲ್ಲ—ಹಜಾರವನ್ನು ಸೊಗಸಾಗಿ ಅಲಂಕರಿಸಲ್ಪಟ್ಟಿತ್ತು. ಪಠಗಳೂ, (ಗಾಜಿನ) ಮಣಿ ತೋರಣಗಳೂ, ಕನ್ನಡಿಗಳನ್ನು ಅಲಂಕಾರಕ್ಕೆ ಧಾರಾಳ ವಾಗಿ ಉಪಯೋಗಿಸಲಾಗಿತ್ತು. ಪುನಸ್ಸಂಧಾನದ ದಿನ ಶಯ್ಯಾಗೃಹವನ್ನು ಅಲಂಕರಿಸಿದಂತೆ ಇದ್ದುದಲ್ಲದೇ ಚಪ್ಪರಗಾಲು ಮಂಚವೂ ಅದರ ಮೇಲೆ ಹಾಸಿದ್ದ ಹಾಸಿಗೆಯೂ ಆ ದಿನವನ್ನು ನೆನಪು ಮಾಡುವಂತೆ ಇದ್ದಿತು.

ಅದನ್ನು ತೋರಿಸುತ್ತಾ ವಾಸುದೇವನೆಂದ.

"ಶಂಕರು. ಈ ಹುಡುಗಿಯ ಬಳಿ ಇರುವುದಕ್ಕಲ್ಲದಿದ್ದರೂ ಈ ಮಂಚದ ಮೇಲೆ ಸುಮ್ಮನೆ ಮಲಗುವುದಕ್ಕಾದರೂ ಕಾಸುಕೊಟ್ಟು ಒಳಗೆ ಹೋಗಬೇಕೆನ್ನಿಸುತ್ತದೆಯಲ್ಲವೆ?"

ಯಾರೂ ಪ್ರತಿ ಹೇಳಲಾರದಂತಹ ಮಾತಿಗೆ ಶಂಕರನೂ ಪ್ರತಿ ಹೇಳಲಿಲ್ಲ.

ಮುಂದಿನ ಮನೆಯು ಅದೇ ಬಗೆಯಾಗಿತ್ತು. ಆದರೆ ಕುರ್ಚಿಯ ಮೇಲೆ ಕುಳಿತು ರೇಡಿಯೋ ತಿರುಗಿಸುತ್ತಾ, ಅನ್ಯಾಸಕ್ತಳಂತೆ ಇದ್ದು, ಬೀದಿಯಲ್ಲಿ ಹೋಗುವವರನ್ನು ಕಳ್ಳನೋಟದಿಂದ ನೋಡುತ್ತಿದ್ದಳು.

ವಾಸುದೇವ ಆ ದಾರಿಯನ್ನು ದಾಟಿ ಮತ್ತೊಂದು ಸಣ್ಣ ಅಂಗಡಿ ಬೀದಿಯನ್ನು ಹಾದು, ರಾಜಮಾರ್ಗಕ್ಕೆ ಬಂದ. ಅಲ್ಲಿ ಲೋಟಸ್ ಕೆಫೆಟೇರಿಯಾ.

ಚಹಾದಲ್ಲಿಯೇ ತುಂಬಿಹೋಗಿದ್ದ ಜೆಳಗಾವದಲ್ಲಿ ವಾಸುದೇವ ಒಳ್ಳೆಯ ಕಾಫಿಗಾಗಿ ಅಲ್ಲಿಗೆ ಬರುತ್ತಿದ್ದ.

ಅಲ್ಲಿ ಕಾಫೀ ತೆಗೆದುಕೊಂಡು ಹತ್ತಿರದಲ್ಲಿಯೇ ಇದ್ದ ಸೇತುವೆಯನ್ನು ದಾಟಿ, ನಿರುದ್ದೇಶದಿಂದ ಎರಡು ಕಡೆಯೂ ಸಾಲುಮರಗಳಿಂದ ಕಗ್ಗತ್ತಲೆಯಂತಿದ್ದ ರಸ್ತೆಯಲ್ಲಿ ನಡೆದುಹೋದ.

ಅವನನ್ನು ಅನುಸರಿಸಿ ಶಂಕರನೂ ಹೋದ.

ಸುಮಾರು ಒಂದು ಒಂದೂವರೆ ಮೈಲಿಗಳಷ್ಟು ದೂರ ಅವರು ನಡೆದು

ಹೋಗಿರಬಹುದು. ಯಾರೊಬ್ಬರೂ ಮಾತನಾಡಲಿಲ್ಲ. ಬೇಜಾರಾದಾಗ ಸಿಗರೇಟು ಹಚ್ಚಿಕೊಳ್ಳುತ್ತಿದ್ದರು.

ಶಂಕರನಿಗೂ ಮಾತು ಬೇಕಾಗಿರಲಿಲ್ಲ. ಅವನು ಅಷ್ಟು ಹೊತ್ತು ನೋಡಿದುದನ್ನೇ ಮನಸ್ಸಿನಲ್ಲಿ ಮೆಲಕು ಹಾಕುತ್ತಿದ್ದ

ಆ ಮನೆಗಳ ಬಳಿ ಕೆಲವು ಸಂಸಾರಿಗಳ ಮನೆಗಳನ್ನೂ ನೋಡಿದ್ದ. ನಿಸ್ಸಂದೇಹವಾಗಿ ಅವು ಸಂಸಾರಿಗಳದೇ ಮನೆಗಳು. ಆದರೂ ಅಂತಹ ಮನೆಗಳನ್ನು ಯಾಕೆ ಇರಗೊಳಿಸುತ್ತಾರೆ? ಆದರೆ ಕರ್ನಾಟಕದ ಜನ ಮೈಸೂರಿನವರ ಹಾಗಲ್ಲ. ಒಬ್ಬರ ಕರ್ಮ ಮತ್ತೊಬ್ಬರಿಗೆ ಹತ್ತುವುದಿಲ್ಲವೆಂಬುದನ್ನು ಅವರು ಚೆನ್ನಾಗಿ ಬಲ್ಲರು.

ಅವನು ಊರಿಗೆ ಬಂದು ಬಲು ದಿನಗಳಾಗಿದ್ದುವು. ಒಂದು ವರ್ಷದಿಂದಲೂ ಲಾ ಕಾಲೇಜಿನಲ್ಲಿ ಓದುತ್ತಿದ್ದಾನೆ. ಆದರೆ ಈ ಬೀದಿಯಲ್ಲಿಯೇ ಕೆಬರಲಿಲ್ಲ? ಇದನ್ನೆಲ್ಲಾ ಯಾಕೆ ನೋಡಲಿಲ್ಲ? ಈ ಊರಿನಲ್ಲಿ ಅವನಿಗೆ ಇಷ್ಟೊಂದು ಮಂದಿ ಸ್ನೇಹಿತರಿದ್ದಾರೆ. ಯಾರೂ ಏಕೆ ಇತ್ತ ಕರೆದುಕೊಂಡು ಬರಲಿಲ್ಲ.

ಶಂಕರನೇನು ದಡ್ಡನಲ್ಲ. ಯೋಚನೆ ಮಾಡುತ್ತಲೂ ಅರ್ಥವಾಯಿತು.

ಇಷ್ಟು ದಿನಕ್ಕೆ ಈದಿನ ಇತ್ತಕಡೆ ಬಂದ. ಒಳಗೆ ಹೋಗಿ ಅವರನ್ನು ಸರಿಯಾಗಿ ನೋಡಿಕೊಂಡು ಬಂದಿದ್ದರೆ? ಒಂದೆರಡು ಮಾತುಗಳನ್ನಾಡಿಕೊಂಡು ಬಂದಿದ್ದರೆ ? ಅಷ್ಟೇ ಸಾಕಾಗಿತ್ತು. ತನಗಿನ್ನೇನೂ ಬೇಡವೆಂದುಕೊಂಡ

ಆದರೆ ವಾಸುದೇವ ಯಾಕೆ ಕರೆದುಕೊಂಡು ಹೋಗಲಿಲ್ಲ !

ಅವನ ಉದ್ದೇಶವೇನಿದೆಯೋ?

ಹಾಗೆಯೇ ಹೋಗುತ್ತಿದ್ದ ವಾಸುದೇವ ಶಂಕರನನ್ನು ನಿಲ್ಲಿಸಿ ಎಲ್ಲಿಯೋ ಹೋದ. ಎರಡು ನಿಮಿಷಗಳ ಒಳಗಾಗಿ ವಾಪ್ಸು ಬಂದು ಬಿಟ್ಟ. ಬಂದ ದಾರಿಯಲ್ಲಿಯೇ ವಾಪ್ಸು ಬಂದು ಬಲಕ್ಕೆ ತಿರುಗಿದರು. ಅಲ್ಲೊಂದು ದೊಡ್ಡ ಪೇಟೆ. ಆ ಅಂಗಡಿಗೆ ಹೋಗಿ ಮಾಲೀಕನೊಂದಿಗೆ ಏನೋ ಗುಸು ಗುಸು ಮಾತನಾಡಿಕೊಂಡು ಬಂದ.

ಕೃಷ್ಣ ಇವರುಗಳು ಬರುವುದನ್ನೇ ಕಾಯುತ್ತಿದ್ದ. ಕೂಡಲೇ ಊಟ

ತಂದಿಟ್ಟ. ಅನ್ನ ಉದುರುದುರಾಗಿತ್ತು. ಪಲ್ಯ, ಚಟ್ನಿ, ಸಾರು, ಹುಳಿ, ಮೊಸರು, ಮಜ್ಜಿಗೆ, ತುಪ್ಪಗಳನ್ನು ಬೇರೆ ಬೇರೆಯ ಬಟ್ಟಲುಗಳಲ್ಲಿಟ್ಟಿತ್ತು. ತಟ್ಟೆ, ಬಟ್ಟಲುಗಳು ಸ್ಟೈನ್‌ಲೆಸ್ ಸ್ಟೀಲಿನವು.

ಅಡಿಗೆ ರುಚಿಯಾಗಿತ್ತು. ಅದನ್ನು ತಂದಿಟ್ಟ ಬಗೆ ಅಚ್ಚುಕಟ್ಟಾಗಿತ್ತು.

ಊಟಕ್ಕೆ ಕೈಹಾಕಿದೊಡನೆಯೇ ಹೊಟ್ಟೆತುಂಬಾ ತಿನ್ನಬೇಡವೆಂದು ವಾಸುದೇವ ಶಂಕರನಿಗೆ ಎಚ್ಚರಿಕೆ ಕೊಟ್ಟಿದ್ದ.

ಭೋಜನಾ ನಂತರ ತಾಂಬೂಲ, ತದನಂತರ ಸಿಗರೇಟು!

ನಾಲ್ಕು ಪಫ್ ಎಳೆದು ವಾಸುದೇವ ಹೇಳಿದ.

"ನಡಿ, ಹೋಗೋಣ....!"

ಮಲಗಿಕೊಳ್ಳುವ ಹೊತ್ತಿನಲ್ಲಿ ಎಲ್ಲಿಗೆ ಹೋಗುವುದು?

"ಎತ್ತ ಕಡೆ, ಮಿ|| ವಾಸುದೇವ್?"

"ಹೊರಡುವಾಗ ಎಲ್ಲಿಗೆ ಎನ್ನುತ್ತೀಯಲ್ಲಾ. ಏಳು"

ಶಂಕರ ಎದ್ದು ಕೋಟು ಹಾಕಿಕೊಳ್ಳುತ್ತಿದ್ದಾಗ ವಾಸುದೇವ್ ಕೇಳಿದ.

"ನಿನ್ನ ಹತ್ತಿರ ಎಷ್ಟು ದುಡ್ಡಿದೆ?"

ಶಂಕರನ ಬಳಿ ಬೇಕಾದಷ್ಟು ದುಡ್ಡಿತ್ತು.

ಬೆಂಗಳೂರಿನಲ್ಲಿದ್ದಾಗ ಅವನಿಗೆ ಕ್ರಾಸ್ ವರ್ಡ್‌ಗಳಲ್ಲಿ ಹತ್ತು ಸಾವಿರ ರೂಪಾಯಿ ಬಂದಿತ್ತು. ಅವನ ತಂದೆ ಆನಂದರಾಯರು ತಕ್ಕಮಟ್ಟಿಗೆ ಅನುಕೂಲಸ್ಥರು. ಮಗನಿಗೆ ಬಂದ ಹಣವನ್ನು ಅವನ ಹೆಸರಿನಲ್ಲಿಯೇ ಬ್ಯಾಂಕಿನಲ್ಲಿಡಿಸಿದರು. ಬೇಸಿಗೆ ರಜಾ ಮುಗಿಸಿಕೊಂಡು ಪುನಃ ಲಾ ಓದಲು ಬೆಳಗಾಂಗೆ ಹೋಗುವ ಮಗನಿಗೆ ಇನ್ನೂರೈವತ್ತು ರೂಪಾಯಿ ಕೊಟ್ಟು ಕಳಿಸಿದ್ದರು. ಅವರಿಗೆ ತಿಳಿಯದಂತೆ ಶಂಕರನೂ ಸಹ ತನ್ನ ಹಣದಲ್ಲಿ ಐನೂರು ರೂಪಾಯಿ ತಂದಿದ್ದ.

ಅವನ ಬಳಿ ಬೇಕಾದಷ್ಟು ದುಡ್ಡಿತ್ತು.

"ಯಾಕೆ, ಏನಾದರೂ ದುಡ್ಡು ಬೇಕಾಗಿತ್ತಾ!"

"ನನಗೇನೂ ಬೇಡ. ಜೇಬಿನಲ್ಲಿ ಏನಾದರೂ ಇದ್ದರೆ ತೆಗೆದು ಪೆಟ್ಟಿಗೆಯಲ್ಲಿ ಹಾಕಿಬಾ"

ವಾಸುದೇವ ಶಂಕರನಿಗೆ ಅರ್ಥವಾಗದಂತಹ ವಿಚಿತ್ರ ವ್ಯಕ್ತಿಯಾಗಿದ್ದ.

ಆಗಾಗ ಅವನಾಡುವ ಮಾತುಗಳು ಅವನಂತೆಯೇ ಅರ್ಥವಾಗದೇ ಇರುತ್ತಿದ್ದವು.

ಯಾಕೆ ಎಂದು ಶಂಕರ ಕೇಳಲಿಲ್ಲ. ಅವನು ಹೇಳಿದಂತೆಯೇ ಮಾಡಿದ.

ಆ ಬೀದಿಯನ್ನು ಬಿಟ್ಟುಬಿಟ್ಟ. ಶನೇಶ್ವರಚಾಲ್‌ನ ಕಡೆಗೆ ಹೋದರು. ಸಂದಿಯೊಂದರಲ್ಲಿ ಎರಡು ಮನೆಗಳಿದ್ದವು. ಅದರಲ್ಲಿ ಸ್ವಲ್ಪ ದೊಡ್ಡದಾಗಿದ್ದ ಮನೆಗೆ ಶಂಕರನನ್ನೂ ಕರೆದುಕೊಂಡು ಪ್ರವೇಶ ಮಾಡಿದ.

ಆ ಮನೆಯಲ್ಲಿಯೂ ಒಂದು ರೇಡಿಯೋ ಇತ್ತು. ಅದನ್ನು ತಿರುಗಿಸುತ್ತಾ ಒಬ್ಬ ಹುಡುಗಿ ಕುಳಿತಿದ್ದಳು. ಅಲ್ಲಿಯೇ ಹಾಕಿದ್ದ ಸೋಫಾಗಳ ಮೇಲೆ ಐದಾರುಮಂದಿ ಹುಡುಗಿಯರು ರೇಡಿಯೋ ಹಾಡುತ್ತಿದ್ದ ಮೃದವಾದ ದನಿಯನ್ನು ಆಲಿಸುತ್ತಾ ಕುಳಿತಿದ್ದರು.

ಆದರೂ ಯಾರನ್ನೋ ನಿರೀಕ್ಷಿಸುತ್ತಿರುವಂತಿತ್ತು, ಅವರ ತರಹ.

ಪ್ರವೇಶಿಸುತ್ತಲೇ ಎಲ್ಲರೂ ಎದ್ದು ನಿಂತರು. ಬಂದು ಅವನನ್ನೂ ಅವನ ಗೆಳೆಯನನ್ನೂ ಮುತ್ತಿಕೊಂಡರು. ಒಬ್ಬಳು ಒಳಗೆ ಇದ್ದವಳಿಗೆ ಗೊತ್ತಾಗಲೆಂದು ಕೂಗಿದಳು. ಅಲ್ಲಿದ್ದ ಮುದುಕಿಗೆ ಅದು ಕೇಳಿಸಿತೋ ಇಲ್ಲವೋ ? ಅವಳು ಬರಲಿಲ್ಲ.

"ಎಲೇ ! ಅವ್ವಾ. ಬೆಂಗಳೂರಿನಪ್ಪ ಬಂದಿದ್ದಾನೆ"

ಇದನ್ನೆಲ್ಲಾ ನೋಡಿದ ಶಂಕರ ವಾಸುದೇವನಿಗೆ ಈ ಮನೆಯವರೆಲ್ಲಾ ಚೆನ್ನಾಗಿ ಗುರ್ತಿದ್ದಾರೆಂದುಕೊಂಡ. ಅಷ್ಟೇ ಅಲ್ಲ. ತಾನು ಆ ದಿನ ನೋಡಿದ ಇತರ ಹುಡುಗಿಯರಿಗಿಂತ ಇವರುಗಳು ಆಕರ್ಷಕವಾಗಿ ಕಂಡರು.

ವಾಸುದೇವ ಕುಳಿತುಕೊಳ್ಳುತ್ತಲೇ ಇಬ್ಬರು ಬಂದು ಎದುರಿಗೆ ನಿಂತು "ಯಾವಾಗ ಬಂದಿರಿ ?" ಎಂದು ಯೋಗಕ್ಷೇಮ ಮಾಡಿದರು.

ಇನ್ನೊಬ್ಬಳು ಪಕ್ಕದಲ್ಲಿ ಕುಳಿತುಕೊಂಡು, ಅವನ ತೊಡೆಯ ಮೇಲೆ ತೊಡೆ ಹಾಕಿ, ತುಟಿಗಳಲ್ಲಿ ಸಿಕ್ಕಿಕೊಂಡಿದ್ದ ಸಿಗರೇಟು ಕಿತ್ತುಕೊಂಡು ತಾನು ಸೇದತೊಡಗಿದಳು.

ಸಿಗರೇಟು ಹೋಯಿತೆಂದು ವಾಸುದೇವ ಖಿನ್ನನಾಗಲಿಲ್ಲ. ಹಾಗೊ

ಬ್ಬಳು ಬಂದು ಕುಳಿತು, ಸಿಗರೇಟು ಕಿತ್ತುಕೊಂಡರೆ ಯಾರಿಕೆ ತಾನೇ ಮನಸ್ಸು ಖಿನ್ನವಾಗುತ್ತದೆ ?

ಬೇರೇ ಹಚ್ಚಿಕೊಳ್ಳುವುದಕ್ಕಾಗಿ ಸಿಗರೇಟ್ ಪ್ಯಾಕ್ ತೆಗೆದ. ಆಗ ತಾನೇ ಯೋಗಕ್ಷೇಮವನ್ನು ವಿಚಾರಿಸಿದ ಹುಡುಗಿಯರು ಅದನ್ನು ಕಿತ್ತು ಕೊಳ್ಳುವುದಕ್ಕೆ ಹೋದರು. ಇತರರು ಸಿಗರೇಟಿಗಾಗಿ ಬಂದು ಮುತ್ತಿಕೊಂಡರು.

ಪ್ಯಾಕ್‌ನಲ್ಲಿ ಒಂಬತ್ತು ಸಿಗರೇಟಿದೆ. ಎಲ್ಲರೂ ಒಂದೊಂದು ತೆಗೆದು ಕೊಂಡರೆ ಉಳಿಯುವುದು ಮೂರು.

ವಾಸುದೇವ ಪ್ಯಾಕನ್ನು ಗಟ್ಟಿಯಾಗಿ ಹಿಡಿದುಕೊಂಡು ಹೇಳಿದ.

"ಹೀಗೆಲ್ಲಾ ನಿಮಗೆ ಸಿಗರೇಟು ಕೊಟ್ಟರೆ ನಾನು ಬದುಕಿದಂತೆಯೇ ಆಯಿತು ?"

ಒಬ್ಬಳು ಕೇಳಿದಳು.

"ಬದುಕುವವರು ಇಲ್ಲೇಕೆ ಬಂದಿರಿ ? ಬದುಕಿ ಬಾಳುವವರು ಇಲ್ಲಿ ಬರುವುದಿಲ್ಲ"

"ಹಾಗಲ್ಲ. ಕಾಸಿನ ಸುಖವೂ ಇಲ್ಲದೇ ಬೇಕಾರ್ ಯಾಕೆ ಖರ್ಚು ಮಾಡಬೇಕು ?"

ಮತ್ತೊಬ್ಬಳೆಂದಳು.

"ಓಹೋ ! ಸಿಗರೇಟಿಗಾಗಿ ಸುಖ ಬೇಕು ? ಅದಕ್ಕೆಷ್ಟು ಸುಖ ಸಿಕ್ಕುತ್ತದೆ ?"

"ಏನೂ ಇಲ್ಲವೆಂದರೆ ಹೇಗೆ ?"

"ನೀವೇ ಕೇಳಿರಪ್ಪಾ–ಏನು ಬೇಕೋ ?"

"ಜತೆಗೆ ಒಂದು ಮುತ್ತಾದರೂ————"

"ವಾರೆವ್ಹಾ"

"ಅದೂ ಇಲ್ಲದೇ ನಿಮಗೆಲ್ಲಾ ಸಿಗರೇಟು ಸಮಾರಾಧನೆ ಮಾಡಬೇಕೆನ್ನುತ್ತೀಯಾ ?"

"ಮುತ್ತಿಗೆ ಮುತ್ತಿನಷ್ಟೇ ಬೆಲೆ"

"ಸಿಗರೇಟಿಗೆ ಸಿಗರೇಟಿನಷ್ಟೇ ಬೆಲೆ"

"ಹಾಗಾದರೆ ಇಲ್ಲವೇನು ?"

"ಇಲ್ಲ"

ಎದುರಿಗೆ ನಿಂತಿದ್ದ ಹುಡುಗಿ ಕಣ್ಣು ಹೊಡೆದಳು. ವಾಸುದೇವನ ಹತ್ತಿರದಲ್ಲಿಯೇ ಇದ್ದ ಇಬ್ಬರು ಹುಡುಗಿಯರು ಅದರರ್ಥವನ್ನು ಗ್ರಹಿಸಿದರು.

ಇಬ್ಬರೂ ಹುಡುಗಿಯರೂ ತಮ್ಮೆರಡು ಮುಖಗಳನ್ನೂ ಅವನೆರಡು ಕೆನ್ನೆಗಳ ಬಳಿ ತಂದರು. ತುಟಿಗಳು ಕೆನ್ನೆಗಳಿಗೆ ತಗುಲಿದೊಡನೆಯೇ ವಾಸು ದೇವನಿಗೆ ಪರಮಾನಂದವಾಗಿರಬೇಕು. ಗೆದ್ದೆನೆಂದು ಸಂತೋಷವಾಗಿರಬೇಕು. ಎದುರಿಗಿದ್ದ ಹುಡುಗಿ ಅದನ್ನು ತೆಗೆದುಕೊಂಡಳು.

ಅಲ್ಲಿದ್ದವರಿಗೆ ಏನಾಯಿತೆಂದು ಗೊತ್ತಾಗುವುದರೊಳಗಾಗಿ ವಾಸುದೇವ "ಹಾ-ಹಾ" ಎಂದ.

ಇಬ್ಬರು ಹುಡುಗಿಯರೂ ಅವನೆರಡು ಕೆನ್ನೆಗಳನ್ನು ಕಚ್ಚಿಬಿಟ್ಟಿದ್ದರು.

ವಾಸುದೇವ ಕೆನ್ನೆಗಳನ್ನು ಸವರಿಕೊಳ್ಳುತ್ತಾ ಚರ್ಮದ ಮೇಲೆ ಬಿದ್ದಿದ್ದ ಹಲ್ಲುಗುರುತುಗಳನ್ನು ಮುಟ್ಟಿನೋಡಿಕೊಳ್ಳುತ್ತಿದ್ದಂತೆ ಆ ಹುಡು ಗಿಯರೆಲ್ಲಾ ಒಂದೊಂದು ಸಿಗರೇಟು ತೆಗೆದು ಹಚ್ಚಿಕೊಂಡು, ಪ್ಯಾಕ್ ಅವನ ಕಡೆಗೆ ಎಸೆದು ಪಕಪಕನೆ ನಗತೊಡಗಿದರು.

ಒಳಗಿನಿಂದ ಮುದುಕಿಯೊಬ್ಬಳು ಬರುತ್ತಾ ಕೇಳಿದಳು.

"ಇದೇನು ಸಂತೆಯೇನ್ರವ್ವಾ. ಎಷ್ಟು ಗಲಾಟೆ ಮಾಡುತ್ತೀರಿ ?"

ಬಂದವಳೇ ಎದುರಿಗೆ ಕುಳಿತಿದ್ದ ವಾಸುದೇವನನ್ನು ನೋಡಿದಳು. ಮೊದಲು ಕೇಳಿದ ಪ್ರಶ್ನೆಗೆ ಉತ್ತರವನ್ನೇ ನಿರೀಕ್ಷಿಸದೇ ಹೇಳಿದಳು.

"ಯಾವಾಗ ಬಂದೆಯಪ್ಪ. ಏನು ಗಲಾಟೆ. ಕಿವಿಯೊಡೆದು ಹೋಗು ವಂತೆ ಕೂಗಿಕೊಳ್ಳುತ್ತಿದ್ದಾರೆಯಲ್ಲಾ ಎಂದು ಬಂದು ನೋಡುತ್ತೇನೆ. ನೀನು ಬಂದಿದ್ದೀಯೇ !"

ವಾಸುದೇವ ಮುದುಕಿಯ ಮಾತನ್ನು ಗಮನಿಸಿದರೂ ಗಮನಿಸದಂತೆ ಕೆನ್ನೆಗಳ ಮೇಲೆ ಕೈಯಾಡಿಸುತ್ತಲೇ ಇದ್ದ.

"ಅಲ್ಲಪ್ಪ. ಇಷ್ಟು ಗಲಾಟೆ ಮಾಡಿಸುತ್ತಿದ್ದೀಯಲ್ಲಾ. ಬೀದಿಯಲ್ಲಿ

ಹೋಗುವ ಜನ ಏನೆಂದುಕೊಂಡಾರು ? ಮಾನ ಮರ್ಯಾದೆ ಇಲ್ಲದವರು ಎಂದು ನಮ್ಮ ಹೊಟ್ಟೆಗೆ ಮಣ್ಣು ಬಿದ್ದೀತು!"

"ಈ ಹುಡುಗಿಯರೆಲ್ಲಾ ಬಹಳ ಕೆಟ್ಟು ಹೋಗಿದ್ದಾರಮ್ಮ. ನೀನು ಇವರಿಗೆ ಬುದ್ಧಿ ಹೇಳಿ ಸರಿಮಾಡಬೇಕು."

"ಅವರನ್ನೂ ನನ್ನನ್ನೂ ಒಟ್ಟಿಗೆ ಸರಿಮಾಡಬೇಕು. ಇಷ್ಟಾದ ಮೇಲೆ ಇನ್ನು ಬುದ್ಧಿ ಬರುತ್ತದೆಯೆ?"

ಮುದುಕಿ ಉತ್ತರಕ್ಕಾಗಿ ವಾಸುದೇವನನ್ನು ನಿರೀಕ್ಷಿಸದೇ ಆ ಹುಡುಗಿಯರ ಕಡೆ ನೋಡಿ ಕೇಳಿದಳು.

"ಯಾಕ್ರೇ–ಇಷ್ಟೊಂದು ನಗುತ್ತಿದ್ದೀರಿ?"

ಅವರೆಲ್ಲಾ ಇನ್ನೂ ಮುಸಿಮುಸಿ ನಗುತ್ತಲೇ ಇದ್ದರು.

ನಗುತ್ತಲೇ ಒಬ್ಬಳು ಉತ್ತರ ಹೇಳಿದಳು.

"ಸಿಗರೇಟು ಕೇಳಿದೆವು. ಮುತ್ತು ಕೊಟ್ಟರೆ ಕೊಡುವುದಾಗಿ ಹೇಳಿದರು. ಮುತ್ತು ಕೊಟ್ಟು ಸಿಗರೇಟು ತೆಗೆದುಕೊಂಡೆವು."

"ಸಿಗರೇಟಿಗೆಲ್ಲಾ ಮುತ್ತು ಕೊಟ್ಟರೆ ನೀವು ಬದುಕಿ ಬಾಳಿದಂತೆಯೇ ಇದೆ."

ಮುದುಕಿ ಹುಡುಗಿಯರಿಗೆ ಬುದ್ಧಿ ಹೇಳಿ, ತನಗೊಂದು ಸಿಗರೇಟು ತೆಗೆದುಕೊಳ್ಳುವಂತೆ ಆಜ್ಞೆ ಮಾಡಿದಳು. ಹುಡುಗಿಯೊಬ್ಬಳು ತೆಗೆದು ಕೊಟ್ಟ ಸಿಗರೇಟು ಹಚ್ಚಿದಳು.

ಅವರುಗಳೆಲ್ಲಾ ಮಾತನಾಡುತ್ತಾ ಕುಳಿತಿದ್ದ ಹಾಗೆಯೇ ಒಬ್ಬ ಗಿರಾಕಿ ಬಂದ. ಅವನನ್ನು ಕರೆದುಕೊಂಡು ಒಬ್ಬಳು ಒಳಗೆ ಹೋದಳು. ಹತ್ತು ನಿಮಿಷದಲ್ಲಿ ಗಿರಾಕಿಯನ್ನು ಕಳಿಸಿ ಅವಳೂ ಬಂದು ಮಾತನಾಡುತ್ತಾ ಕುಳಿತಳು.

ಹಾಸ್ಯ, ಹರಟೆ, ಲೋಕಾಭಿರಾಮಗಳಲ್ಲಿ ಅರ್ಧ ಗಂಟೆಯ ಹೊತ್ತು ಕಳೆಯಿತು.

ವಾಸುದೇವ ಒಬ್ಬಳ ಹೆಗಲ ಮೇಲೆ ಕೈ ಹಾಕಿ, ಒಳಗೆ ಕರೆದುಕೊಂಡು ಹೋಗಲು ಉದ್ಯುಕ್ತನಾದ.

ಅಲ್ಲಿನ ವ್ಯವಹಾರಗಳನ್ನು ನೋಡುತ್ತಾ ಶಂಕರ ದಿಗ್ಭ್ರಾಂತನಾಗಿ ಮೌನವಾಗಿ ಕುಳಿತಿದ್ದ.

ಅಷ್ಟರಲ್ಲಿ ಏನೋ ನೆನೆಸಿಕೊಂಡು ವಾಪ್ಸು ಬಂದು ಮುದುಕಿಯೊಡನೆ ಪಿಸಪಿಸನೆ ಏನೋ ಹೇಳಿದ.

ಅವನು ಒಳಗೆ ಹೋದ ನಂತರ ಮುದುಕಿ ಮತ್ತೊಬ್ಬ ಹುಡುಗಿಯನ್ನು ಕರೆದು ಮೆಲ್ಲನೆ ಹೇಳಿದಳು.

"ವಿಮಲಿ, ಆ ಹುಡುಗ ಹೊಸಬನಂತೆ. ಕರೆದುಕೊಂಡು ಹೋಗು. ಸ್ವಲ್ಪ ಸರಿಯಾಗಿಯೇ ನೋಡಿಕೋ."

ವಿಮಲಿ ಶಂಕರನ ಬಳಿಗೆ ಬಂದು ನಿಂತುಕೊಂಡಳು. ಅವನು ಸುಮ್ಮನೆ ಕುಳಿತಿದ್ದ. ಅವನ ಕೈ ಹಿಡಿದು ಎಳೆಯುತ್ತಾ ಅಂದಳು.

"ಏಳಿ, ಬ್ರಹ್ಮಚಾರಿಗಳೇ! ಇಲ್ಲಿ ಕುಳಿತೇನು ಮಾಡುವಿರಿ?"

ಯಂತ್ರದ ಗೊಂಬೆಯಂತೆ ಶಂಕರ ಆ ಎಳೆತದಿಂದ ಎದ್ದು ನಿಂತುಕೊಂಡ. ಹೆಗಲ ಮೇಲೆ ಕೈ ಹಾಕಿ ಎಳೆದುಕೊಂಡು ಹೋದವರನ್ನು ಅನುಸರಿಸಿದ.

ಸುಮಾರು ಐದು ನಿಮಿಷಗಳಲ್ಲಿ ವಿಮಲಿ ಹೊರಗೆ ಬಂದು ನಗುತ್ತಾ ಮುದುಕಿಯೊಡನೆ ಹೇಳಿದಳು.

"ಅವರೇನು, ಕೈ ಕಟ್ಟಿಕೊಂಡು ಹಾಸಿಗೆಯ ಮೇಲೆ ಕುಳಿತುಬಿಟ್ಟಿದ್ದಾರವ್ವಾ, ಜಪ್ಪಯ್ಯಾ ಎಂದರೂ ಅಲುಗಾಡುವುದಿಲ್ಲ."

"ನೀನೇನೋ ಹೆದರಿಸಿಬಿಟ್ಟಿದ್ದೀಯೋ, ಅವನನ್ನು."

"ನಾನೇಕೆ ಹೆದರಿಸಬೇಕು. ಅವನೇ ಹೆದರಿ ಕಂಗಾಲಾಗಿ ಕುಳಿತುಬಿಟ್ಟಿದ್ದಾನೆ."

"ನಿಂದೇನೂ ತಪ್ಪಲ್ಲ. ನನ್ನದು ತಪ್ಪು. ನಾನು ನಿನಗೆ ಹೇಳಬಾರದಾಗಿತ್ತು. ನೀನಾದರೂ ಹೋಗೇ ಸರೋಜಿ. ಕಾಸು ಕೊಟ್ಟ ಗಿರಾಕಿಗೆ ಅನ್ಯಾಯ ಮಾಡಬಾರದು."

ಸರೋಜಿ ಒಳಗೆ ಹೋದಳು. ಅವಳೂ ಹತ್ತು ಹದಿನೈದು ನಿಮಿಷ ಬಿಟ್ಟುಕೊಂಡು ಹೊರಗೆ ಬಂದು ಹೇಳಿಗಳು.

"ಇಲ್ಲಿವ್ವಾ. ಬಡಿದುಕೊಂಡರೂ ಅಲ್ಲಾಡುವುದಿಲ್ಲ. ಆ ಹುಡುಗ ಹೆದರಿದೆ. ಈ ದಿನ ಅವನನ್ನು ಸುಮ್ಮನೆ ಬಿಟ್ಟುಬಿಡುವುದೇ ಒಳ್ಳೆಯದು."

ಅಷ್ಟು ಹೊತ್ತಿಗೆ ವಾಸುದೇವ ಹೊರಗೆ ಬಂದು ತನ್ನೊಡನೆ ಬಂದಿದ್ದ ಹುಡುಗಿಯ ಹೆಗಲ ಮೇಲೆ ಕೈ ಹಾಕಿಕೊಂಡು ಕುಳಿತಿದ್ದ. ಅವನು ಕೇಳಿದ.

"ಹಾಗಾದರೆ ಏನೂ ಆಗಲಿಲ್ಲವೇನು?"

ವಿಮಲಿಯೂ, ಸರೋಜಿಯೂ ತುಟಿಗಳನ್ನು ಬಿಗಿದುಕೊಂಡು ತಲೆಯಾಡಿಸಿದರು.

ಮಿಕ್ಕ ಹುಡುಗಿಯರು ಮುಸಿಮುಸಿ ನಕ್ಕರು.

ತನ್ನ ಮತ್ತೊಂದು ಪಕ್ಕದಲ್ಲಿ ಸೋಫಾದ ಮೇಲೆ ಕುಳಿತಿದ್ದ ಮುದುಕಿಯ ಬೆನ್ನು ತಟ್ಟಿ ಅವಳ ಗಮನವನ್ನು ತನ್ನ ಕಡೆಗೆ ಸೆಳೆದು, ವಾಸುದೇವ ಹೇಳಿದ.

"ಏನೂ ಆಗಲಿಲ್ಲವೆಂದರೆ ವಿಮಲಿಯನ್ನೋ ಸರೋಜಿಯನ್ನೋ ನನ್ನೊಡನೆ ಪುನಃ ಕಳಿಸಿಕೊಡಬೇಕು."

"ಕಳಿಸಿ ಕೊಡಬೇಡವೇ, ಪಾಪ. ಒಬ್ಬಳನ್ನೇ ಯಾಕೆ ಇಬ್ಬರನ್ನೂ ಕರೆದುಕೊಂಡು ಹೋಗು. ಅಲ್ಲಾ ನೀನು ಕೆಟ್ಟು ಹಾಳಾಗಿರುವುದೇ ಅಲ್ಲದೇ ಅರಿಯದ ಮಕ್ಕಳನ್ನು ಕರೆತಂದು ಹಾಳುಮಾಡುತ್ತೀಯಾ?"

ವಾಸುದೇವನ ಮೂತಿಯನ್ನು ತಿವಿಯುತ್ತಾ ಆ ಮುದುಕಿ ಹೇಳಿದಳು.

ಬಂಜೆಯಾದ ವೃದ್ಧ ವೇಶ್ಯೆಗೂ ಅರಿಯದ ಮಕ್ಕಳ ವಿಷಯದಲ್ಲಿ ಒಂದು ಬಾರಿ ಕನಿಕರವು ಬಂದಿತ್ತು.

# ೩

"ನಾನು ಸಾಧಾರಣವಾಗಿ ಇಂತಹ ಮನೆಗಳಿಗೆ ಹೋಗುವುದಿಲ್ಲ, ಹೋಗುವುದಿಲ್ಲ- ಅಂದರೆ ಹೋಗುವುದಿಲ್ಲವೆಂದಲ್ಲ. ಒಂದು ಕಾಲದಲ್ಲಿ ಆ ಮನೆಗಳು, ಆ ಹೆಣ್ಣುಗಳನ್ನು ನೆನೆಸಿಕೊಂಡರೇ ಎಷ್ಟೋ ಆನಂದವಾಗುತ್ತಿತ್ತು. ಈಗ ಅಷ್ಟು ಖುಷಿಯಾಗುವುದಿಲ್ಲ. ನಾನು ನಿನ್ನೆ ಅಲ್ಲಿಗೆ ಹೋದುದೇ ನಿನಗಾಗಿ.''

ಮಾರನೆಯ ದಿನ ಬೆಳಗಾಗ ಹೋಟಲಿನಲ್ಲಿ ಕುಳಿತುಕೊಂಡು ಚಹಾ ಕುಡಿಯುತ್ತಾ ವಾಸುದೇವ ಹೇಳಿದ.

ಶಂಕರನಿಗೆ ಮೊದಲೇ ಬಹಳ ನಾಚಿಕೆಯಾಗಿತ್ತು.

ಬೆಂಗಳೂರಪ್ಪ ಹೊರಟು ನಿಂತಿದ್ದಾನೆಂದು ಯಾವಳೋ ಹುಡುಗಿ ಹೇಳಿದಾಗ ಅವನು ತಲೆ ತಗ್ಗಿಸಿಕೊಂಡು ಕುಳಿತಿದ್ದ. ಹೊರಗೆ ಬರುವವರೆವಗೆ ಯಾರಿಗೂ ಮುಖ ತೋರಿಸದೆ ತಗ್ಗಿಸಿಕೊಂಡೇ ಇದ್ದ. ಬೀದಿಯಲ್ಲಿ ಹೊರಟ ನಂತರ ಮುಖ ತೋರಿಸದಿರಲು ಕಷ್ಟಪಡಬೇಕಾಗಿರಲಿಲ್ಲ. ಸಾಕಷ್ಟು ದೀಪಗಳಿಲ್ಲದೆ ಮುಖ ಕಾಣುವಷ್ಟು ಬೆಳಕಿರಲಿಲ್ಲ. ಹೋಟಲಿಗೆ ಬಂದವನೇ ಕೈಕಾಲು ತೊಳೆದುಕೊಂಡು ಬರುತ್ತೇನೆಂದು ಹೇಳಿ ಕೆಳಗಿಳಿದವನು ವಾಸುದೇವ ದೀಪ ವಾರಿಸಿ ಮಲಗುವವರೆವಿಗೆ ಮೇಲೆ ಹೋಗಲಿಲ್ಲ.

ಈಗ ಬೆಳಗಾಗ, ಸೂರ್ಯನು ಹುಟ್ಟಿ ಕತ್ತಲು ಕಳೆದಾಗ ಮುಖ

ತೋರಿಸದೇ ವಿಧಿ ಇರಲಿಲ್ಲ. ಚಹಾ ಕುಡಿಯುವಾಗ ಬೇರೇ ಮಾರ್ಗವೇ ಇಲ್ಲದೇ ತಲೆ ತಗ್ಗಿಸಿಕೊಂಡು ಕುಳಿತಿದ್ದ.

ತಲೆತಗ್ಗಿಸಿಕೊಂಡೇ ಉತ್ತರ ಕೊಟ್ಟ.

"ಕ್ಷಮಿಸಬೇಕು. ನನ್ನಿಂದ ನಿಮಗೆ ಬಹಳ ತೊಂದರೆಯಾಯಿತು."

"ಏನಿಲ್ಲ. ಅದೇನು ದೊಡ್ಡ ವಿಷಯ ಬಿಡಯ್ಯ"

"ನಾನು ತಪ್ಪು ಮಾಡಿದೆ. ನಿನ್ನೆ ನಾನು ನಿಮ್ಮೊಂದಿಗೆ ಬರಬಾರದಾಗಿದ್ದಿತು."

"ಹೇಳಿದೆನಲ್ಲಾ. ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳಬಾರದೆಂದು."

ಶಂಕರನ ಮುಂದೇನೂ ಮಾತನಾಡಲಿಲ್ಲ. ಬಹಳ ಹೊತ್ತು ಸುಮ್ಮನೆ ಕುಳಿತಿದ್ದ. ಅನಂತರ ಕೇಳಿದ.

"ನಿನ್ನೆಯದಿನ ರಾತ್ರಿ ಹೊರಗೆ ಹೋಗುತ್ತ ಹಣವಿದೆಯೋ ಎಂದು ಕೇಳಿದಿರಿ. ಖರ್ಚಿಗೆ ಬೇಕೇನೋ ಎಂದುಕೊಂಡೆ. ಖರ್ಚಿಗೇನೂ ತೆಗೆದುಕೊಳ್ಳಲಿಲ್ಲ. ಹಾಗಿರುವಾಗ ನಿನ್ನ ಹತ್ತಿರ ಪಣವೆಷ್ಟಿದೆ ಎಂದೇಕೆ ಕೇಳಿದಿರಿ?"

ನಕ್ಕು ವಾಸುದೇವ ಉತ್ತರ ಹೇಳಿದ.

"ಅದೇ! ರೂಮ್‌ನಲ್ಲಿದ್ದಾಗ ಹುಡುಗಿಯರು ಗಲಾಟೆಮಾಡಿ ನಿನ್ನ ಜೇಬಿನಲ್ಲಿರುವ ದುಡ್ಡೆಲ್ಲವನ್ನು ಕಿತ್ತುಕೊಳ್ಳಬಹುದೆಂಬ ಭಾವನೆಯಿಂದ ಹಣವೆಲ್ಲಾ ಪೆಟ್ಟಿಗೆಯಲ್ಲಿಟ್ಟು ಬಾ ಎಂದೆ."

"ನೀವು ದುಡ್ಡುಕೊಟ್ಟರೇನು?"

"ದುಡ್ಡು ಕೊಡದಿದ್ದರೆ ಹುಡುಗಿಯರು ಧರ್ಮಕ್ಕೆ ಸಿಕ್ಕುತ್ತಾರೆನ್ನುತ್ತೀಯೇನು? ಬರುತ್ತಾ ಮುದುಕಿಯ ಕೈಗೆ ಕೊಟ್ಟುಬಂದೆ. ಆಗಿನ್ನೂ ನೀನು ಕೋಣೆಯಲ್ಲಿಯೇ ಇದ್ದೆ."

"ಅದೂ ಸರಿ, ಈ ಹುಡುಗಿಯರೆಲ್ಲಾ ನಿಮಗೆಷ್ಟೋ ಸ್ನೇಹ; ನಿಮ್ಮನ್ನು ಕಂಡರೆ ಅವರೆಲ್ಲರೂ ಮಿಠಾಯಿ ನೋಡಿದ ಮಕ್ಕಳಂತಾಡುತ್ತಾರೆ. ಹಾಗಿರುವಾಗ ಅಲ್ಲಿಗೆ ಹೋದರೆ ಮನಸ್ಸಿಗೆ ತೃಪ್ತಿಯಾಗುವುದಿಲ್ಲವೆನ್ನುತ್ತೀರಿ."

"ನಿಜ ಹೇಳುತ್ತೇನೆ, ಕೇಳು ಶಂಕರು. ಎಷ್ಟೇ ಪರಿಚಯವಿದ್ದರೂ ಎಷ್ಟೇ ವಿಶ್ವಾಸವಿದ್ದರೂ ಇವರೆಲ್ಲರೂ ಹಣಕ್ಕಾಗಿ ಮಾಡುತ್ತಾರೆ. ಅವರಿಗೆ ಎಲ್ಲದಕ್ಕಿಂತಲೂ ಮುಖ್ಯವಾದದ್ದು ಹಣ. ಪ್ರೇಮವೆಂಬುದು ಬೇರೇ. ಅಲ್ಲಿ

ಬಡತನ ಐಶ್ವರ್ಯಗಳ ಭೇದವಿಲ್ಲ. ರೂಪಕುರೂಪಗಳ ವ್ಯತ್ಯಾಸವಿಲ್ಲ. ಶುದ್ಧ ಪ್ರೇಮವು ಸರ್ವತ್ರ ತ್ಯಾಗದಮೇಲೆ ಅವಲಂಬಿತವಾಗಿದೆ. ಪ್ರೇಮವು ಆದರ್ಶವಾದುದು. ಮಂಗಳಕರವಾದುದು. ಸುಂದರವಾದುದು. ಅಂತಹ ಪ್ರೇಮವನ್ನು ಎಲ್ಲ ಕಡೆಯೂ ಅರಸಬಾರದು."

ವಾಸುದೇವನು ಹೇಳಿದ ಮಾತುಗಳೆಲ್ಲವೂ ಶಂಕರನಿಗೆ ನಿಜವೆಂದೇ ಅನ್ನಿಸಿತು. ಎಷ್ಟೋ ಕಥೆ ಪುಸ್ತಕಗಳಲ್ಲಿ ಪ್ರೇಮದ ವಿಷಯವಾಗಿ ಹೀಗೆಲ್ಲಾ ಬರೆದಿರುವುದನ್ನವನು ಓದಿದ್ದ.

"ನಾನೀಗ ಗೋವಾಗೆ ಹೋಗಬೇಕೆಂದು ಹೊರಟಿದ್ದೆ. ನೀನು ಬೆಳಗಾಂ ಎಂದು ಹೇಳಿದೊಡನೆಯೇ ಬೆಳಗಾವಿನಲ್ಲಿ ಇಳಿದು ಹೋಗಬೇಕೆಂದು ನನ್ನ ಮನಸ್ಸು ಕುದಿಯತೊಡಗಿತು.

ಹಾಗಾದರೆ ವಾಸುದೇವ ಬಂದುದು ತಾನು ಹೇಳಿದ್ದಕ್ಕಲ್ಲ! ಅದನ್ನೂ ಅವನೇ ಹೇಳಿದ.

"ನೀನು ಹುಡುಗಿಯರನ್ನು ನೋಡಿಲ್ಲವೆಂದೆ. ನೋಡುವ ಆಸೆಯು ನಿನಗಿದೆ ಎಂದುಕೊಂಡೆ. ಅದರಿಂದ ನಾನು ಬೆಳಗಾಂನಲ್ಲಿ ಇಳಿದೆ ಎಂದು ಕೊಂಡೆಯೇನು ? ಅದೂ ಒಂದು ಕಾರಣ ಎಂದಿಟ್ಟುಕೋ. ಈ ಊರಿನಲ್ಲಿ ನನ್ನನ್ನು ಮನಸಾರ ಪ್ರೀತಿಸುವ ಒಬ್ಬಳಿದ್ದಾಳೆ. ಬೆಳಗಾಂ ಎಂಬ ಶಬ್ದ ಕಿವಿಗೆ ಬಿದ್ದ ಕೂಡಲೇ ಅವಳನ್ನು ನೋಡಬೇಕೆಂದು ಬಯಕೆಯಾಯಿತು. ಅದನ್ನು ತಡೆಯಲಾರದೇ ಲೋಂಡಾಗೆ ಟಿಕೆಟ್ಟು ತೆಗೆದುಕೊಂಡಿದ್ದರೂ ಇಳಿದುಬಿಟ್ಟೆ.

"ಮತ್ತೆ, ನೀವಿಲ್ಲಿ ಬಂದು ಒಂದು ದಿನವಾಯಿತು. ಇನ್ನೂ ಅವರನ್ನು ಹೋಗಿ ನೋಡಲೇ ಇಲ್ಲವಲ್ಲ"

"ಹೋಗದೇ ಏನು ? ನಿನ್ನೆ ಕಾಫೀ ತೆಗೆದುಕೊಂಡನಂತರ ಆ ಬೀದಿಯಲ್ಲಿ ಹೋಗಿದ್ದುದೇ ಅವಳನ್ನು ನೋಡೋಣವೆಂದು. ಅವರ ಮನೆಯ ಬೀಗ ಹಾಕಿತ್ತು. ಎಲ್ಲಿಯೋ ಸಿನಿಮಾಗೆ ಹೋಗಿರಬೇಕು"

ವಾಸುದೇವ ಪ್ರೀತಿಸುತ್ತಿರುವ ಹುಡುಗಿಯ ವಿಷಯವಾಗಿ ಶಂಕರನೇನು ಮಾತನಾಡಲು ಸಾಧ್ಯ ? ಅವನು ಸುಮ್ಮನಿದ್ದ. ಆದರೆ ವಾಸುದೇವನಿಗೆ ಅವಳ ವಿಷಯ ಮಾತನಾಡುವ ಚಪಲ ತೀರಿರಲಿಲ್ಲ.

"ಅವಳೊಬ್ಬ ಸಾರಸ್ವತರ ಹೆಣ್ಣು. ಒಳ್ಳೆಯ ಸುಂದರಿ. ಪ್ರೇಮದಲ್ಲಿ ಸೌಂದರ್ಯವು ಮುಖ್ಯವಲ್ಲ, ಎನ್ನು. ಆದರೂ ಸುಂದರಿ. ಅವಳ ತಂದೆ ರೋಗಿಷ್ಟ. ಕುಮುಟದಲ್ಲಿ ಎಲ್ಲಿಯೋ ಒಂದು ಮನೆಯಿದೆಯಂತೆ. ಹೋಟಲಿನವರಿಗೆ ಅದನ್ನು ಬಾಡಿಗೆಗೆ ಕೊಟ್ಟು ಇಲ್ಲಿ ಬಂದಿದ್ದಾರೆ. ಬಾಡಿಗೆ ಬರುವುದರಲ್ಲಿಯೇ ಜೀವನ ಸಾಗಬೇಕು. ಅವಳು ಇಲ್ಲಿ ಓದುತ್ತಿದ್ದಾಳೆ. ಓದಿ ಯಾವುದಾದರೂ ಕೆಲಸ ಕಾರ್ಯ ಮಾಡಿಕೊಂಡು ಮಾನವಾಗಿ ಬದುಕಬೇಕೆಂದಿದ್ದಾಳೆ"

ಸ್ತ್ರೀ ಪುರುಷರು ಪರಸ್ಪರ ಪ್ರೀತಿಸುತ್ತಾರೆಂದು ಶಂಕರ ಕೇಳಿದ್ದ. ಅವನು ಪ್ರೀತಿಸಲು ತಯಾರಾಗಿದ್ದ. ಆದರೆ ಪ್ರೀತಿಸುವುದಕ್ಕೊಂದು ಹೆಣ್ಣು ದೊರಕಿರಲಿಲ್ಲ. ಪರಸ್ಪರ ಪ್ರೇಮವೆಂದರೆ ಹೆಣ್ಣು ಗಂಡನ್ನು ಪ್ರೀತಿಸಬೇಕಷ್ಟೆ. ಹೆಣ್ಣು ಗಂಡನ್ನು ಪ್ರೀತಿಸುವುದರ ಅನುಭವಗಳನ್ನು ತಿಳಿದುಕೊಳ್ಳುವ ಕುತೂಹಲ ಅವನಿಗೆ.

"ನಿಮಗೂ ಅವರಿಗೂ ಪರಿಚಯವಾಗಿ ಎಷ್ಟು ದಿನವಾಯಿತು ?"

"ಸುಮಾರು ಆರುತಿಂಗಳ ಹಿಂದೆ ನಾನೀ ಊರಿಗೆ ಬಂದಿದ್ದೆ. ಆಗ ಈ ಹೋಟಲಿನಲ್ಲಿರಲಿಲ್ಲವೆನ್ನು. ಬಡೇಬಜಾರದಲ್ಲಿ ಸರಿಯಾದ ಹೋಟಲಿನಲ್ಲಿ ಇಳಿದುಕೊಂಡಿದ್ದೆ. ಈ ಊರಿನಲ್ಲಿ ಒಬ್ಬ ಮೇಡಂ ಇದ್ದಾಳೆ. ಅವಳು ಮಿಡಲ್ ಸ್ಕೂಲಿನ ಮೇಡಂ. ನನ್ನ ಪುಸ್ತಕಗಳು ಕೆಲವನ್ನು ಓದಿ ಪ್ರಭಾವಿತಳಾಗಿದ್ದಾಳೆ. ಅವಳು ನನ್ನನ್ನು ನೋಡುವುದಕ್ಕೆ ಬಂದಿದ್ದಳು. ಅವಳ ಜೊತೆಯಲ್ಲಿ ಸರೋಜಿನಿ ಬಂದಿದ್ದಳು."

"ಸರೋಜಿನಿ ಯಾರು ?"

"ಅವಳಾರೆಂಬುದು ಹೇಳಲಿಲ್ಲವೇ ? ಹಾಳು ಮರವು. ಹೇಳಲಿಲ್ಲವೋ, ಏನೋ ? ನಾನು ಪ್ರೀತಿಸುತ್ತಿದ್ದೇನೆಂದು ಹೇಳಿದೆನಲ್ಲಾ. ಆ ಹುಡುಗಿಯ ಹೆಸರು ಸರೋಜಿನಿ."

"ನೀವು ಅವರನ್ನು ಮದುವೆಮಾಡಿಕೊಳ್ಳುತ್ತೀರಾ ?"

ತಲೆ ಕೆದರಿಕೊಳ್ಳುತ್ತಾ ವಾಸುದೇವ ಹೇಳಿದ.

"ಮದುವೆ ಮಾಡಿಕೊಳ್ಳುವಂತಿಲ್ಲ. ಈಗಾಗಲೇ ನನಗೊಂದು ಹುಡುಗಿಯನ್ನು ಕೊರಳಿಗೆ ಕಟ್ಟಿದ್ದಾರೆ. ಆದರೇನು? ಪ್ರೇಮಕ್ಕೆ ಮದುವೆಯು ಕಟ್ಟು

ಪಾಡು ಬೇಕಾಗಿಲ್ಲ. ಮದುವೆಯಿಲ್ಲದೆ ಪ್ರೇಮ ಮಾಡಬಾರದೇ? ನನಗಂತೂ ಮದುವೆಯು ಮುಖ್ಯವಲ್ಲ. ಸರೋಜಿನಿ ಸಹ ಅದನ್ನು ಮುಖ್ಯವೆಂದೆಣಿಸುವ ಗೊಡ್ಡು ಹೆಂಗಸಲ್ಲ."

"ಪ್ರೇಮದ ಕತೆಗಳಲ್ಲಿ ಎಲ್ಲಾ ಇಂತಹದೊಂದು ತೊಡಕಿದ್ದೇ ಇರುತ್ತದೆ."

"ಇದರಲ್ಲಿ ತೊಡಕೆಯೂ ಇಲ್ಲ, ಶಂಕ್ರು. ಅವಳಿಗೆ ಈ ಆರು ತಿಂಗಳಿಂದಲೂ ಖರ್ಚಿಗೆ ಹಣ ಕೊಡುತ್ತಿದ್ದೇನೆ. ಅವಳೇನೂ ಅಪೇಕ್ಷೆ ಪಡುವುದಿಲ್ಲವೆನ್ನು. ಆದರೂ ನಾವು ಪ್ರೇಮಿಸುವ ಹೆಣ್ಣು ಕಷ್ಟಪಡುತ್ತಿದ್ದರೆ ಕೊಡದೇ ನೋಡಿಕೊಂಡಿರುವುದಕ್ಕೆ ಆಗುತ್ತದೆಯೇ?"

"ಅವರ ತಂದೆಯ ಅಭಿಪ್ರಾಯ ಹೇಗಿದೆಯೋ?"

"ಆತ ಬಹಳ ಒಳ್ಳೆಯ ಮನುಷ್ಯ. ಸರೋಜಿನಿಯೇ ಮನೆಗೆ ಕರೆದು ಕೊಂಡು ಹೋಗಿ ಅವರ ಪರಿಚಯ ಮಾಡಿಸಿದಳು. ಅವರು "ನನ್ನ ಮಗಳು ಏನೂ ಅರಿಯದವಳು. ಅವಳ ಕೈ ಬಿಡಬೇಡಿ" ಎಂದು ಅಂಗಲಾಚಿ ಕೇಳಿಕೊಂಡರು."

ಮಾತನಾಡುತ್ತಾ ಕುಳಿತುಕೊಂಡು ಹತ್ತುಗಂಟೆಯಾದುದೇ ಗೊತ್ತಾಗಲಿಲ್ಲ. ಕೃಷ್ಣ ಬಂದು "ಏನು ಸ್ವಾಮಿ! ನೀವೇನು ಟಿಫಿನ್ ಮಾಡುತ್ತೀರೋ ಅಥವಾ ಮಾತನಾಡುತ್ತಲೇ ಕುಳಿತಿರುತ್ತೀರೋ" ಎಂದು ಕೇಳಿದಾಗಲೇ ಹೊತ್ತಾಯಿತೆಂಬ ವಿಷಯ ಗೊತ್ತಾದುದು.

ಸ್ನಾನ ಮುಗಿಸಿ, ಟಿಫಿನ್ ಮಾಡಿಕೊಂಡು, ಷಾಪುರದ ಕಡೆ ಹೊರಟರು. ತಿರುಗಾಡಿಕೊಂಡು ಖಡೇಬಜಾರಿನ ಹೋಟಲೊಂದರಲ್ಲಿ ಚಹಾ ತೆಗೆದುಕೊಳ್ಳುತ್ತ ಕುಳಿತುಕೊಂಡರು.

ಚಹಾ ತೆಗೆದುಕೊಳ್ಳುತ್ತಿದ್ದ ವಾಸುದೇವ ಅಚ್ಚರಿಯಿಂದ ತನ್ನಷ್ಟಕ್ಕೆ ತಾನೇ ಹೇಳಿಕೊಂಡ ಮಾತು ಶಂಕರನ ಕಿವಿಗೆ ಬಿದ್ದಿತು.

"ಸರೋಜಿನಿ ಬಂದಿದ್ದಾಳೆ."

ಶಂಕರನು ಆ ಮಾತಿನಿಂದ ಎಚ್ಚತ್ತು ಸುತ್ತಲೂ ನೋಡಿದ. ಅನಂತರ

ವಾಸುದೇವ ದೃಷ್ಟಿಸುತ್ತಿದ್ದ ಕಡೆಗೆ ನೋಡಿದ. ಸುಂದರಿಯಂತೆ ಕಂಡುಬರುತ್ತಿದ್ದವಳೊಬ್ಬಳು ಎದುರಂಗಡಿಯಲ್ಲಿ ಸೀರೆಯನ್ನು ನೋಡುತ್ತಿದ್ದಳು.

ವಿಷಯ ಅಷ್ಟರಲ್ಲಿಯೇ ನಿಲ್ಲಲಿಲ್ಲ. ಸೀರೆಗಳನ್ನು ಆರಿಸಿದವಳು ಪಕ್ಕದಲ್ಲಿ ನಿಂತಿದ್ದ ಗಂಡಸೊಬ್ಬನಿಗೆ ತೋರಿಸಿದಳು. ಅವನೂ ಆ ಸೀರೆಗಳನ್ನು ಛಾಯಿಸ್ ಮಾಡಿದ. ಅಂಗಡಿಯವನು ಎರಡು ಸೀರೆಗಳನ್ನು ತೆಗೆದು, ಕಾರ್ಡುಬೋರ್ಡಿನ ಬ್ಲಾಕ್ಸಿನಲ್ಲಿ ಹಾಕಿ, ಕಟ್ಟಿಕೊಟ್ಟ. ಪಕ್ಕದಲ್ಲಿ ನಿಂತಿದ್ದವನು ಅದನ್ನು ತೆಗೆದುಕೊಂಡು ಸರೋಜಿನಿಯ ಕೈಗೆ ಕೊಟ್ಟು, ಅಂಗಡಿಯವನಿಗೆ ಹಣ ತೆಗೆದು ಕೊಟ್ಟ.

ಅನಂತರ-ಅನಂತರ ಒಬ್ಬರ ಕೈತೋಳಿನಲ್ಲಿ ಮತ್ತೊಬ್ಬರು ಕೈ ಹಾಕಿಕೊಂಡು ನಗುನಗುತ್ತಾ ಅಂಗಡಿಯಿಂದ ಹೊರಗೆ ಬಂದರು.

ಸರೋಜಿನಿಯ ಕೈಯಲ್ಲಿ ಸೀರೆಗಳ ಬಾಕ್ಸ್ ಇತ್ತು.

ಎದುರು ಹೋಟಲಿನಲ್ಲಿ ಕುಳಿತಿದ್ದವರು ಸರೋಜಿನಿಯನ್ನು ನೋಡಿದರಷ್ಟೆ. ಸರೋಜಿನಿ ಅವರನ್ನು ನೋಡದಿರಲಿಲ್ಲ. ಚಹಾ ಬಟ್ಟಲು ಮುಂದಿಟ್ಟು ಕೊಂಡು ಕುಳಿತಿದ್ದ ವಾಸುದೇವನನ್ನು ನೋಡಿದಳು. ಒಂದು ಕ್ಷಣ ಅವಳ ಮುಖವು ಬೆಪ್ಪಾಗಿ ಕಪ್ಪಿಟ್ಟುಕೊಂಡಿತು. ಮರುಕ್ಷಣದಲ್ಲಿಯೇ ಅದನ್ನು ಸರಿಮಾಡಿಕೊಂಡು ನೋಡಿದರೂ ನೋಡದವಳಂತೆ ಹೊರಟುಹೋದಳು.

ಶಂಕರ ಚಹಾ ಕುಡಿದು ಮುಗಿದಿದ್ದ. ಆದರೆ ಒಂದು ಗುಟುಕು ಮಾತ್ರ ಕುಡಿದಿದ್ದ ವಾಸುದೇವನ ಬಟ್ಟಲಿನಲ್ಲಿ ಚಹಾ ಹಾಗೆಯೇ ಉಳಿದಿತ್ತು.

ಕೂಡಲೇ ಮೇಲೆದ್ದು ಹೋಟಲಿನವನ ಮೇಜದ ಮೇಲೆ ಹುಚ್ಚನಂತೆ ನಾಲ್ಕಾಣೆ ಬಿಲ್ಲೆಯನ್ನು ಎಸೆದು, ದರದರನೆ ನಡೆದುಕೊಂಡು ಹೊರಟ.

ಶಂಕರನು ಗೆಳೆಯನನ್ನು ಅನುಸರಿ ನಡೆದ.

## ೪

ಹೋಟಲಿಗೆ ಬರುವಾಗಲೇ ವಾಸುದೇವ ಬಿಸ್ಕತ್ ಬ್ರಾಂದೀ ಬಾಟಲುಗಳೆರಡನ್ನು ತೆಗೆದುಕೊಂಡು ಬಂದಿದ್ದ. ಎಷ್ಟೋ ಎಚ್ಚರವಾಗಿ ಮುಚ್ಚಿಟ್ಟುಕೊಂಡು ಕುಡಿಯುತ್ತಿದ್ದವನು ಈ ದಿನ ಬಹಿರಂಗವಾಗಿಯೇ ಕುಡಿಯುತ್ತಿದ್ದ.

ಮಧ್ಯಾಹ್ನ ಊಟದ ಶಾಸ್ತ್ರವಾದ ಸ್ವಲ್ಪ ಹೊತ್ತಿಗೆಲ್ಲಾ ಕುಡಿತ ಆರಂಭವಾಗಿತ್ತು. ನಾಲ್ಕೂವರೆ ಗಂಟೆಗೆ ಚಹಾ ತೆಗೆದುಕೊಳ್ಳುವ ವೇಳೆಗೆ ಅರ್ಧ ಬಾಟಲು ಮುಗಿದಿತ್ತು. ಕೃಷ್ಣ ಬಂದಾಗ ಶಂಕರನೊಬ್ಬನೇ ಚಹಾ ತರಿಸಿಕೊಂಡು ಕುಡಿದ.

ಅವನು ಚಹಾ ತೆಗೆದುಕೊಳ್ಳುತ್ತಿದ್ದಾಗ ವಾಸುದೇವ ಹೇಳಿದ.

"ಕೆಲಸಕ್ಕೆ ಬಾರದ ಚಹಾ ಯಾಕೆ ಕುಡಿಯುತ್ತೀ, ಶಂಕರ. ಈ ಬ್ರಾಂದಿಯನ್ನು ಕುಡಿ. ಇದರಿಂದ ಜಗತ್ತನ್ನೇ ಮರೆಯಬಹುದು. ದುಃಖ ನಿರಾಶೆಗಳನ್ನು ಮರೆಯಬಹುದು. ಇದು ಪ್ರಪಂಚಕ್ಕೆ ದೇವರು ಕೊಟ್ಟಿರುವ ದೊಡ್ಡ ವರ. ಈ ವರವೊಂದಿರದಿದ್ದರೆ ಜಗತ್ತಿನ ಜನಗಳೆಲ್ಲರೂ ಆತ್ಮಹತ್ಯೆ ಮಾಡಿಕೊಳ್ಳಬೇಕಾಗಿತ್ತು."

ಶಂಕರನಿಗೆ ವಾಸುದೇವನ ಶಿಫಾರಸು ಬೇಕಾಗಿರಲಿಲ್ಲ. ಒಳಗೊಳಗೇ ಕುಡಿತವು ಹೇಗಿರುತ್ತದೆಯೋ ನೋಡಬೇಕೆಂದು ಆಸೆಯಿದ್ದಿತು. ಆದರೆ

ಕೂಡಲೇ ತೆಗೆದುಕೊಳ್ಳಲು ಸಂಕೋಚಿಸಿದ. ಗೆಳೆಯ ಸ್ವಲ್ಪ ಬ್ರಾಂದಿಗೆ ಸೋಡಾ ಸೇರಿಸಿ ಕೈಗೆ ಕೊಟ್ಟು "ತೆಗೆದುಕೋ-ತೆಗೆದುಕೋ" ಎಂದಾಗ ಅದೇನು ಅವನ ಬಲಾತ್ಕಾರದ ಮೇಲೆ ತೆಗೆದುಕೊಂಡನೋ, ಅಥವಾ ತನ್ನ ಆಸೆಯಿಂದಲೇ ತೆಗೆದುಕೊಂಡನೋ ಹೇಳಲಾಗುವುದಿಲ್ಲ.

ನಿಧಾನವಾಗಿ ಒಂದೆರಡು ಗುಟುಕುಗಳನ್ನು ಕುಡಿದು ನೋಡಿದ. ನೀರಿನಂತೆ ದಾಹಪರಿಹಾರಕವಲ್ಲ. ಪಾನಕದಂತೆ ರುಚಿಯಿಲ್ಲ. ಏನೋ ವಾಸನೆ. ನಾಲಿಗೆಯ ಮೇಲೆ ಅಪ್ರಿಯವಾಗಿ ಉಂಟಾಗುವ ರುಚಿ. ಜನಗಳು ಯಾಕೆ ಇದಕ್ಕಾಗಿ ಇಷ್ಟೊಂದು ಸಾಯುತ್ತಾರೆ?

ಕೂಡಲೇ ಶಂಕರನು ತನ್ನ ಮನಸ್ಸಿಗೆ ಬಂದ ಭಾವವನ್ನು ಬಗೆಹರಿಸಲಾಗಲಿಲ್ಲ.

ಅರ್ಧ ಮುಕ್ಕಾಲು ಗಂಟೆಯಲ್ಲಿ ಯಾಕೆ ಜನಗಳು ಅದಕ್ಕಾಗಿ ಇಷ್ಟೊಂದು ಅಪೇಕ್ಷೆ ಪಡುತ್ತಾರೆಂಬುದು ಅರ್ಥವಾಗುತ್ತ ಬಂದಿತು.

"ಅನೇಕರು ಹುಚ್ಚುಹುಚ್ಚಾಗಿ ಮಾತನಾಡುವುದನ್ನು ಕೇಳಿದ್ದೇನೆ. ಪ್ರಜ್ಞೆ ತಪ್ಪಿ ಕೆಳಗೆ ಬೀಳುವುದನ್ನು ನೋಡಿದ್ದೇನೆ. ಅವರು ಕುಡಿದಿದ್ದಾರೆಂದು ಜನಗಳು ಹೇಳುತ್ತಾರೆ. ಆದರೆ ನಾವೀಗ ಕುಡಿಯುತ್ತಿದ್ದೇವೆ. ನಾವೇಕೆ ಹುಚ್ಚುಹುಚ್ಚಾಗಿ ಆಡುತ್ತಿಲ್ಲ, ಪ್ರಜ್ಞೆ ತಪ್ಪಿಲ್ಲ?"

"ಹೌದು. ಕೆಲವರು ಸ್ವಲ್ಪ ಕುಡಿದರೂ ಹುಚ್ಚುಹುಚ್ಚಾಗುತ್ತಾರೆ. ನಮ್ಮ ಹಾಗೆ ಮನೋಬಲವಿರುವವರಿಗೆ ಏನೂ ಆಗುವುದಿಲ್ಲ. ನನಗೆ ಈ ಎರಡು ಬಾಟಲುಗಳನ್ನು ಕುಡಿದರೂ ಏನೂ ಆಗುವುದಿಲ್ಲ. ನಿನಗಿದು ಮೊದಲನೆಯ ಬಾರಿಯಾಗಿರಬಹುದು. ಆದರೂ ಗಟ್ಟಿಗನಂತೆ ಕಂಡುಬರುತ್ತೀಯೆ. ಇನ್ನೂ ಎರಡು ಗುಟುಕು ಕುಡಿಯುದಕ್ಕಿಲ್ಲ. ಹೇಗೆಹೇಗೆಯೋ ಆಡುತ್ತಾರೆ. ಬೇಜಾರು ಮಾಡುತ್ತಾರೆ."

ಹೌದು. ಶಂಕರನಿಗೂ ಕಾಣುತ್ತಿತ್ತು. ತನಗೆ ಮನೋಬಲವಿರುವಂತೆಯೂ ಬ್ರಾಂದಿಯು ತನ್ನನ್ನು ಏನೂ ಮಾಡಲು ಪ್ರಯತ್ನಿಸಿ ಪರಾಜಿತವಾಗುತ್ತಿದ್ದಂತೆಯೂ ಕಾಣುತ್ತಿತ್ತು.

"ನಾನು ಹೀಗೆ ಹೇಳುತ್ತೇನೆಂದು ತಪ್ಪು ತಿಳಿದುಕೊಳ್ಳದಿದ್ದರೆ........"

"ಪೀಠಿಕೆ ಹಾಕಬೇಡವೆಂದು ಹೇಳಿದ್ದೇನಲ್ಲಾ...."

"ಅಂತಹದೇನೂ ಇಲ್ಲ. ನಾನೂ ಮಧ್ಯಾಹ್ನದಿಂದ ಒಂದೇ ಸಮನಾಗಿ ಆಲೋಚನೆ ಮಾಡುತ್ತಿದೇನೆ. ಸರೋಜಿನಿ ಅನುಪಮ ರೂಪವತಿ. ನೀವು ಆವರನ್ನು ಪ್ರೀತಿಸುತ್ತಿರುವುದರಲ್ಲಿ ಏನು ತಪ್ಪೂ ಇಲ್ಲ."

"ಅವಳನ್ನು ಪ್ರೀತಿಸಿದುದಂತೂ ಹಗಲು ಕಂಡ ಭಾವಿಯಲ್ಲಿ ರಾತ್ರಿ ಬಿದ್ದ ಹಾಗಾಯಿತು, ಶಂಕರ. ನಾನು ಹೇಳುತ್ತೇನೆ, ಕೇಳು. ಬಹಳ ಅನುಭವ ದಿಂದ, ಬಹಳ ಆಲೋಚನೆಯಿಂದ ಒಂದು ನಿರ್ಧಾರಕ್ಕೆ ಬಂದಿದ್ದೇನೆ. ಒಬ್ಬರು ಮತ್ತೊಬ್ಬರನ್ನು ಪ್ರೀತಿಸುವುದಕ್ಕಿಂತ ದೊಡ್ಡ ತಪ್ಪಿಲ್ಲ."

"ನೀವು ಅನ್ಯಥಾ ಭಾವಿಸಿರಬಹುದು. ಆಕೆಯದು ತಪ್ಪಿಲ್ಲದೆಯೇ ಇರ ಬಹುದು."

"ಅಬ್ಬಾ! ಈಗ ಹೇಳುತ್ತೇನೆ, ಕೇಳು. ನೀನು ಕುಡಿದಿದ್ದೀ. ಖಂಡಿತ ವಾಗಿ ಕುಡಿದಿದ್ದೀ. ಆಲ್ಕೋಹಾಲ್ ನಿನ್ನ ಬುದ್ಧಿಯನ್ನು ಮಂದಗೊಳಿ ಸಿದೆ. ಇಲ್ಲದಿದ್ದರೆ ನೀನು ಹೀಗೆ ಮಾತನಾಡುತ್ತಿದ್ದೆಯಾ?"

ಆಲ್ಕೋಹಾಲ್ ಬುದ್ಧಿಯನ್ನು ಮಂದಗೊಳಿಸಿದೆ! ಶಂಕರ ತನ ಗೇನೂ ಆಗಿಯೇ ಇಲ್ಲವೆಂದಿದ್ದ. ಸರೋಜಿನಿಯ ವಿಷಯ ಆಲೋಚಿಸುತ್ತಿದ್ದ ಮನಸ್ಸು ಎದುರಿಗೆ ಕುಳಿತು "ನೀನು ಕುಡಿದಿದ್ದೀ" ಎಂದು ಹೇಳುತ್ತಿದ್ದವನ ವಿಷಯದಲ್ಲಿ ಅಪ್ರಸನ್ನವಾಯಿತು.

"ನೀನೇ ನೋಡಲಿಲ್ಲವೇ, ಶಂಕರು. ಯಾವನೋ ಅವಳಿಗೆ ಅಂಗಡಿ ಯಲ್ಲಿ ಸೀರೆ ಕೊಂಡುಕೊಡುತ್ತಿದ್ದ. ಅವರು ರಾಜಾರೋಷಾಗಿ ಅಂಗಡಿ ಯಿಂದ ಹೊರಗೆ ಬರುತ್ತಿದ್ದರು."

ಅವರಿಬ್ಬರನ್ನೂ ನೋಡಿದಾಗ ಶಂಕರನಿಗೂ ಮೋಷಪೂರಿತವಾಗಿಯೇ ಕಂಡಿದ್ದಿತು. ತನ್ನ ಗೆಳೆಯ ಮೊದಲೇ ಕ್ರುದ್ಧನಾಗಿದ್ದ. ಅವನಿಗೆ ಅಪ್ರಿಯ ವಾಗಿ ಮಾತನಾಡುವುದು ಇಷ್ಟವಿರಲಿಲ್ಲ.

ಮತ್ತೊಂದು ವಿಷಯವೂ ಇತ್ತು. ಸರೋಜಿನಿಯಂತಹ ಕಳಾಪೂರ್ಣೆ ಳಾದ ಹೆಣ್ಣಿನ ವಿಷಯದಲ್ಲಿ ಕಳಂಕವನ್ನು ಅರಸುವುದು ಮನಸ್ಸಿಗೆ ಪ್ರಿಯ ವಾದುದಾಗಿರಲಿಲ್ಲ.

"ಯಾರ ವಿಷಯವೇ ಆಗಲಿ. ಅಷ್ಟು ಬೇಗ ಒಂದು ನಿರ್ಧಾರಕ್ಕೆ

ಬರುವುದು ತಪ್ಪೆಂದು ನನ್ನ ಭಾವನೆ. ಅವರಿಬ್ಬರೂ ಕೇವಲ ಬಂಧುಗಳಿರ ಬಹುದು. ಸ್ನೇಹಿತರಿರಬಹುದು"

"ನೀನು ಯಾರೋ ನೋಡಿದ ಹಾಗೆ ನೋಡಿವೆ. ನಾನು ಅವಳ ಪ್ರಣಯಿಯಾಗಿ ನೋಡಿವೆ. ನಾನು ಹೇಳುತ್ತೇನೆ, ಕೇಳು. ಅವನು ಅವಳ ಕಳ್ಳ ಮಿಂಡ. ನೋಡಿದೊಡನೆಯೇ ನನಗೆ ಗೊತ್ತಾಯಿತು"

ಇನ್ನೇನು ಹೇಳಿಯಾನು ? ಶಂಕರ ಸುಮ್ಮನಿದ್ದ.

"ನೀನು ಹೇಳಿದಂತೆ ಅವನು ಬಂಧುವಾಗಿದ್ದರೆ, ಸ್ನೇಹಿತನಾಗಿದ್ದರೆ ನನ್ನನ್ನು ನೋಡಿ, ಮಾತನಾಡಿಸಿಕೊಂಡು ಹೋಗುತ್ತಿದ್ದಳು. ಅವರಿಬ್ಬ ರನ್ನೂ ನಾನು ನೋಡಿದ್ದು ಅವಳಿಗೆ ಗೊತ್ತಾದ ಕೂಡಲೇ, ನಾನು ತಪ್ಪಿ ಹೋದೆನೆಂಬುದು ಅವಳಿಗೆ ಗೊತ್ತಾಗಿ ಹೋಯಿತು. ನನ್ನನ್ನು ಮಾತ ನಾಡಿಸುವುದರಿಂದ ಹೊಸ ಗಿರಾಕಿಯೂ ತಪ್ಪಿಹೋಗುತ್ತವೆಂದು ನೋಡಿದರೂ ನೋಡದಂತೆ ಹೊರಟುಹೋದಳು"

ಸರೋಜಿನಿಯಂತಹ ಸುಂದರಿಯು ತೋಳಿನಲ್ಲಿ ತೋಳು ಹಾಕಿಕೊಂಡು ನಗುನಗುತ್ತಾ ಬೀದಿಯಲ್ಲಿ ಹೋಗುವವನ ಭಾಗ್ಯವನ್ನೇ ಕುರಿತು ಶಂಕರ ಯೋಚಿಸುತ್ತಿದ್ದ.

ಎದುರಿಗಿದ್ದ ಗ್ಲಾಸು ಮೇಲೆತ್ತಿ ಕುಡಿದು ಕೆಳಗಿಟ್ಟು ವಾಸುದೇವ ಹೇಳಿದ.

"ನೋಡು, ಶಂಕರು. ಸರೋಜಿನಿಯನ್ನು ನೋಡಿದಾಗ ನಾನು ಏನೋ ಅಂದುಕೊಂಡೆ. ಅವಳ ರೂಪವು ನನ್ನನ್ನು ಮೋಸ ಮಾಡಿತು. ಬೀದಿಯ ಹೆಣ್ಣುಗಳಲ್ಲಿ ಅದೊಂದು ಬಗೆ. ಸ್ಕೂಲು ಕಾಲೇಜುಗಳಲ್ಲಿ ಓದು ತ್ತಾರೆ. ಸಂಸಾರಿಗಳಂತೆಯೂ ಶೀಲವಂತರಂತೆಯೂ ನಟಿಸುತ್ತಾರೆ. ಒಬ್ಬೊ ಬ್ಬನನ್ನಾಗಿ ಹಿಡಿದು, ಪ್ರೇಮಿಸುವುದಾಗಿ ಹೇಳಿ, ಅವರಿಂದ ಸಾಧ್ಯವಾದಷ್ಟು ದುಡ್ಡು ಎಳೆಯುತ್ತಾರೆ"

ಆಮೇಲೆ ಸ್ವಲ್ಪ ಹೊತ್ತು ಅವರು ಮಾತನಾಡಲಿಲ್ಲ. ಕೋಣೆಯಲ್ಲಿ ಕತ್ತಲಾಗಿತ್ತು. ದೀಪ ಹಚ್ಚಿದ ಮೇಲೆ ಎರಡು ಗ್ಲಾಸುಗಳಿಗೂ ಸ್ವಲ್ಪ ಸ್ವಲ್ಪ ಬ್ರಾಂದೀ ಸುರಿದ ವಾಸುದೇವ ಅಂದ.

"ಶಂಕರು. ನೀನು ನನಗಿಂತ ಸಣ್ಣವ. ನನಗೆ ತಮ್ಮಂದಿರಿಲ್ಲ. ನನ್ನ

ತಮ್ಮನಂತೆ. ನೀನು ಅನನುಭವಸ್ಥ. ಈಗಿನ್ನೂ ಪ್ರಪಂಚದಲ್ಲಿ ಕಾಲಿಡುತ್ತಿದ್ದೀಯೆ. ನಾನು ಹೇಳುವ ಒಂದೊಂದು ಮಾತನ್ನೂ ಜ್ಞಾಪಕದಲ್ಲಿಟ್ಟುಕೋ. ಜೀವನದಲ್ಲಿ ನೀನು ಎಂದೂ ಪ್ರೇಮಿಸಬೇಡ"

ಪ್ರೇಮಜೀವನವನ್ನು ಆರಂಭಿಸಬೇಕೆಂದು ಹಾತೊರೆಯುತ್ತಿರುವವನಿಗೆ ಪ್ರೇಮಿಸಬೇಡವೆಂಬ ಸಂಯಮದ ಉಪದೇಶ! ಶಂಕರ ದಿಗ್ಮೂಢನಾಗಿ ಗೆಳೆಯನ ಕಡೆ ನೋಡತೊಡಗಿದ.

"ನನ್ನ ಮಾತು ನಿನಗೆ ಹಿಡಿಸುವುದಿಲ್ಲವೇನು? ಹಿಡಿಸದ ಮಾತುಗಳೂ ಅಪ್ರಿಯವಾದ ಮಾತುಗಳೂ ಸತ್ಯವಾಗಿಯೂ ಇರುತ್ತವೆ. ನನ್ನ ಮಾತಿನಲ್ಲಿ ನಿನಗೆ ನಂಬುಗೆ ಇಲ್ಲದಿದ್ದರೆ ಭಗವಾನ್ ಬುದ್ಧನ ಮಾತಿನಲ್ಲಿಯಾದರೂ ನಂಬುಗೆ ಇಡು. ಬುದ್ಧ ಏನು ಹೇಳಿದ್ದಾನೆ, ಗೊತ್ತೇ? ಭಗವಾನನು ಒಮ್ಮೆ ಶ್ರಾವಸ್ತಿಯ ಜೇತವನದಲ್ಲಿ ಅನಾಥ ಪಿಂಡಿಕನ ಆರಾಮದಲ್ಲಿ ತಂಗಿದ್ದನು. ಮಗನನ್ನು ಕಳೆದುಕೊಂಡು ದುಃಖಪಡುತ್ತಿದ್ದ ತಂದೆಗೆ ಅವನು "ಗೃಹಸ್ಥ. ಅತಿಪ್ರಿಯಸ್ಥರಾದವರಿಂದಲೇ ನಮಗೆ ದುಃಖ, ಸಂಕಟ, ನೋವು, ಗೋಳು, ಯಾತನೆ" ಎಂದು ಹೇಳಿದ. ವಿಷಯ ರಾಜಪುತ್ರ ಸೇನಜಿತನ ಅಂತಃಪುರಕ್ಕೆ ಮುಟ್ಟಿತು. ರಾಜನೂ ಮಗನನ್ನು ಕಳೆದುಕೊಂಡಿದ್ದ ಗೃಹಸ್ಥನಂತೆ ಮೊದಲು ಭಗವಾನನ ಮಾತು ಒಪ್ಪಲಿಲ್ಲ. ಮಲ್ಲಿಕಾದೇವಿಗೆ ಮಾತ್ರ ಅದು ಸರಿಯಾಗಿ ಕಂಡಿತು. ಪ್ರಿಯರಾದವರಿಂದ ನಮಗೆ ಹೇಗೆ ದುಃಖ, ಸಂಕಟಗಳು ಪ್ರಾಪ್ತವಾಗುತ್ತವೆಂಬುದನ್ನು ತಿಳಿಹೇಳಿದಳು. ರಾಜನಿಗೆ ಒಪ್ಪಿಗೆಯಾಗಿ ಭಗವಾನನಿದ್ದ ದಿಕ್ಕಿಗೆ ಕೈಮುಗಿದನು. ಹಾಗೆ ಪ್ರಿಯರಾದವರಿಂದಲೇ ನಮಗೆ ದುಃಖ, ಶಂಕರು."

ಬುದ್ಧಭಗವಾನನು ಹೇಳಿದ್ದ ಮೇಲೆ ಅದು ಪರಮ ಸತ್ಯವೇ ಆಗಿರಬೇಕು.

"ಹಾಗಾದರೆ ಪ್ರೀತಿಸಲೇಬಾರದು, ಎನ್ನುತ್ತೀರಾ.

"ಹೌದು. ನನ್ನ ಅಭಿಮತವದು."

"ಪ್ರಪಂಚದಲ್ಲಿ ಒಬ್ಬರನ್ನೊಬ್ಬರು ಪ್ರೀತಿಸದೆಯೇ ಇರುವುದಕ್ಕೆ ಆಗುತ್ತದೆಯೇ?"

"ಆಗುತ್ತದೆ, ಶಂಕರು. ನೀನು ಪ್ರೇಮಕ್ಕೂ, ಕಾಮಕ್ಕೂ ತಪ್ಪು

ಅರ್ಥ ಮಾಡಿಕೊಂಡಿದ್ದೀಯ. ಅದರಿಂದ ನಿನಗೆ ಅರ್ಥವಾಗುತ್ತಿಲ್ಲ. ಪ್ರೇಮವು ಮನಸ್ಸಿಗೆ ಸಂಬಂಧಿಸಿದ್ದು. ಕಾಮ ದೇಹಕ್ಕೆ ಸಂಬಂಧಿಸಿದುದು. ದೇಹದ ಒತ್ತಾಯದಿಂದ ಸ್ತ್ರೀಯೊಬ್ಬಳ ಬಳಿಗೆ ಹೋದರೆ ಅವಳನ್ನು ಪ್ರೀತಿಸಬೇಕೆಂದಿದೆಯೇ ?"

"ಪ್ರೀತಿಸದೇ ಒಬ್ಬಳ ಬಳಿ................''

"ಅದೇ. ಅದೇ ನಿನಗೆ ಅನುಭವವಿಲ್ಲವೆಂದು ನಾನು ಹೇಳುವುದು. ಬೇಕೆಂದು ತೋರಿತು. ಆ ದಿನ ಸಿಕ್ಕಿದವಳಿಗೆ ಐದೋ, ಹತ್ತೋ ಕೊಟ್ಟು' ಅವಳನ್ನು ಮರೆತುಬಿಡಬೇಕು. ಪ್ರೀತಿಸುತ್ತಿದ್ದೇನೆಂದು ಅವಳನ್ನು ಕಟ್ಟಿಕೊಂಡು ಓಡಿಯಾಡಬಾರದು.''

ಅವನು ಹೇಳಿದುದು ಸರಿ ಎಂದು ಭಾವಿಸುವುದು ಶಂಕರನಿಂದ ಶಕ್ಯವಿರಲಿಲ್ಲ. ಪ್ರೇಮಿಸದೇ ಪ್ರೀತಿಸಲು ಪ್ರಯತ್ನಪಟ್ಟದೇ ಹಿಂದಿನ ದಿನ ರಾತ್ರಿ ಹಾಗಾಗಲು ಕಾರಣವೆಂದು ನಂಬಲು ಮನಸ್ಸು ಪ್ರಯತ್ನ ಮಾಡುತ್ತಿತ್ತು.

ತಾನು ಹೇಳಿದುದಕ್ಕೆ ಒಪ್ಪಿಕೊಳ್ಳಲು ಕಷ್ಟಪಡುತ್ತಿದ್ದಾನೆಂದು ಶಂಕರನ ಬಗೆಯಿಂದ ವಾಸುದೇವನಿಗೆ ಅರ್ಥವಾಯಿತು. ಅವನ ತಪ್ಪು ಭಾವನೆಯನ್ನು ತಿದ್ದಲು ಹಿಂದಿನ ದಿನದ ಪ್ರಸ್ತಾಪವನ್ನು ಎತ್ತಿದ.

"ನಿನ್ನೆಯ ದಿನ ರಾತ್ರಿ................"

ವಿಷಯ ಹಿಂದಿನ ರಾತ್ರಿಯಿಂದಲೂ ಮುಂದೆಯೇ ಇದ್ದಿತು. ಆದರೆ ಪ್ರತ್ಯಕ್ಷವಾಗಿ ಎದುರಿಗೆ ಬಂದಾಗ ಅದು ಶಂಕರನನ್ನು ಉದ್ರೇಕಗೊಳಿಸಿತು. ಅವನ ಮುಖ ಕೆಂಪಾಯಿತು. ದುರದುರನೆ ಗೆಳೆಯನ ಕಡೆ ನೋಡಿದ. ಅದರಿಂದಲೇ ಅವನು ಮಾತನ್ನು ಅರ್ಧಕ್ಕೆ ನಿಲ್ಲಿಸಿದ.

ಶಂಕರ ಬಾಟಲಿನಿಂದ ಸ್ವಲ್ಪ ಬ್ರಾಂದಿಯನ್ನು ಗ್ಲಾಸಿನಲ್ಲಿ ಸುರಿದುಕೊಂಡ. ಮಧ್ಯಾಹ್ನದಿಂದ ಅವನಾಗಿಯೇ ಬಗ್ಗಿಸಿದುದು ಅದು ಮೊದಲನೆಯ ಬಾರಿ. ಅದನ್ನು ಕುಡಿದು ಸಿಗರೇಟು ಹಚ್ಚಿಕೊಂಡ. ಸಿಗರೇಟು ಅರ್ಧ ಮುಗಿಯುವವರೆಗೆ ಸುಮ್ಮನಿದ್ದು ಹೇಳಿದ. ಅಷ್ಟು ಹೊತ್ತು ಕೋಣೆಯಲ್ಲಿ ಮೌನವಾವರಿಸಿತ್ತು.

"ಪ್ರೇಮ ಮಾಡದವಳ ಬಳಿ ಹೋದುದರಿಂದಲೇ ನನಗೆ ಹಾಗಾಯಿತು."

ಅವನಿಗೇನಾಗಿದ್ದಿತೋ ವಾಸುದೇವ ಆ ಮನೆಯಲ್ಲಿ ವಿಚಾರಿಸಿರಲಿಲ್ಲ. ಏನಾಗಿದ್ದಿತೋ ತಿಳಿದುಕೊಳ್ಳಬೇಕೆಂಬ ಆಸಕ್ತಿಯಿಂದ ಕೇಳಿದ.

"ನಿನಗೆ ಸಂಕೋಚವಿಲ್ಲದಿದ್ದರೆ ಹೇಳು. ನನಗೆ ಹೇಳುವುದರಿಂದ ನಿನಗೆ ಉಪಯೋಗವಾದರೂ ಆಗಬಹುದು."

ಬ್ರಾಂದಿಯು ಶಂಕರನ ಮೇಲೆ ಚೆನ್ನಾಗಿಯೇ ಕೆಲಸ ಮಾಡಿತ್ತು. ಉದ್ರೇಕಿತನಾಗಿಯೇ ಹೇಳಿದ.

"ಎಂದೂ ಕಾಣದ ಆ ಹೆಂಗಸರಿಬ್ಬರಿಗೂ ಗೊತ್ತಿದೆ. ಇನ್ನು ನಿಮ್ಮಂತಹ ಸ್ನೇಹಿತರಿಗೆ ಯಾಕೆ ಗೊತ್ತಾಗಬಾರದು ? ಹೇಳುತ್ತೇನೆ ಕೇಳಿ. ನನಗೆ ಅವರೊಂದಿಗೆ ಇರಲು ಆಗಲಿಲ್ಲ"

"ಅದೇಕೆ ಹಾಗಾಯಿತೆಂದೇ ನಾನು ಕೇಳುತ್ತಿರುವುದು?"

ತಪ್ಪು ತನ್ನದೋ ಅಥವಾ ಆ ಹೆಂಗಸರದೋ ಎಂದು ಅವನ ಮನಸ್ಸು ತೀರ್ಮಾನ ಮಾಡಲಾರದೇ ಹೋಗಿದ್ದಿತು, ಆದರೂ ತಪ್ಪನ್ನು ಮತ್ತೊಬ್ಬರ ಮೇಲೆ ಹಾಕುವುದೇ ಪ್ರಿಯವಾಗಿ ಹುಚ್ಚನಂತೆ ಕೂಗುತ್ತಾ ಹೇಳಿದ.

"ಅವಳು ಬಂದಳಲ್ಲ. ಮೊದಲು ಬಂದವಳು ಹಾಸಿಗೆಯ ಮೇಲೆ ಬಿದ್ದು ಕೊಂಡು "ಮಲಗಿಕೊಳ್ಳಿ." ಎಂದಳು. ಪ್ರೇಮವಿದ್ದರೆ ಹಾಗೆ ಮಾಡುತ್ತಿದ್ದಳೇ! ಹಾಗೆ ಬಂದು, ಅವಸರವಾಗಿ ಹಾಗೆ ಮಾಡಿದರೆ ಯಾರೊಂದಿಗಾದರೂ ಇರುವುದಕ್ಕೆ ಆಗುತ್ತದೆಯೆ? ಎರಡನೆಯ ಬಾರಿ ಬಂದವಳೂ ಹಾಗೆಯೇ ಮಾಡಿದಳು. ಅವಳು ಮೊದಲಿನವಳಿಗಿಂತಲೂ ಹೆಚ್ಚು ಬಲಾತ್ಕಾರ ಮಾಡಿದಳು."

ಮತ್ತಿನಲ್ಲಿಯೂ ವಾಸುದೇವನಿಗೆ ಆ ಮಾತು ಕೇಳಿ ನಗು ಬಂದಿತು– ನಕ್ಕು, ಹೇಳಿದ.

"ಅದಕ್ಕೆ ಪ್ರೇಮ–ಪ್ರೀತಿಗಳಿಲ್ಲದಿದ್ದುದು ಕಾರಣವಲ್ಲ. ಅದು ನಿನಗೆ ಮೊದಲನೆಯ ಸಲ. ಅದರಿಂದಲೇ ಹಾಗಾಗಿರಬಹುದು."

"ಮೊದಲನೆಯ ಸಲವೆಲ್ಲಾ ಹೀಗೇ ಆಗುತ್ತ ಬಂದರೆ ಎರಡನೇ ಬಾರಿ ಎಂಬುದೇ ಇರುವುದಿಲ್ಲವಲ್ಲ."

ಶಂಕರ ನಿರಾಶೆಯ ನಗು ನಕ್ಕ.

[೭]

ವಾಸುದೇವ ಬೇಕೆಂದೇ ಅಲ್ಲಿಗೆ ಆ ಮಾತು ನಿಲ್ಲಿಸಿದ. ತನ್ನ ಕಾದಂಬರಿಗಳ ಮಾತು ಆಡಿದ. ಅವುಗಳಲ್ಲಿ ಬರುವ ಅನೇಕ ಪಾತ್ರಗಳ ವಿಷಯವನ್ನು ಹೇಳಿದ. ನಿಜ ಜೀವನದಲ್ಲಿ ತಾನು ಕಂಡಿದ್ದ ಕೆಲವು ಹೆಣ್ಣುಗಳ ವಿಷಯ ವಿವರಿಸಿದ. ವಾಸ್ತವ ಹೆಣ್ಣುಗಳು ಕಾದಂಬರಿಯ ಪಾತ್ರಗಳಾಗಿ ರೂಪುಗೊಂಡಿರುವುದೂ ಉಟ್ಟೆಂದು ಒಪ್ಪಿಕೊಂಡ.

ಮಾತಿನ ನಡುವೆ ಶಂಕರ ಹೇಳಿದ.

"ನೀವು ಬಹಳ ಸ್ವಾರಸ್ಯವಾಗಿ ಮಾತನಾಡುತ್ತೀರಿ. ಅವುಗಳನ್ನು ನೆನೆಸಿಕೊಂಡರೆ ಸದಾ ನಗುತ್ತಿರಬಹುದು."

ಸ್ತೋತ್ರದಿಂದ ಯಾವನ ಮನಸ್ಸು ತಾನೇ ಸಂತೋಷಗೊಳ್ಳುವುದಿಲ್ಲ ? ವಾಸುದೇವ ತನ್ನ ಗುಣಕಥನವನ್ನು ಮತ್ತಷ್ಟು ಕೇಳುವ ಆಸಕ್ತಿಯಿಂದ "ಅದಾವ ವಿಷಯ?" ಎಂಬಂತೆ ನೋಡಿದ.

"ನಿನ್ನೆ ಸಾಯಂಕಾಲ ನೀವು ಈ ಬೀದಿಯಲ್ಲಿ ಒಬ್ಬ ಹೆಣ್ಣನ್ನು ತೋರಿಸುತ್ತಾ ಹೇಳಿದಿರಲ್ಲ. ಇವಳೊಂದಿಗೆ ಇರುವುದಕ್ಕಲ್ಲದಿದ್ದರೆ ಆ ಮಂಚದ ಮೇಲೆ ಮಲಗುವುದಕ್ಕಾದರೂ ಕಾಸು ಕೊಟ್ಟು ಆ ಮನೆಗೆ ಹೋಗಬೇಕೆಂದು."

ಹೌದು. ಒಳ್ಳೆಯ ಸ್ವಾರಸ್ಯವಾದ ಮಾತು. ಕಾದಂಬರಿಯಲ್ಲಿ ಎಲ್ಲಿಯಾದರೂ ಉಪಯೋಗಿಸಬೇಕಾದ ಮಾತು. ವಾಸುದೇವ ತೃಪ್ತಿಯ ನಗುವನ್ನು ನಕ್ಕ.

"ನೀವು ಗೋವಾಗೆ ಹೋಗಬೇಕೆಂದು ಹೊರಟದ್ದಿರಲ್ಲವೇ?"

"ಹೌದು. ಆದಷ್ಟು ಬೇಗ ಹೋಗಿ ಬಂದುಬಿಡಬೇಕು."

"ಯಾಕೆ? ಅದೇನು ಅಷ್ಟು ಅವಸರ?"

"ಗೋವಾದಲ್ಲಿ ಸತ್ಯಾಗ್ರಹ ಆರಂಭವಾಗುವುದರಲ್ಲಿದೆ. ಭಾರತೀಯರೆಲ್ಲರೂ ಆ ಸತ್ಯಾಗ್ರಹಕ್ಕೆ ಜಾತಾಗಳಲ್ಲಿ ಹೊರಡುತ್ತಾರೆ. ಅದರಿಂದ ಗೋವಾಗೆ ಬೇಗ ಹೋಗಿ ಬಂದುಬಿಡಬೇಕು."

"ಸತ್ಯಾಗ್ರಹಕ್ಕೂ ನೀವು ಹೋಗುವುದಕ್ಕೂ ಸಂಬಂಧವೇನು?"

"ಸತ್ಯಾಗ್ರಹ ಆರಂಭವಾದನಂತರ ಗೋವಾಗೆ ಯಾಕೆ ಹೋಗಬೇಕು?"

"ಹಾಗಾದರೆ ನೀವು ಗೋವಾಗೆ ಯಾಕೆ ಹೋಗುತ್ತೀರಿ?"

ವಾಸುದೇವನಿಗೆ ನಗು ಬಂದಿತು! ಅದೇ ಪ್ರಶ್ನೆಯನ್ನು ಹಿಂದೊಮ್ಮೆ ಒಬ್ಬ ಕೇಳಿದ್ದ.

"ಅದನ್ನು ಆಮೇಲೆ ಹೇಳುತ್ತೇನೆ. ಅದೊಂದು ದೊಡ್ಡ ಕತೆ. ಗೋವಾಗೆ ಹೋಗುವುದು ಚೆನ್ನಾಗಿ. ಕುಡಿಯುವುದಕ್ಕಾಗಿ ಒಂದಿಷ್ಟು ಮಂದಿ ಹುಡುಗಿಯರೊಡನೆ ಓಡಿಯಾಡಿಕೊಂಡು ಬರುವುದಕ್ಕಾಗಿ. ಗೋವಾದಲ್ಲಿ "ಮಧು-ಮದವತಿಯರು" ಅಗ್ಗ. ಸತ್ಯಾಗ್ರಹವು ನಡೆದು ಗೋವಾ ಭಾರತಕ್ಕೆ ಸೇರಿದರೆ ಗೋವಾ ಸಹ ಭಾರತದ ಇತರ ಪ್ರದೇಶಗಳಂತೆಯೇ ಆಗುತ್ತವೆ. ಅನಂತರ ಅಲ್ಲಿಗೇಕೆ ಹೋಗಬೇಕು ?"

"ಗೋವಾಗೆ ಸ್ವಾತಂತ್ರ್ಯ ಬಂದು ಭಾರತದೊಂದಿಗೆ ಸೇರಬಾರದು ಎನ್ನುತ್ತೀರಾ ?"

"ಹಾಗಾರು ಹೇಳುತ್ತಾರೆ? ಇಂದಲ್ಲಿ ಅಂದಲ್ಲಿ ನಾನೂ ಸತ್ಯಾಗ್ರಹಿಯಾಗಿ ಜೈಲಿಗೆ ಹೋಗಿದ್ದೆ. ಎಷ್ಟೋ ದಿನ ಜೈಲಿಗೆ ಹೋಗಿದ್ದೆ. ನಾಳೆ ಗೋವಾದಲ್ಲಿ ಸತ್ಯಾಗ್ರಹವಾದರೆ ಅಲ್ಲಿಗೂ ಹೋಗುತ್ತೇನೆಯೋ ಏನೋ? ಕಂಡವರಾರು ? ನಾನು ಸ್ವಾತಂತ್ರ್ಯವೂ ಬರಲಿ ಎನ್ನುವವನು. ಮಧು-ಮದವತಿಯರೂ ಅಗ್ಗವಾಗಿ ಸಿಕ್ಕಲಿ ಎನ್ನುವವನು."

ವಾಸುದೇವ ಯಾವುದೋ ದೊಡ್ಡ ಕತೆಯನ್ನು ಹೇಳುವುದಾಗಿ ಹೇಳಿದ್ದದು ಮಾತಿನ ಭರದಲ್ಲಿ ಶಂಕರನಿಗೆ ಮರೆತುಹೋಯಿತು. ಎರಡು ನಿಮಿಷಗಳ ನಂತರ ನೆನೆಸಿಕೊಂಡು "ಅದೇನು ವಿಷಯ ?" ವೆಂದು ಕೇಳಿದ.

ಪುನಃ ವಾಸುದೇವನಿಗೆ ನಗು ಬಂದಿತು-ನಕ್ಕು ಹೇಳಿದ.

"ಅದು ಎರಡು ಮೂರು ವರ್ಷಗಳ ಹಿಂದಿನ ಕಥೆ. ಆಗ ಮೊಲನೆಯ ಬಾರಿ ಗೋವಾಗೆ ಹೋಗಿದ್ದೆ. ಅದಾದ ಮೇಲೆ ಎಷ್ಟೋ ಬಾರಿ ಹೋಗಿದ್ದೆ, ಎನ್ನು. ಕ್ಯಾಸಲ್‌ರಾಕ್ ಕಳೆದ ಮೇಲೆ ಎಲ್ಲರೂ ಪಂಜಿಂನಲ್ಲಿ ಇಳಿದು ಅಲ್ಲಿ ಊಟ ಮುಂತಾದುವುಗಳನ್ನು ತೀರಿಸಿಕೊಂಡು ಅನಂತರ ಎಲ್ಲಿ ಬೇಕಾದರೂ ಹೋಗು, ಎಂದು ಸಲಹೆಗಳನ್ನು ಕೊಡುತ್ತಿದ್ದರು. ಆದರೆ ನನ್ನದೊಂದು ವಿಚಿತ್ರಸ್ವಭಾವ. ಹೋಗುವಾಗ ತುಟ್ಟತುದಿಗೆ ಹೋಗಬೇಕೆಂದು. ಬೆಟ್ಟ ಹತ್ತುವಾಗ ಶಿಖರದ ಮೇಲೆ ಹೋಗಿ ನಿಂತುಕೊಳ್ಳುವ ಆಸೆ. ರಸ್ತೆ, ರೈಲುಗಳ

ದರೂ ಅಷ್ಟೆ. ಗೋವಾ ಹಾರ್ಬರ್ ಟರ್ಮಿನಸ್‌ಗೆ ಟಿಕೆಟ್ ತೆಗೆದುಕೊಂ ದಿದ್ದೆ. ಅಲ್ಲಿಯೇ ಹೋಗಿ ಇಳಿದೆ.

"ಹೋದಾಗ ಮಧ್ಯಾಹ್ನ ಒಂದು ಒಂದೂಕಾಲು ಗಂಟೆ. ಗೋವಾ ಹಾರ್ಬರ್ ನಾನೆಂದುಕೊಂಡಂತೆ ಇರಲಿಲ್ಲ. ರೈಲ್ವೆ ಸ್ಟೇಷನ್ನಿನಲ್ಲಿ ಒಂದು ಹೋಟಲು. ಕಚಡಾ ಹೋಟಲು. ಮೈಯೆಲ್ಲಾ ಬೆವರಿ, ಬಟ್ಟೆಗಳೆಲ್ಲಾ ಕೊಳೆ ಯಾಗಿತ್ತು. ಸ್ನಾನ ಮಾಡಬೇಕಾಗಿದೆ ಎಂದು ಹೋಟಲಿನಲ್ಲಿ ಕೇಳಿದೆ. ಸ್ಟೇರ್ಸ್ ನಲ್ಲಿ ತೋರಿಸಿದರು. ಅಲ್ಲಿ ಗಣಿಯ ಕಾರ್ಮಿಕರು ಸೇರಿ ಊಟ ಮಾಡುತ್ತಿದ್ದರು. ಸ್ನಾನ ಮಾಡುವಂತಿರಲಿಲ್ಲ.

"ಊರು ಎಲ್ಲಿ ಎಂದು ಕೇಳಿದೆ. ಇಲ್ಲಿ ಊರೆಲ್ಲಿ ಬಂದಿತು ಎಂದರು. ಕಡೆಗೆ ಸ್ಟೇಷನ್ ಮಾಸ್ಟರ್ ದೂರದಲ್ಲಿದ್ದ ದೊಡ್ಡ ಹೋಟಲು ತೋರಿಸಿದ. ಹೋಟಲ್ ಚೆನ್ನಾಗಿದೆ. ಅದು ಹಿಂದೆ ಗೋವಾ ರಾಜನ ಅರಮನೆಯಂತೆ. ಮಾಜೀ ಅರಮನೆಯಲ್ಲಿ ಸ್ನಾನ ಮಾಡಿ, ಬಟ್ಟೆ ಬದಲಾಯಿಸಿಕೊಂಡು ತಣ್ಣಗೆ ಒಂದು ಬಿಯರ್ ಹಾಕಿದೆ. ಆಮ್ಲೆಟ್ ತಿಂದುಕೊಂಡು ಸಮುದ್ರದ ಕಡೆ ಹೊರಟೆ. ಅಲ್ಲೆರಡು ಮೂರು ಹಡಗುಗಳು ನಿಂತಿದ್ದವು. ನಾನು ಅದುವ ರೆವಿಗೆ ಹಡಗೇ ನೋಡಿರಲಿಲ್ಲ. ನೋಡಬೇಕೆಂದು ಆಶೆಯಾಯಿತು. ಬಂದರಿನ ಕಡೆ ಹೋಗಲು ಅಲ್ಲಿದ್ದ ಪಹರಾದವನು ಪರ್ಮಿಟ್ ತೆಗೆದುಕೊಳ್ಳಬೇಕೆಂದ.

"ಪರ್ಮಿಟ್ ಕೊಡುವವನು ಯಾರೋ ಪೋರ್ಚುಗೀಸರವ. ಹೋಗಿ ಬಂದರು ನೋಡಲು ಪರವಾನಗಿ ಬೇಕೆಂದೆ"

"ಅವನು ತಪ್ಪುತಪ್ಪು ಇಂಗ್ಲೀಷ್‌ನಲ್ಲಿ "ನೀನೇಕೆ ಬಂದೆ?" ಎಂದ.

"ಈಗಿನಂತೆಯೇ ಆಗಲೂ ಖಾದೀ ಹಾಕಿಕೊಂಡಿದ್ದೆ. ಖಾದಿಯನ್ನು ನೋಡಿ ಕೇಳಿದನೋ ಏನೋ?

"ಗೋವಾಗೆ ಜನರು ಯಾಕೆ ಬರುತ್ತಾರೆಂಬುದು ನಿಮಗೆ ತಿಳಿಯ ದೇನು? ಎರಡು ಕಾರಣಗಳಿಗಾಗಿ ಬಂದಿದ್ದೇನೆ.

"ನನ್ನ ಉತ್ತರ ಅವನಿಗೆ ಪ್ರಿಯವಾಯಿತೋ, ಮತ್ತೇನಾದರೂ ಕಾರ ಣವಿದ್ದಿತೋ ಹೇಳಲಾರೆ. ಒಂದು ಉದ್ದೇಶ ಈಡೇರಿಸಿ ಕೊಡುತ್ತೇನೆ. ಎರಡ ನೆಯದರ ಬಗ್ಗೆ ಹೇಳಲಾರೆ. ಎಂದ"

"ಏನು ಉದ್ದೇಶಗಳು?"

"ಅವಸರ ಪಡಬೇಡ, ಕೇಳು. ಉದ್ದೇಶ ಮತ್ತೇನು? ಮೊದಲು ನಾನು ಹೇಳಿದ್ದೇ. ಮಧು-ಮದವತಿ."

ಶಂಕರ ನಕ್ಕು "ಮುಂದೆ ಹೇಳಿ, ಸ್ವಾರಸ್ಯವಾಗಿದೆ" ಎಂದ.

"ಅಧಿಕಾರಿ ಸ್ಕ್ರೀನೊಳಗೆ ಕರೆದುಕೊಂಡು ಹೋದ. ಅಲ್ಲಿ ವಿಸ್ಕಿ, ಸೋಡಾ; ಗ್ಲಾಸುಗಳು ಸಿದ್ಧವಾಗಿದ್ದವು. ದೊಡ್ಡ ಗ್ಲಾಸಿನ ಮುಕ್ಕಾಲಿನಷ್ಟು ವಿಸ್ಕಿ ಸುರಿದು, ಸೋಡಾ ಸೇರಿಸಿ "ಕುಡಿ" ಎಂದ. ಕುಡಿದೆ. ಅನಂತರ "ಬಂದರು ನೋಡಿಕೊಂಡು ವಾಪ್ಸು ಹೋಗುತ್ತಾ ನನ್ನನ್ನು ಬಂದು ನೋಡು. ಖುಷಿಯಾಗಿ ಸಾಯಂಕಾಲ ಕಳೆಯೋಣ"ವೆಂದ. ಆಗ ಪುನಃ ಅವನನ್ನು ಬಂದು ನೋಡಬೇಕೆಂದುಕೊಂಡೆ. ಪರವಾನಗಿ ಬೇಡವೆಂದೂ ಯಾರಾದರೂ ಕೇಳಿದರೆ ಪೋರ್ಟ್ ಆಫೀಸರ್ ಕಳಿಸಿರುವುದಾಗಿ ಹೇಳಬೇಕೆಂದು ಹೇಳಿದ.

"ಎರಡು ಕಾರ್ಗೋಗಳು. ಅಲ್ಲಿ ನೋಡುವುದೇನೂ ಇರಲಿಲ್ಲ. ಭಾರತದ ಐಶ್ವರ್ಯ, ಐರನ್ ಮ್ಯಾಂಗನೀಸ್‌ಗಳನ್ನು ಹೊತ್ತು ಪೋರ್ಟ್‌ಗಲ್ಲಿಗೆ ಹೋಗಲು ನಿಂತಿದ್ದವು. ಮಾತಿಗೆ ಮಾತು ಬಂತು ಹೇಳುತ್ತೇನೆ, ಶಂಕರು. ಗೋವಾದಲ್ಲಿ ಎಲ್ಲಿ ನೋಡಿದರೂ ಗಣಿ ಅಗೆದು ಒಳ್ಳೆಯ ಕಬ್ಬಿಣ ಮ್ಯಾಂಗನೀಸ್‌ಗಳನ್ನು ತೆಗೆಯುತ್ತಿರುತ್ತಾರೆ. ಅವಷ್ಟೂ ಪೋರ್ಚುಗಲ್‌ಗೆ ಹೊರಟು ಹೋಗುತ್ತವೆ. ಅದನ್ನು ನೋಡಿದಾಗಲೆಲ್ಲಾ ಬೇಗ ಸತ್ಯಾಗ್ರಹ ಆರಂಭವಾಗಿ ಗೋವಾ ನಮಗೆ ಸೇರಿಬಿಡಬಾರದೇ ಎನ್ನಿಸುತ್ತಿತ್ತು.

"ಒಂದು ರೆಗ್ಯುಲರ್ ಷಿಪ್! ಅದೂ ಹೊರಡುವುದರಲ್ಲಿತ್ತು. ಅದರ ಮೇಲೆ ನಿಂತಿದ್ದ ಒಬ್ಬ ಯೂರೋಪಿಯನನ್ನು ಕೇಳಿಕೊಂಡೆ. ಅವನು "ಹೊರಡುವುದುಒಂದು ಗಂಟೆ ಮಾತ್ರವಿದೆ. ಆದರೂ ನಿನಗೆ ತೋರಿಸುತ್ತೇನೆ" ಎಂದ, ಅವನೇನೋ ನಮ್ಮ ಚಿಕ್ಕಪ್ಪನಿದ್ದಂತೆ. ನನ್ನನ್ನು ಕ್ಯಾಪ್ಟನ್ ಒಳಗೆ ಕರೆದುಕೊಂಡು ಹೋಗಿ, ಅವನಿಗೆ-ಹೇಳಿ, ಹಡಗಿನಲ್ಲಿ ರೌಂಡ್ ಕರೆದುಕೊಂಡು ಹೋದ.

"ಮಿರರ್ ರೂಂ ತೋರಿಸುತ್ತಾ "ನಾವು ನೀರಿನಲ್ಲಿ ಮೂವತ್ತು ಅಡಿ ಕೆಳಗಿದ್ದೇವೆ ಗೊತ್ತೇ" ಎಂದ. ಇರಬೇಕು. ಅಲ್ಲಿ ಬಹಳ ಸೆಕೆಯಾಗುತ್ತಿತ್ತು. ಯೂರೋಪು ನೋಡಿದ್ದೀಯಾ ಎಂದ. ಇಲ್ಲವೆಂದೆ. ಹಾಗಾದರೆನಾನು ಕರೆದು

ಕೊಂಡು ಹೋಗುತ್ತೇನೆಂದ. ಪ್ಯಾಸ್‌ಪೋರ್ಟ್ ಇಲ್ಲವೆಂದ. ಅದೇನೂ ಬೇಕಾಗಿಲ್ಲವೆಂದ. "ಹೀಗೆಯೇ ಹೊರಡು. ಹಣವಿಲ್ಲದಿದ್ದರೆ ಪರವಾಯಿಲ್ಲ. ನಾನು ನೋಡಿಕೊಳ್ಳುತ್ತೇನೆ. ಇಲ್ಲಿಂದ ಆಫ್ರಿಕಾಗೆ ಹೋಗುತ್ತೇನೆ. ಅಲ್ಲಿಂದ ಯೂರೋಪ್ ದೇಶವನ್ನು ನೋಡಿದ ಹಾಗಾಗುತ್ತದೆ. ನೀನೇನೋ ಕಾದಂಬರಿಕಾರನೆನ್ನುತ್ತೀಯೆ. ಕಾದಂಬರಿಕಾರರು ದೇಶ ನೋಡುವುದು ಒಳ್ಳೆಯದು" ಎಂದ. ಅಲ್ಲಿಗೆ ನನ್ನ ಜಂಘಾ ಬಲವೇ ಉಡುಗಿಹೋದಂತಾಯಿತು."

"ಯಾಕೆ?"

"ಹಡಗಿನಲ್ಲಿ ಕೆಲಸ ಮಾಡುವವರು ಗಂಡಸರನ್ನು ಹೆಂಗಸರಂತೆಯೇ ಉಪಯೋಗಿಸುತ್ತಾರೆಂದು ಕೇಳಿದ್ದೆ. ಇಂಗ್ಲೀಷ್ ಪುಸ್ತಕಗಳಲ್ಲಿ ಓದಿದ್ದೆ. ತಾನೇ ದುಡ್ಡು ಖರ್ಚು ಮಾಡಿ ನನಗೆ ದೇಶ ತೋರಿಸಬೇಕಾದರೆ! ಅವನು ನೋಡುವುದಕ್ಕೆ ಭೀಮಸಂತಿದ್ದಾನೆ. ಅವನ ಕೈಗೆ ಸಿಕ್ಕಿಕೊಂಡರೆ ನಾನು ತಪ್ಪಿಸಿಕೊಳ್ಳುವುದಕ್ಕಾಗುತ್ತದೆಯೇ? ಏನಾದರೂ ಮಾಡಿ ತಪ್ಪಿಸಿಕೊಂಡು ಹೋಗೋಣವೆಂದು ತೋರಿತು. ಆಗವನಿಗೆ ಹೇಳಿದೆ "ನೀವು ಕರೆದುಕೊಂಡು ಹೋಗುವುದಾದರೆ ಖಂಡಿತ ಬರುತ್ತೇನೆ. ಯೂರೋಪಿಗೆ ಹೋಗಬೇಕೆಂದು ನನಗೆಷ್ಟೋ ಆಸೆ. ಸ್ಟೇಷನ್ನಿನಲ್ಲಿ ಬಟ್ಟೆ ಪಾತ್ರೆಗಳಿವೆ. ಸ್ವಲ್ಪ ದುಡ್ಡಿದೆ. ತಂದುಬಿಡುತ್ತೇನೆ" ಎಂದೆ. "ಬೇಗ ಬಂದುಬಿಡು" ಎಂದು ಹೇಳಿ ಮೇಲೆ ತಂದು ಬಿಟ್ಟ. ಬಂದರಿನ ಕಾಂಪೌಂಡು ದಾಟಿದ ಮೇಲೆ ನಾನೇಕೆ ಅತ್ತ ಕಡೆ ನೋಡಬೇಕು. ಮುಂದಿನ ಗಾಡಿಯಲ್ಲಿಯೇ ಪಂಜಿಂಗೆ ಬಂದುಬಿಟ್ಟೆ."

"ಹಾರ್ಬರ್ ಆಫೀಸರನ್ನು ನೋಡಲಿಲ್ಲವೇನು?"

"ಅವನನ್ನು ನೋಡುವುದಕ್ಕೆ ಹೆದರಿಕೆಯಾಯಿತು. ಅವನು ಅದೇ ಉದ್ದೇಶದಿಂದ ಟಿಕ್ಕೇ ಪಿಸ್ಕಿ ಕೊಟ್ಟಿದ್ದರೆ............"

ಇಷ್ಟು ಹೊತ್ತೂ ಕತೆಯನ್ನು ಕೇಳಿದ ಶಂಕರ ಹೇಳಿದ.

"ನಿಮ್ಮ ಕತೆಯೇನೋ ಆಶ್ಚರ್ಯಕರವಾಗಿಯೇ ಇದೆ. ಆದರೆ ಅದಕ್ಕಿಂತಲೂ ಆಶ್ಚರ್ಯಕರವಾದದ್ದೆಂದರೆ........ ......."

"ಅದಕ್ಕಿಂತಲೂ ಆಶ್ಚರ್ಯಕರವಾದದ್ದೆಂದರೆ...............?"

"ನೀವು ಗಂಡಾಗಿದ್ದುಕೊಂಡು ಯಾವನೋ ನಿಮ್ಮನ್ನು ಹಿಡಿದುಕೊಳ್ಳಲು ಪಟ್ಟ ಪ್ರಯತ್ನವನ್ನು ಹೇಳುತ್ತೀರಲ್ಲಾ"

"ಅದಕ್ಕೇನಂತೆ ಇದ್ದುದನ್ನು ಇದ್ದಂತೆ ಹೇಳುವುದಕ್ಕೆ."

"ಆದರೂ ಇಷ್ಟು ಸ್ಪಷ್ಟವಾಗಿ"

"ವಿಷಯವನ್ನು ವಿಷಯವಾಗಿ ತೆಗೆದುಕೊಳ್ಳಬೇಕು. ವಿಷಯವನ್ನು ಹೇಳುವಾಗ ನಾಚಿಕೆ ಸಂಕೋಚಗಳಿರಬಾರದು."

ಅನಂತರ ಅವರು ಯಾವ ವಿಷಯವನ್ನು ಕುರಿತೂ ಪೂರ್ಣವಾಗಿ ಮಾತನಾಡಲಿಲ್ಲ. ಏನೋ ಅರ್ಧ ಪ್ರಶ್ನೆ, ಅರ್ಧ ಉತ್ತರ ಕೊಟ್ಟುಕೊಂಡಿದ್ದರು. ಕೆಲವು ಬಾರಿ "ಹುಂ" ಎಂಬ ಶಬ್ದವೇ ಉತ್ತರವಾಗಿರುತ್ತಿದ್ದುದೂ ಉಂಟು.

ಬಾಗಿಲು ತೆಗೆದುಕೊಂಡು ಕೃಷ್ಣ ಒಳಗೆ ಬಂದು ಹೇಳಿದ.

"ನಿಮಗೇನು ಊಟಗೀಟ ಬೇಕೋ ಬೇಡವೋ ಸ್ವಾಮಿ."

"ಈಗಾಗಲೇ ಅಷ್ಟು ಹೊತ್ತಾಯಿತೇ ?"

"ಇದನ್ನು ಇಟ್ಟುಕೊಂಡು ಕುಳಿತರೆ ಗಂಟೆ ಗೊತ್ತಾಗುತ್ತದೆಯೆ ? ಆಗಲೇ ಎಂಟುಮುಕ್ಕಾಲು ಗಂಟೆ. ಈಗಲೇ ಹೇಳದಿದ್ದರೆ ಊಟವಿರುವುದಿಲ್ಲ."

"ಊಟ ಬೇಡ. ಒಂದು ಕೆಲಸಮಾಡು. ಏದಾರು ಚಪಾತಿ ಪಲ್ಯಗಳನ್ನೂ, ಎರಡು ಬಟ್ಟಲು ಹಾಲನ್ನೂ, ತಂದು ಇಟ್ಟುಬಿಡು. ಹಸಿವಾದಾಗ ಬಾಯಿಗೆ ಹಾಕಿಕೊಳ್ಳುತ್ತೇವೆ."

ಕುಳಿತಿದ್ದವರ ಕಡೆಯೇ ನೋಡುತ್ತಾ ಕೃಷ್ಣ ಹೊರಗೆ ಹೋದ. ಅವನೊಂದಿಗೆ ಮಾತನಾಡಿದ ವಾಸುದೇವ ಅನಂತರ ಶಂಕರನಿಗೆ ಹೇಳಿದ.

"ನೀನೇನು ವ್ಯಸನ ಪಡಬೇಡ, ಶಂಕರು. ಈ ದಿನ ನಿನಗೆ ಸಾಂಗೋಪಾಂಗವಾಗಿ ಮಾಡಿಸುತ್ತೇನೆ"

ಶಂಕರ ವಿಸ್ಮಯದಿಂದ ಕೇಳಿದ.

"ಏನು ಮಾಡಿಸುತ್ತೀರೋ ?"

"ನಿನ್ನೆಯ ದಿನ ರಾತ್ರಿ ಏನು ಆಗಲಿಲ್ಲವೋ ಅದನ್ನು ಈ ರಾತ್ರಿ ಮಾಡಿಸುತ್ತೇನೆ"

"ಬೇಡ————"

"ಯಾಕೆ ಬೇಡ ?"

"ಅದನ್ನು ಕೇಳಬೇಡಿ. ನನಗಂತೂ ಬೇಡ. ನೀವೇನು ಬೇಕೋ ಮಾಡಿಕೊಳ್ಳಿರಿ"

"ಅಲ್ಲಾ. ನಿನಗೆ ಯಾಕೆ ಹಾಗಾಯಿತೆಂಬುದನ್ನು ಬಲ್ಲೆಯೋ ?"

ಶಂಕರ ಬಲ್ಲೆನೆಂದುಕೊಂಡಿದ್ದ. ಆದರೂ ಅವನೇನು ಹೇಳುತ್ತಾನೆಂದುಕೊಂಡು ನೋಡಿದ.

"ನಿನಗೆ ಮೊದಲನೆಯ ಸಾರಿ. ಅದರಿಂದ ಆಗಲಿಲ್ಲ. ಸ್ವಲ್ಪ ಪ್ರಯತ್ನ ಮಾಡಿದರೆ ಸರಿಹೋಗುತ್ತದೆ"

ಸರಿಹೋಗುವುದಿಲ್ಲವೆಂದು ಶಂಕರನಿಗೆ ತೋರುತ್ತಿತ್ತು.

"ನಾನು ಬೇಡ ಎಂದೆನಲ್ಲಾ"

"ಹಾಗೆ ಬಿಡಬಾರದು, ಮಗು. ಬಿಟ್ಟರೆ ಮುಂದೆ ಬಹಳ ಬಾಧಕವಾಗುತ್ತದೆ. ಹೀಗಾದರೆ ಅಲ್ಲಲ್ಲೇ ಸರಿಮಾಡಿಕೊಳ್ಳಬೇಕು"

"ನಿಮಗೆ ನನ್ನ ವಿಷಯ ತಿಳಿಯದು. ಅದು ಹಾಗೆ ಸರಿಹೋಗುವುದಿಲ್ಲ"

ಶಂಕರ ಉದ್ವೇಗದಿಂದ ಮಾತನಾಡಿದ. ವಾದವಿವಾದಗಳನ್ನು ಕೇಳಿ ಕಡೆಯಲ್ಲಿ ತೀರ್ಮಾನವನ್ನು ಹೇಳುವವನಂತೆ ಇತ್ತು, ಅವನು ಹೇಳಿದ ಬಗೆ.

ವಾಸುವಿಗೂ ಗಳಿಗೆಯ ಹೊತ್ತು ದಿಗ್ಭ್ರಮೆಯಾಯಿತು. ಮರುಗಳಿಗೆಯಲ್ಲಿಯೇ ಸರಿಮಾಡಿಕೊಂಡ.

"ಏನು ಹೇಳಬಾರದೇ ?"

"ಅದೊಂದನ್ನು ಕೇಳಬೇಡಿರೆಂದೆನಲ್ಲಾ"

"ಇದಕ್ಕೆಲ್ಲಾ ಸಂಕೋಚಿಸಬಾರದು. ಇದರಲ್ಲೆಲ್ಲಾ ನಾಚಿಕೆ ಎಂದರೇನು ? ಏನು ವಿಷಯ ಹೇಳು"

"————————————

"ಪ್ರೀತಿಸದ ಹುಡುಗಿಯ ಹತ್ತಿರ ಹೋಗಬಾರದೆಂದು ನಿನ್ನ ಭಾವನೆಯೇನು ? ಮನಸ್ಸಿನ ಆಲೋಚನೆಗಳಿಗೂ ದೇಹದ ಕ್ರಿಯೆಗಳಿಗೂ ಸಂಬಂಧವಿಲ್ಲ"

"————————————"

"ನೀನು ಹೇಳಿದೆಯಲ್ಲ. ಅವಳು ಬಂದವಳೇ ಮಲಗಿ "ಬಾ" ಎಂದಳೆಂದು. ಈ ದಿನ ಹಾಗಾಗದಂತೆ ನೋಡಿಕೊಳ್ಳುತ್ತೇನೆ. ಇಲ್ಲಿಗೇ ಹುಡುಗಿಯರನ್ನು ಕರೆಸುತ್ತೇನೆ. ಅವಳು ರಾತ್ರಿಯೆಲ್ಲಾ ಇರುವಂತೆ ಮಾಡುತ್ತೇನೆ.

ಸ್ತ್ರೀ ಸಂಗದಲ್ಲಿ ನಿನಗೆ ಭಯವಿರಬಹುದು. ರಾತ್ರಿಯೆಲ್ಲಾ ಅವಳು ನಿನ್ನೊಂದಿಗಿರುವುದರಿಂದ ಭಯವಾಗುವುದಿಲ್ಲ. ಆದರೂ ಸರಿಹೋಗುತ್ತದೆ. ಒಂದು ಬಾರಿ ಸರಿಹೋದರೆ ಅನಂತರ ಸರಿಹೋಗುತ್ತದೆ. ಕಾಸುಕೊಟ್ಟು ಪಡೆದುಕೊಳ್ಳುವ ಹೆಂಗಸಿನಲ್ಲಿ ಪ್ರೀತಿಯನ್ನು ಅರಸಬಾರದು."

"ಪ್ರೀತಿಯ ವಿಷಯವನ್ನಲ್ಲ, ನಾನು ಹೇಳಿದುದು."

"ಮತ್ತೆ ಹಾಗೆ ಹೇಳಿದೆಯಲ್ಲಾ——"

"ನನಗೇನೋ ಆಗಿದೆ. ಆದರೆ ಇನ್ನೇನೋ ಆಗಿದೆ ಎಂದು ಮನಸ್ಸಿನಲ್ಲಿ ಭಾಸವಾಗುತ್ತದೆ. ಈ ದಿನ ನನ್ನನ್ನು ಬಿಟ್ಟುಬಿಡಿ."

"ಯಾಕೆ ಬಿಡಬೇಕು ? ಅದನ್ನಾದರೂ ಹೇಳಿಬಿಡು. ನಿನಗೆ ಬೇಡವಾದರೆ ಬೇಡ. ನಾನೇಕೆ ಬಲತ್ಕಾರ ಮಾಡಬೇಕು?"

"................................"

"ನನ್ನೊಂದಿಗೆ ಮಾತನಾಡಲು ಸಂಕೋಚವೇ, ಮಗು"

ಅವನೊಂದಿಗೆ ಮಾತನಾಡಲು ಸಂಕೋಚವೇಕೆ ಪಡಬೇಕು? ಗೋವಾದಲ್ಲಿ ಹಡಗಿನಿಂದ ಓಡಿಬಂದ ವಿಷಯವನ್ನು ಸ್ಪಷ್ಟವಾಗಿ ಹೇಳಿದ್ದಾನೆ. ಅವನೊಂದಿಗೆ ಸಂಕೋಚವೇನು ? ತಾನು ಹೆಣ್ಣಿನೊಡನೆ ಇರಲಾಗದೇ ಇರುವ ಷಂಡನೆಂದು ಅವನಿಗಿಗಾಗಲೇ ಗೊತ್ತಾಗಿದೆ. ಇದೂ ಗೊತ್ತಾಗಲಿ. ಏನಾದರೂ ಆಗಲಿ ಎಂದುಕೊಂಡ.

ಹೇಳಲು ಹೊರಟ. ಮಾತು ಅರ್ಧದಲ್ಲಿಯೇ ನಿಂತುಹೋಯಿತು.

"ಹೇಳು, ಮಗು. ಸಂಕೋಚ ಪಡಬೇಡ. ಏನಿದ್ದರೂ ಹೇಳು. ಪರವಾಯಿಲ್ಲ."

ಶಂಕರ ಮತ್ತೊಂದು ಗುಟುಕು ಬ್ರಾಂದಿಯನ್ನು ಕುಡಿದ. ಅದರಿಂದ ಧೈರ್ಯ ಬಂದಿತೆಂದುಕೊಂಡು ಹೇಳಿದ.

"ನಾನು ಸ್ವರತಿನಿರತನಾಗಿದ್ದೆ. ಅದರಿಂದಲೇ ಹೆಂಗಸಿನ ಬಳಿ ಹೋಗಲು ನನ್ನಿಂದ ಆಗುವುದಿಲ್ಲ."

ಅದರಿಂದ ವಾಸುವಿನ ಮನಸ್ಸಿನ ಮೇಲೆ ಎನೋ ಪರಿಣಾಮವಾಗುತ್ತದೆಂದು ಶಂಕರ ಭಾವಿಸಿದ್ದ. ಆದರೆ ಏನೂ ಆಗಲಿಲ್ಲ.

[೮]

"ಸ್ವರತಿ ಎಂದರೆ ?"

"ಸ್ವರತಿ ಎಂದರೆ ಸ್ವರತಿ. ಮತ್ತೇನು ಹೇಳಲಿ ?"

ಹಾಗಲ್ಲ ಮಗು. ಅದರಲ್ಲಿ ಎಷ್ಟೋ ಬಗೆಗಳು."

"ಹಸ್ತ................"

"ಸಾಕು ನಿಲ್ಲಿಸು. ಅದರಿಂದ ಇಷ್ಟು ಭಯಪಡುತ್ತೀಯಾ? ಅದಂತೂ ಕೆಟ್ಟದು. ಆದರೆ ಅದಕ್ಕಾಗಿಯೇ ಕೊರಗಬೇಡ. ನೀನು ಹೇಳಿದಂತೆ ಅದರಿಂದ ಹಾಗಾಗಲಿಲ್ಲ."

ಶಂಕರನಿಗಂತೂ ಆಶ್ಚರ್ಯವಾಯಿತು.

"ಹಾಗಾದರೆ ಯಾಕೆ ಹಾಗಾಯಿತು?"

"ಮೊದಲೇ ಹೇಳಿದೆನಲ್ಲಾ. ಮನಸ್ಸಿನ ಹೆದರಿಕೆಯಿಂದ ಹಾಗಾಗಿದೆ. ಸ್ವರತಿ ಮಾಡಿಕೊಂಡುದರಿಂದ ನನ್ನ ಜೀವನವೇ ಹಾಳಾಗಿಹೋಯಿತೆಂದು ಭಾವಿಸುವುದರಿಂದ ಹಾಗಾಗಿದೆ. ನಾನು ಹೇಳಿದಂತೆ ಕೇಳು."

"ಈ ದಿನವೇ ಆಗಬೇಕೇ ? ಮತ್ತೊಂದು ದಿನ ಆಗಲಿ."

"ಈ ದಿನವೇ ಆಗಬೇಕು."

ವಾಸುದೇವ ಹೊರಗೆ ಹೋಗಿ ವರಾಂಡದಲ್ಲಿ ನಿಂತುಕೊಂಡು ಕೃಷ್ಣನನ್ನು ಕೂಗಿದ. ಅವನು ಬಂದೊಡನೆಯೇ ಹೇಳಿದ.

"ಕೃಷ್ಣ. ಅತ್ತ ಕಡೆ ಹೋಗಿ ಒಂದಿಬ್ಬರು ಹುಡುಗಿಯರನ್ನು ಕರೆದುಕೊಂಡು ಬಾ. ಸ್ವಲ್ಪ ಮುಖ ನೋಡುವ ಹಾಗಿರಲಿ."

"ಅಲ್ಲ................"

"ಬಾ ಎಂದರೆ ಅವರು ಬರುವುದಿಲ್ಲವೆನ್ನುತ್ತಾರೆಯೇ"

"ಬರುತ್ತಾರೆ. ಆದರೆ ನಮ್ಮ ಯಜಮಾನರಿಗೆ ತಿಳಿದರೆ.............."

"ತಿಳಿದರೆ ? ಮಹಾ ದೊಡ್ಡ ಮನುಷ್ಯ. ಅವನ ತಲೆ ಬೋಳಿಸಿತು."

"ಹಾಗಲ್ಲ, ಸ್ವಾಮಿ. ನೀವು ಹೇಳಿದ ಮೇಲೆ ನಾನು ಕರೆಯುವುದಿಲ್ಲವೇ?

"[illegible] ಹೋಗಿ ಕರೆದುಕೊಂಡು ಬಾ, ಮತ್ತೆ."

"[illegible]ತರುತ್ತೇನೆ."

"ಏನು ನಿಂತಿದ್ದೀ, ಹೇಳು."

ಕೃಷ್ಣ ಹೇಳದೆಯೇ ವಾಸುದೇವನಿಗೆ ವಿಷಯ ಗೊತ್ತಾಯಿತು.

"ನೀನು ಊಟದ ನೆಪವಿಟ್ಟು ಬಂದಾಗಲೇ ನನಗೆ ಗೊತ್ತಾಯಿತು. ನೀನು ಬಂದುದು ಊಟ ಕೇಳುವುದಕ್ಕಲ್ಲ. ಇಲ್ಲಿ ಪಾನಕ ಸಿಗುವುದೇನೋ ಎಂದು. ಹೋಗಿ ಕರೆದುಕೊಂಡು ಬಂದು, ಕುಡಿ. ಈಗಲೇ ಕುಡಿದುಕೊಂಡು ಹೊರಟರೆ ನಾನೂ ನೀನೂ ಇಬ್ಬರೂ ಜೈಲಿಗೆ ಹೋಗಬೇಕಾಗುತ್ತದೆ. ಈ ಹಾಳು ಕಾಂಗ್ರೆಸ್ ರಾಜ್ಯಭಾರದಲ್ಲಿ.

ಹುಡುಗಿಯರನ್ನು ಕರತರಲು ಕೃಷ್ಣ ಹೊರಟ.



ಕೃಷ್ಣ ಇಬ್ಬರನ್ನು ತಂದುಬಿಟ್ಟು, ಅರ್ಧ ಗ್ಲಾಸಿನಷ್ಟು ಬ್ರಾಂದೀ ಬಗ್ಗಿಸಿಕೊಂಡು ಕುಡಿದು ತನ್ನ ಪಾಡಿಗೆ ತಾನು ಹೊರಟುಹೋದ.

ಆ ಇಬ್ಬರು ಹುಡುಗಿಯರೂ, ಇಬ್ಬರು ಸ್ನೇಹಿತರೂ ಕುಳಿತು ಕುಡಿಯುತ್ತಾ ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು. ಎಷ್ಟೋ ದಿನಗಳ ಮೇಲೆ ಕುಡಿತವು ಲಭ್ಯವಾದುದರಿಂದಲೂ ತಾಜಾ ಮಾಲು ಸಿಕ್ಕಿದುದರಿಂದಲೂ ಆ ಹುಡುಗಿಯರಿಗೆ ಆನಂದವಾಗಿತ್ತು.

ವಾಸುದೇವ ಹುಡುಗಿಯೊಬ್ಬಳನ್ನು ಕರೆದುಕೊಂಡು ಒಳ ಕೋಣೆಗೆ ಹೋಗಿ ಅವಳೊಡನೆ ಏನೋ ಮಾತನಾಡಿ ಹೊರಗೆ ಬಂದ. ಅನಂತರ ಶಂಕರನನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಅವನಿಗೆ ಮಾತ್ರ ಕೇಳಿಸುವಂತೆ ಹೇಳಿದ.

"ನೋಡು, ಶಂಕರು. ನಾನು ಅವಳಿಗೆ ಸರಿಯಾಗಿ ಹೇಳಿದ್ದೇನೆ. ಸ್ವಲ್ಪವೂ ಅವಸರ ಪಡಬೇಡ. ಎಷ್ಟು ನಿಧಾನವಾದರೂ ಚಿಂತೆಯಿಲ್ಲ. ಅವಳೆಲ್ಲಿಯೂ ಓಡಿಹೋಗುವುದಿಲ್ಲ. ರಾತ್ರಿ ಎಲ್ಲಾ ಇಲ್ಲಿಯೇ ಬಿದ್ದಿರುತ್ತಾಳೆ. ಬೇಕಾದರೆ ನಾಳೆ ಇಷ್ಟು ಹೊತ್ತಿನವರೆವಿಗೂ ಇರುವಂತೆ ಹೇಳುತ್ತೇನೆ. ನೀನು ಏನೋ ಮಾಡಿಕೊಳ್ಳುತ್ತಿದ್ದೇನೆಂಬೋ, ಮಾಡಿಕೊಳ್ಳುತ್ತಿರುವುದಾಗಿಯೋ

ಹೇಳಿದೆಯಲ್ಲಾ, ಆದರಿಂದ ನಿನಗೆ ಷಂಡತ್ವ ಬಂದಿದೆ ಎಂದುಕೊಳ್ಳಬೇಡ. ತಪ್ಪು ಮಾಡಿರುವುದಾಗಿ ಭಾವನೆ ಮಾಡಬೇಡ. ಧೈರ್ಯವಾಗಿರು."

ಶಂಕರ ಹಿಂದಿನ ಕೋಣೆಗೆ ಹೋದ. ಅಲ್ಲಿ ಹಾಸಿಗೆಯ ಮೇಲೆ ಆ ಹುಡುಗಿ ನಗುತ್ತಾ ಕುಳಿತಿದ್ದಳು. ಅವನು ಬಂದೊಡನೆಯೇ ಎದ್ದು ಮುಂದೆ ಬಂದಳು. ಆದರೆ ಅವನನ್ನು ಸ್ಪರ್ಶಿಸಲಿಲ್ಲ. ಸಮೀಪಿಸಲಿಲ್ಲ, ಮಾತನಾಡಲಿಲ್ಲ. ತನ್ನಷ್ಟಕ್ಕೆ ತಾನು ಹೋಗಿ ಬಾಗಿಲು ಸೇರಿಸಿ ಚಿಲುಕ ಹಾಕಿದಳು.

ಅನಂತರ ಹಿಂತಿರುಗಿದಳು. ಒಳಗೆ ಬಂದಾಗ ಶಂಕರ ಎಲ್ಲಿ ನಿಂತಿದ್ದನೋ ಅಲ್ಲಿಯೇ ನಿಂತಿದ್ದ. ಅದನ್ನು ನೋಡಿ ಹೇಳಿದಳು.

"ನಿಂತೇ ಇದ್ದೀರಲ್ಲಾ, ಕುಳಿತುಕೊಳ್ಳಬಾರದೆ?"

ಕುರ್ಚಿಯಿತ್ತು, ಅಲ್ಲಿಯೇ ಕುಳಿತುಬಿಡುತ್ತಿದ್ದ. ಆದರೆ ಆಮೇಲಾದರೂ ಹಾಸಿಗೆಯ ಮೇಲೆಯೇ ತಾನೇ ಹೋಗಿ ಕುಳಿತುಕ್ಕೊಬೇಕು–ಎಂದು ಹಾಸಿಗೆಯ ಮೇಲೆಯೇ ಕುಳಿತುಕೊಂಡ.

ಅವನೇನಾದರೂ ಮಾತನಾಡಿಸುತ್ತಾನೋ ಎಂದು ಗಳಿಗೆ ತಡೆದು ನೋಡಿದಳು. ಅವನು ಮಾತನಾಡಲಿಲ್ಲ.

"ನಿಮ್ಮ ಸ್ನೇಹಿತರು ಅಷ್ಟೊಂದು ಸಿಗರೇಟು ಸೇದುತ್ತಾರೆ. ನೀವು ಮಾತ್ರ ಸಿಗರೇಟಿಲ್ಲದೆಯೇ ಕುಳಿತಿದ್ದೀರಲ್ಲಾ."

ಇಂತಹ ಸಮಯದಲ್ಲಿ ವಾಸುದೇವನಾದರೂ ಸಿಗರೇಟು ಹಚ್ಚುತ್ತಿದ್ದನೋ, ಇಲ್ಲವೋ ? ಆದರೂ ಏನಾದರೂ ಮಾತನಾಡಬೇಕಲ್ಲ ಎಂದವಳು ಆ ಪ್ರಶ್ನೆಯನ್ನು ಹೇಳಿದ್ದಳು.

ಉತ್ತರ ಹೇಳಬೇಕೆಂದುಕೊಂಡ. ಎದೆ ಹೊಡೆದುಕೊಳ್ಳುತ್ತಿತ್ತು. ಮೈ ನಡುಗುತ್ತಿತ್ತು. ಪ್ರಯತ್ನಪಟ್ಟು ಉತ್ತರ ಹೇಳಿದ. ದನಿಯು ಅಸ್ಪಷ್ಟವಾಗಿತು.

"ಏನೋ, ಸೇದಲಿಲ್ಲ, ಅಷ್ಟೇ"

ಸಿಗರೇಟು ಪ್ಯಾಕ್ ಬೆಂಕಿಪಟ್ಟಣಗಳನ್ನು ತಿಳಿದೋ ತಿಳಿಯುವೇನೋ ಹಿಡಿದುಕೊಂಡು ಬಂದಿದ್ದ. ಅದವನ ಕೈಯಲ್ಲಿಯೇ ಇದ್ದಿತು. ಅವಳು ಅದನ್ನು ತೆಗೆದುಕೊಂಡು ಸಿಗರೇಟು ಕೊಟ್ಟಳು. ಅವನು ಬಾಯಲ್ಲಿಟ್ಟುಕೊಂಡ ನಂತರ ಹಚ್ಚಿದಳು.

ಹೊಗೆ ಎಳೆದುಬಿಡುತ್ತಾ ಅವಳ ಕಡೆಗೆ ನೋಡುತ್ತಿದ್ದ. ಹೊಗೆ ಗಂಟಲಿನಲ್ಲಿ ಸಿಕ್ಕಿಕೊಳ್ಳದಂತೆ ಎಚ್ಚರಿಕೆಯಾಗಿ ಸೇದುತ್ತಿದ್ದ.

"ನಾನು ನಿಮ್ಮ ಪಕ್ಕದಲ್ಲಿ ಕುಳಿತುಕೊಳ್ಳಬಹುದೋ ?"

"ಹೂಂ"

ಕುಳಿತುಕೊಂಡಳು. ಮೈತಗಲುವಂತೆ ಕುಳಿತುಕೊಂಡಳು. ಅವನ ಹೆಗಲ ಮೇಲೆ ಬಲತೋಳು ಹಾಕಿದಳು.

"ನಿಮ್ಮ ಹೆಸರೇನು ?"

"ಶಂಕರ"

"ಶಂಕರ. ಎಷ್ಟೋ ಮುದ್ದಾದ ಹೆಸರು."

ತನ್ನ ಹೆಸರೇನೆಂದು ಅವನು ಕೇಳುತ್ತಾನೆಂದು ನಿರೀಕ್ಷಿಸಿದಳು. ಅವನು ಕೇಳಲಿಲ್ಲ.

"ನಿಮಗೆ ನನ್ನ ಹೆಸರು ತಿಳಿದುಕೊಳ್ಳ ಬೇಕೆನ್ನಿಸುವುದಿಲ್ಲವೇ ?"

"ಹೌದು. ಮರೆತುಬಿಟ್ಟಿದ್ದೆ. ನಿಮ್ಮ ಹೆಸರೇನು ?"

"ನಿಮ್ಮ-ಎನ್ನಬೇಡಿ ಗಂಡಸರು ಹೆಂಗಸರನ್ನು ಬಹುವಚನದಲ್ಲಿ ಕರೆಯಬಾರದು. ನನ್ನನ್ನು ಏಕವಚನದಲ್ಲಿ ಮಾತನಾಡಿಸಿ."

"——————————"

"ಎಲ್ಲಿ ? ನನ್ನ ಹೆಸರು ಏನೆಂದು ನೀವು ಕೇಳಲೇ ಇಲ್ಲವಲ್ಲ"

"ನಿನ್ನ ಹೆಸರೇನು ?"

"ಕನಕಾಂಗಿ. ನನ್ನ ಹೆಸರು ನಿಮ್ಮ ಮನಸ್ಸಿಗೆ ಹೇಗೆನ್ನಿಸುತ್ತದೆ."

"ಕನಕಾಂಗಿ. ಚೆನ್ನಾಗಿಯೇ ಇದೆ"

"ಕನಕಾಂಗಿ-ಎನ್ನಬೇಡಿ. ಕನಕ ಎನ್ನಿ. ಎಲ್ಲಿ ಹೇಳಿ"

"ಕನಕ"

"ಆ. ಅದು ಸರಿ. ನಾನೂ ಸಿಗರೇಟು ಹಚ್ಚಿಕೊಂಡರೆ ನಿಮ್ಮ ಮನಸ್ಸಿಗೆ ಬೇಜಾರಾಗುತ್ತದೆಯೋನೋ ?"

"ಏನಿಲ್ಲ"

ಅವಳು ಸಿಗರೇಟು ತೆಗೆದು ಹಚ್ಚಿಕೊಂಡಳು. ಹಚ್ಚಿಕೊಳ್ಳುವಾಗ ಅವಳ ಸೆರಗು ಸ್ವಲ್ಪ ಜಾರಿತು.

ಅವಳ ಭುಜಗಳನ್ನು ನೋಡಿದ. ಕಮಲದ ಜೊತೆ ಮೊಗ್ಗುಗಳಂತೆ ಕಂಚುಕದಲ್ಲಿ ಅಡಗಿದ್ದ ಕುಚಗಳನ್ನು ನೋಡಿದ.

ಅವನ ಎದೆ ಜೋರಾಗಿ ಹೊಡೆದುಕೊಂಡಿತು.

ಸಿಗರೇಟಿನ ಹೊಗೆಯನ್ನು ಎರಡು ಮೂರು ಬಾರಿ ಬಿಟ್ಟು, ಕೇಳಿದಳು.

"ಹೆಂಗಸರು ಸಿಗರೇಟು ಸೇದಿದರೆ ನಿಮಗೆ ಸರಿಬೀಳುವುದಿಲ್ಲವೇನೋ ಎಂದುಕೊಂಡೆ"

"ಹಾಗೇನೂ ಇಲ್ಲ"

ಸಿಗರೇಟು ತುದಿಯನ್ನು ಬೆರಳು ಗಂಟಿನ ಬಳಿ ಇಟ್ಟುಕೊಂಡು, ತನ್ನ ಮೃದುವಾದ ಬಲ ಹಸ್ತವನ್ನು ಪೂರ್ಣವಾಗಿ ಮುಖದ ಕೆಳಭಾಗದಲ್ಲಿಟ್ಟು ಕೊಂಡು ಒಂದು ದಂ ಎಳೆದಳು. ಅನಂತರ ಕೈ ತೆಗೆದು ನಕ್ಕಳು. ನಕ್ಕಾಗ ಬಾಯಿ ತೆರೆಯಲ್ಪಟ್ಟಿತು. ಅದರಿಂದ ನಿದಾನವಾಗಿ ಹೊಗೆ ಹೊರಗೆ ಬಂದಿತು.

ಪೂರ್ಣವಾಗಿ ಹೊಗೆ ಹೋಗುವವರೆವಿಗೆ ಸುಮ್ಮನಿದ್ದು ಹೇಳಿದಳು.

"ನೀವು ಚೆನ್ನಾಗಿದ್ದೀರಿ. ನಿಮ್ಮ ಹೆಸರು ಚೆನ್ನಾಗಿದೆ. ನಿಮ್ಮನ್ನು ಕಂಡರೆ ನನಗೆ ಹೇಗೆ ಹೇಗೆಯೋ ಆಗುತ್ತದೆ"

ಅವನ ಪ್ರತಿಕ್ರಿಯೆಯೊಂದನ್ನೂ ನಿರೀಕ್ಷಿಸದೇ ಎರಡು ಹಸ್ತಗಳನ್ನೂ ಅವನ ಎರಡು ಕೆನ್ನೆಗಳ ಮೇಲಿಟ್ಟು, ಮುಖವನ್ನು ಮುಂದೆ ಎಳೆದುಕೊಂಡು ತುಟಿಗಳನ್ನು ಚುಂಬಿಸಿದಳು. ಪುನಃ ಪುನಃ ಚುಂಬಿಸಿದಳು. ಚುಂಬನಾ ನಂತರದಲ್ಲಿ ಅವನ ಕೆಳತುಟಿಯನ್ನು ಸ್ವಲ್ಪ ನೋಯುವಂತೆ ಕಚ್ಚಿದಳು.

"ನೋವಾಯಿತೇ ?"

"ಇಲ್ಲ"

ಒಂದುಗಳಿಗೆ ಬಿಟ್ಟು ಕೇಳಿದಳು.

"ನಾನು ಚೆನ್ನಾಗಿಲ್ಲವೇ ?"

ಅವಳು ಚೆನ್ನಾಗಿಲ್ಲವೆಂದುಕೊಳ್ಳುವುದು ಸಾಧ್ಯವೇ ಇರಲಿಲ್ಲ. ಬಹಳ ಚೆನ್ನಾಗಿದ್ದಳು.

"ಚೆನ್ನಾಗಿಯೇ ಇದ್ದೀಯೆ ?"

"ಮತ್ತೆ ?"

"————————"

"ನನ್ನ ಕಣ್ಣುಗಳು, ಮುಂಗೂದಲು, ಕೆನ್ನೆ, ತುಟಿಗಳನ್ನು ನೀವು ನೋಡಲಿಲ್ಲವೇ ? ಅವೆಲ್ಲವೂ ಚೆನ್ನಾಗಿದ್ದಿದ್ದರೆ ಮುತ್ತಿಡಬೇಕೆಂದು ನಿಮಗೂ ತೋರುತ್ತಿತ್ತು"

"ಇಲ್ಲ. ಹಾಗಲ್ಲ"

"——————————"

"ನಿಮಗೆ ಭಯವೇನೋ ?"

"ಇಲ್ಲ"

"ಅದು ಸರಿ. ಭಯಪಡುವುದಕ್ಕೆ ಇಲ್ಲೇನಿದೆ?"

ಪುನಃ ಅವಳೇ ಕೇಳಿದಳು.

"ನೀವು ನನ್ನನ್ನು ಪ್ರೀತಿಸುತ್ತೀರಲ್ಲವೇ?"

"ಪ್ರೀ— —ತಿ— — ಸು— —"

"ಪೂರಾ ಬಾಯಿ ಬಿಟ್ಟು ಹೇಳಿ. ಪ್ರೀತಿಸುವುದು ನಿಜವಾದರೆ ಪ್ರೀತಿಸುತ್ತೇನೆಂದು ಹೇಳಿ."

"ಪ್ರೀತಿಸುತ್ತೇನೆ."

"ಹಾ, ಹಾಗೆನ್ನಿ."

ಪಕ್ಕದಲ್ಲಿ ಕುಳಿತಿದ್ದ ಕನಕ ಹೇಳಿದನು.

"ಇದೇನು ಕೋಟು ಹಾಕೊಂಡೇ ಕುಳಿತಿದ್ದೀರಿ. ಇದು ಮೈಗೆಲ್ಲಾ ಚುಚ್ಚಿಕೊಳ್ಳುತ್ತದೆ."

ಖಾದೀ ಉಲ್ಲನ ಕೊಡು. ಕನಕಳಿಗೆ ಒರಟಾದ ಆ ಬಟ್ಟೆ ಅಹಿತವುಂಟು ಮಾಡಿದ್ದಿರಬಹುದು. ಪಕ್ಕದ ಕೋಣೆಯಲ್ಲಿ ಕುಳಿದ್ದಾಗ ಚಳಿಯಾಗಿ ಹಾಕಿಕೊಂಡಿದ. ಇನ್ನೂ ಅದು ಮೇಲೆಯೇ ಇದ್ದಿತು.

ಅವಳು ಕೋಟು ತೆಗೆಯುವುದಕ್ಕೆ ಹೋದಳು. ಅವನು ನಡುವೆ ಕೈ ಹಾಕಿ ತಾನೇ ತೆಗೆಯಲು ಹೋದ.

"ನಾನು ತೆಗೆಯಬಾರದೇ?"

ಅವನು ಕೈ ಬಿಟ್ಟುಬಿಟ್ಟ. ಅವಳೇ ತೆಗೆದಳು. ಕೋಟನ್ನು ಕೈಯಲ್ಲಿಯೇ ಹಿಡಿದುಕೊಂಡು ಕೇಳಿದಳು.

"ಇದರಲ್ಲಿ ಬಹಳ ದುಡ್ಡಿಟ್ಟಿದ್ದೀರೋ ಏನೋ ? ಅದರಿಂದಲೇ ನಾನು ಕೋಟು ತೆಗೆಯುವುದಕ್ಕೆ ಹೋದರೆ ಕೈ ಹಾಕಿದಿರಿ."

"ಹಾಗೇನೂ ಅಲ್ಲ."

"ಇದರಲ್ಲೇನು ಬಹಳ ದುಡ್ಡಿಟ್ಟಿದ್ದೀರಾ?"

"ಏನೋ ಸ್ವಲ್ಪ ಇದೆ."

ಸ್ವಲ್ಪ ಹೆಚ್ಚಾಗಿಯೇ ಇತ್ತು. ಹಿಂದಿನ ರಾತ್ರಿ ಪೆಟ್ಟಿಗೆಯಲ್ಲಿ ಹಾಕಿದ್ದ ವನು ಈ ದಿನ ಬೆಳಗಾಗ ಜೇಬಿನಲ್ಲಿರಲಿ ಎಂದು ತೆಗೆದಿಟ್ಟುಕೊಂಡಿದ್ದ.

"ಎಷ್ಟಿದೆಯೋ ನೋಡಲೇನು ?"

ಎದುರಿಗೆ ಸುಂದರಿಯೂ ಯುವತಿಯೂ ಆದ ಹೆಂಗಸು ಕುಳಿತು, ಅಷ್ಟುಹೊತ್ತಿನಲ್ಲಿ ಹಾಗೆ ಕೇಳಿದರೆ ಹೇಗೆ ತಾನೇ ಇಲ್ಲವೆಂದಾನು.

"ಅದಕ್ಕೇನು ನೋಡು."

ಅವಳು ಜೇಬಿನಲ್ಲಿದ್ದ ನೋಟುಗಳನ್ನು ತೆಗೆದಳು. ಹೊಸ ಹತ್ತು ರೂಪಾಯಿನ ನೋಟುಗಳು, ತೆಗೆದು ಎಣಿಸಿದಳು.

"ಒಂದು–ಎರಡು–ಮೂರು ಇಪ್ಪತ್ತು. ಇನ್ನೂರು ರೂಪಾಯಿಗಳಿವೆ."

ಶಂಕರ ಸುಮ್ಮನಿದ್ದ.

"ನಾನು ಬೇಕೆಂದರೆ ಇವಿಷ್ಟನ್ನೂ ಕೊಟ್ಟುಬಿಡುತ್ತೀರಾ?"

ಆ ನಿಮಿಷದಲ್ಲಿ ಅನೇಕ ಯೋಚನೆಗಳು ಬಂದುವು. "ಹೆಂಗಸರು ಹಣ ಕಿತ್ತುಕೊಳ್ಳುತ್ತಾರೆಂದೇ ನಾನು ದುಡ್ಡು ಇಟ್ಟು ಬಾ ಎಂದು ಹೇಳಿದ್ದು" ಎಂದು ವಾಸು ತಿಳಿಸಿದ್ದ. ಈಗ ಇವಳು ಅದೇ ಮಾಡುತ್ತಿದ್ದಾಳೆ. "ಹುಂ" ಎಂದರೆ ಇನ್ನೂರು ಕೈಬಿಟ್ಟು ಹೋಗುತ್ತದೆ. ಆದರೆ ಹಣ ಅವಳ ಕಣ್ಣಿಗೆ ಬಿದ್ದಿರುವಾಗ ಇಲ್ಲವೆಂದು ಯಾವ ಬಾಯಲ್ಲಿ ಹೇಳುವುದು ? ಇಷ್ಟಕ್ಕೂ ಹೋದರೆ ಇನ್ನೂರು ತಾನೇ ಹೋಗುವುದು ? ಹತ್ತುಸಾವಿರದಲ್ಲಿ ಇನ್ನೂರು. ಒಂಬತ್ತೇ ಸಾವಿರ ಕ್ರಾಸ್‌ವರ್ಡ್‌ನಲ್ಲಿ ಬಂದಿದ್ದರೆ ಏನು ಮಾಡುವುದಕ್ಕೆ ಆಗುತ್ತಿತ್ತು ?

"ಯಾಕೆ ಮಾತನಾಡುವುದಿಲ್ಲ. ಕೊಡುವುದಕ್ಕೆ ಇಷ್ಟವಿಲ್ಲವೇನು?"

"ಹಾಗೇನೂ ಅಲ್ಲ, ಕನಕ. ಬೇಕಾದರೆ ಅದನ್ನು ನೀನೇ ಇಟ್ಟುಕೋ"

ಕನಕ ನಕ್ಕು ಹೇಳಿದಳು.

"ನನಗೆ ಇದು ಬೇಡ. ನಿಮ್ಮ ಮನಸ್ಸು ಪರೀಕ್ಷೆ ಮಾಡಬೇಕೆಂದು ಕೇಳಿದೆ. ನೀವು ನನ್ನ ಪ್ರೀತಿಸುತ್ತೀರೋ ಇಲ್ಲವೊ ತಿಳಿದುಕೊಳ್ಳೋಣವೆಂದು ಕೇಳಿದೆ. ತೆಗೆದುಕೊಳ್ಳಿ."

"ಯಾಕೆ, ನಿನಗೆ ದುಡ್ಡು ಬೇಡವೇ?"

"ಯಾರಿಗೆ ತಾನೇ ದುಡ್ಡು ಬೇಡ? ಬೇಕು. ಆದರೆ ಮಾಮೂಲು ಎಷ್ಟೋ ಅಷ್ಟೇ ನಾನು ತೆಗೆದುಕೊಳ್ಳುವುದು. ನಿಮ್ಮ ಸ್ನೇಹಿತರು ಕೊಡುತ್ತಾರೆ. ಮಾಮೂಲಿಗಿಂತ ಹೆಚ್ಚಾಗಿಯೇ ಕೊಡುತ್ತಾರೆ. ತೆಗೆದುಕೊಳ್ಳಿ. ಎಣಿಸಿ ಇಟ್ಟುಕೊಳ್ಳಿ."

ಬಲವಂತದಿಂದ ಅವನ ಕೈಗೆ ಕೊಟ್ಟಳು. ಅವನು ತೆಗೆದು ಪಕ್ಕದಲ್ಲಿ ಹಾಕಿದ.

"ಹಾಗೆ ಮಾಡಬೇಡಿ" ಎಂದು ಹೇಳಿ ಅವನ ಕೋಟು ತೆಗೆದು ಅದರಲ್ಲಿ ನೋಟುಗಳನ್ನು ಮೊದಲಿನಂತೆಯೇ ಇಟ್ಟು, "ಇಲ್ಲಿಟ್ಟುಬಿಟ್ಟದ್ದೇನೆ" ಎಂದು ಪುನಃ ಹೇಳಿ, ಕೋಟನ್ನು ಕುರ್ಚಿಯ ಮೇಲಿಟ್ಟಳು.

ಅವನ ಪ್ರತಿಕ್ರಿಯೆಗಾಗಿ ಕಾದು ಪುನಃ ವಿಫಲಳಾದಳು.

"ನಿಮ್ಮಂತಹವರನ್ನು ನಾನು ಇದುವರೆವಿಗೆ ನೋಡಿಯೇ ಇಲ್ಲ."

ಆ ಮಾತು ಹೇಳುತ್ತಿದ್ದ ಹಾಗೆಯೇ ಮೋಹಪರವಶಳಾದವಳಂತೆ ಅವನನ್ನು ಚುಂಬಿಸಿ ಆಲಂಗಿಸಿದಳು. ಒಂದು ಕ್ಷಣ ಹಾಗೆಯೇ ಇದ್ದು ಅನಂತರ ಕೇಳಿದಳು.

"ಸುಖವಾಗಿದ್ದಿತಲ್ಲವೇ ?"

"ಹೂಂ"

"ಇನ್ನೂ ಹೆಚ್ಚು ಹೊತ್ತು ಹೀಗೆಯೇ ಇರಬೇಕೆನ್ನಿಸುವುದಿಲ್ಲವೇ?"

"ಹೂಂ"

"ಹಾಗಾದರೆ ಏಳಿ, ಹೋಗೋಣ"

"ಎಲ್ಲಿಗೆ ?"

"ನಮ್ಮ ಮನೆಗೆ. ಇಲ್ಲಿಯೇ ನಾಲ್ಕು ಮನೆಗಳಾಚೆ"

"ನನ್ನ ಸ್ನೇಹಿತ————"

"ಬೆಳಗಾಗುವುದರೊಳಗೆ ಬಂದುಬಿಡುವಿರಂತೆ, ಬನ್ನಿ"

ಕನಕ ಶಂಕರನನ್ನು ತನ್ನ ಮನೆಗೆ ಕರೆದುಕೊಂಡು ಹೋದಳು.

ಕತ್ತಲಾಗಿರುವ ಸಣ್ಣ ನಡುವೆ. ಅದನ್ನು ದಾಟಿಹೋದರೆ ತೊಟ್ಟಿ. ತೊಟ್ಟಿಯ ಎಡಭಾಗದಲ್ಲಿ ಅವಳ ಮನೆ.

ಅವಳ ಮನೆಯಲ್ಲಿ ದೀಪವು ಉರಿಯುತ್ತಿತ್ತು.

ತಾನು ಬರುವಾಗ ದೀಪವಾರಿಸಿಕೊಂಡು ಬಂದಿದ್ದಳು. ಸಾಧಾರಾಣ ವಾಗಿ ಅವಳಿಲ್ಲದಿದ್ದರೆ ಯಾರೂ ಅತ್ತ ಹೋಗುತ್ತಿರಲಿಲ್ಲ. ದೀಪವಿದ್ದು ಬಾಗಿಲು ತೆಗೆದಿದ್ದುದು ಕನಕಳಿಗೂ ವಿಸ್ಮಯವನ್ನು ಉಂಟುಮಾಡಿತು.

"ಯಾರದು" ಎಂದುಕೊಂಡೇ ಒಳಗೆ ಪ್ರವೇಶಿಸಿದಳು.

ಮೂವತ್ತೆರಡು ವರ್ಷದ ಹತ್ತಿರ ವಯಸ್ಸಾದವ. ಬೆಳೆದಿದ್ದ ಕಾಲಿಂಚು ಗಡ್ಡವನ್ನು ಕೆರೆದುಕೊಳ್ಳುತ್ತಾ ಬಂದು ಎದುರುಗೊಂಡು ಹೇಳಿದ.

"ಬಾ, ಚಿನ್ನ. ನಿನಗಾಗಿಯೇ ಕಾದಿದ್ದೆ"

"ಏ. ಶಿವಣ್ಣ. ನಾನಿಲ್ಲದಾಗ ನನ್ನ ಮನೆಯ ಹೊಸಲು ತುಳಿಯ ಬೇಡವೆಂದು ನಿನಗೆಷ್ಟು ಬಾರಿ ಹೇಳಿಲ್ಲ."

"ಬಂದರೆ ಏನೋ. ಮಹಾ"

"ಇನ್ನೇನಾದರೂ ಬಾಯಿ ಬಿಟ್ಟೆಯೋ ನಾನು ಸುಮ್ಮನೆ ಬಿಡುವು ದಿಲ್ಲ. ಬಂದ ದಾರಿ ಹಿಡಿದುಕೊಂಡು ಹೊರಡು."

"ಒಂದು ಮಾತು—

"ಒಂದು ಮಾತೂ ಬೇಡ. ಎರಡು ಮಾತೂ ಬೇಡ"

"ನಾನು ಎಷ್ಟು ಹಣ ಕೊಟ್ಟಿದ್ದೇನೆ ಎಂಬುದನ್ನು ಒಂದು ಬಾರಿಯಾ ದರೂ——"

"ಕೊಟ್ಟನಂತೆ ಕೊಟ್ಟ. ಧರ್ಮಕ್ಕೆ ಕೊಟ್ಟೆಯಾ? ಈಗೇನು, ಹೊರಡು ತ್ತೀಯೋ ಇಲ್ಲವೋ?"

ವಿಧಿಯಿಲ್ಲದೇ ಹೊರಗೆ ಹೊರಟ. ಹೋಗುವುದಕ್ಕೆ ಕಾಲು ಬಾರದು. ಮನಸ್ಸು ಬಾರದು. ಪುನಃ ಒಂದುಬಾರಿ ಪ್ರಯತ್ನಪಟ್ಟು ನೋಡೋಣ ವೆಂದು ಬರುತ್ತಾ ಅಂದ.

"ನನ್ನ ಟೋಪಿ— — —"

ಟೋಪಿ ಹಾಸಿಗೆಯ ಮೇಲಿತ್ತು. ಕನಕ ಅದನ್ನು ತೆಗೆದು ಹೊರಗೆ ಎಸೆದು, ಅವನನ್ನು ತಳ್ಳಿ, ಬಾಗಿಲು ಸೇರಿಸಿದಳು.

ಶಂಕರ ಎಲ್ಲವನ್ನೂ ನೋಡುತ್ತಾ ನಿಂತಿದ್ದವನು ಗಾಬರಿಯಾಗಿದ್ದ. ಕನಕ ಅವನ ಕಡೆಗೆ ನೋಡಿದಾಗ ಹೇಳಿದ.

"ನಾನು-ನಾನು ಹೊರಡುತ್ತೇನೆ."

"ಅಯ್ಯೋ! ದಮ್ಮಯ್ಯಾ ಹಾಗೆ ಮಾಡಬೇಡಿ."

"ಅಲ್ಲ— — — —"

ನೆನೆದುಕೊಂಡಾಗ ಕಣ್ಣಿನಲ್ಲಿ ನೀರು ಬರುವುದು ಕೆಲವರ ಸ್ವಭಾವ. ಹಾಗೆಯೇ ಅವಳಿಗೂ ಬಂತು. ಕಣ್ಣಿನಲ್ಲಿ ನೀರಿಟ್ಟುಕೊಂಡು ಗದ್ಗದ ಕಂಠ ದಿಂದ ಹೇಳಿದಳು.

"ಅವನೇನು ಇಲ್ಲಿದ್ದಾನೆಂದು ನನಗೆ ಗೊತ್ತಿತ್ತೇ? ನಾನು ಅವನನ್ನು ಬಾ. ಎಂದಿದ್ದೇನೇ ? ಅವನು ಹೇಳಿದ ಸುಳ್ಳೆಲ್ಲವನ್ನೂ ನಿಜವೆಂದುಕೊಂಡು ———————ಎಲ್ಲರೂ ಹಾಗೆಯೇ? ದೇವರು ನನ್ನ ಹಣೆಯಲ್ಲಿ ಹೀಗೆಲ್ಲಾ ಬರೆದಿರುವಾಗ ಯಾರೇನು ಮಾಡಿಯಾರು?"

"ಹಾಗಲ್ಲ-ಕನಕ."

ಅವಳು ಉತ್ತರ ಹೇಳಲಿಲ್ಲ. ಅಳುತ್ತಲೇ ಇದ್ದಳು. ಶಂಕರ ಸಮಾಧಾನ ಹೇಳತೊಡಗಿದ.

"ಹಾಗಾದರೆ ಇರುತ್ತೇನೆನ್ನಿ."

"ಇರುತ್ತೇನೆ, ಅಳಬೇಡ."

ಕನಕ ಸೆರಗಿನ ತುದಿಯಿಂದ ಕಣ್ಣೊರಸಿಕೊಂಡಳು.

ಅವನು ಚಾಪೆಯ ಮೇಲೆಯೇ ಕುಳಿತಿದ್ದ. ನಿಂತಿದ್ದ ಅವಳು ಗೂಡಿ ನಿಂದ ಗೋಲ್ಡ್ ಫ್ಲೇಕ್ ಸಿಗರೇಟ್ ಪ್ಯಾಕ್ ತೆಗೆದಳು. ಸಿಗರೇಟೊಂದನ್ನು ಹಚ್ಚಿದಳು.

ತನಗೆ ಕೊಡದೇ ಅವಳೇ ಹಚ್ಚಿಕೊಂಡಳಲ್ಲ-ಎಂದು ಶಂಕರನಿಗೆ ತೋರಿತು.

ಆದರವಳು ಹಚ್ಚಿದ ಸಿಗರೇಟು ತೆಗೆದು ಅವನಿಗೆ ಕೊಡುತ್ತಾ "ತೆಗೆದು ಕೊಳ್ಳಿ" ಎಂದಳು.

ಶಂಕರ ಸಂಕೋಚದಿಂದ ನೋಡಿದ.

"ಯಾಕೆ? ಹಚ್ಚಿ ಕೊಟ್ಟ ಸಿಗರೇಟು ಎಂಜಲೆಂದು ಕಾಣುತ್ತದೆಯೇನು? ಬೇಕಾದರೆ ನೀವೇ ಬೇರೇ ಹಚ್ಚಿಕೊಳ್ಳಿ."

ತಾನು ಸಂಕೋಚಿಸಿದ್ದು ಸರಿಯಿಲ್ಲವೆಂದು ಶಂಕರನಿಗೆ ಅನ್ನಿಸಿರ ಬೇಕು.

"ಏನಿಲ್ಲ ಕೊಡು."

ಅವಳೇ ತೆಗೆದು ಬಾಯಿಗಿಟ್ಟಳು.

ತಾನೂ ಒಂದು ಸಿಗರೇಟು ಹಚ್ಚಿಕೊಂಡು ಕನಕ ಚಾಪೆಯ ಮೇಲೆ ಕುಳಿತುಕೊಂಡಳು.

ಅವನೂ ಕೆಳಗಡೆ ಚಾಪೆಯ ಮೇಲೆ ಕುಳಿತುಕೊಂಡಿದ್ದ.

ಕುಳಿತುಕೊಳ್ಳುವ ಭಂಗಿಯಲ್ಲಿ ಏನೋ ಆಗಿ ಅವಳ ಎಡಗಾಲು ಮೊಣ ಕಾಲಿನವರೆಗೆ ಕಾಣುತ್ತಿತ್ತು. ಶಂಕರನ ದೃಷ್ಟಿಯನ್ನದು ಆಕರ್ಷಿಸಿತು.

ಸೊಗಸಾದ ಬಣ್ಣ. ನೋಡುವ ಕಣ್ಣಿಗೇ ಅದರ ನಯವು ಗೊತ್ತಾ ಗುವಂತಿದೆ. ಅಂಥಹ ಸುಂದರಾಂಗಿಯ ಪಾದ, ಕಾಲು ಯಾರನ್ನು ತಾನೇ ಆಕರ್ಷಿಸದು !

ಶಂಕರ ಏನು ನೋಡುತ್ತಿದ್ದಾನೆಂಬುದನ್ನು ಅವಳು ಗಮನಿಸಿದಳು.

"ನನ್ನ ಕಾಲು ಚೆನ್ನಾಗಿದೆಯೆ ?"

ಅಷ್ಟು ಹೊತ್ತಿಗೆ ಸ್ವಲ್ಪ ಸಂಕೋಚ ಕಳೆದಿತ್ತು.

"ಬಹಳ ಚೆನ್ನಾಗಿದೆ. ಎಷ್ಟೋ ಪಾದಗಳನ್ನು ನೋಡಿದ್ದೇನೆ. ಚೆನ್ನಾ ಗಿದೆ. ಚೆನ್ನಾಗಿರುವುದೇ ಅಪರೂಪ. ಕೆಲವರ ಕಾಲುಗಳಲ್ಲಂತೂ ತುಂಬಾ ಕೂದಲುಗಳು. ಇದು ಎಷ್ಟೋ ಚೆನ್ನಾಗಿದೆ."

"ಸರಿ ಬಿಡಿ. ಕಾಲನ್ನೇ ನೋಡುತ್ತಾ ಕುಳಿತುಕೊಂಡರೆ ಹೇಗೆ ? ಹೊತ್ತಾಯಿತು. ಮಲಗಿಕೊಳ್ಳೋಣ"

ಏನು ಮಾಡುತ್ತಾಳೆಂದು ಅವನು ನೋಡುತ್ತಿದ್ದ ಹಾಗೆಯೇ ಮಂಚದ ಕೆಳಗೆ ಪೆಟ್ಟಿಗೆಯಿಂದ ಬಿಳಿಯ ಸೀರೆ ತೆಗೆದುಕೊಂಡಳು. ಅದರ ಒಂದು ಕೊನೆಯನ್ನು ತೆಗೆದು ಭುಜದ ಮೇಲೆ ಹಾಕಿಕೊಂಡಳು.

ಅವಳಾವ ಕಾರ್ಯದಲ್ಲಿ ತೊಡಗಿದ್ದಾಳೆಂಬುದನ್ನು ತಿಳಿದುಕೊಳ್ಳಲು

ಅವನಿಗೆ ಕಷ್ಟವಾಗಲಿಲ್ಲ. ಮನೆಯಲ್ಲಿ ಹೆಂಗಸರು ಸೀರೆಯ ಕೊನೆಯೊಂದನ್ನು ಮೈಮೇಲೆ ಹಾಕಿಕೊಂಡು ಸೀರೆ ಬದಲಾಯಿಸುವುದನ್ನು ನೋಡಿದ್ದ.

ಆಗ ಅಲ್ಲಿರುವುದು ಸುಸಂಸ್ಕೃತರ ಲಕ್ಷಣವಲ್ಲ. ಮನೆಯಲ್ಲಿ ಹಾಗೆ ಅವನಿರುವ ಕಡೆ ಹೆಂಗಸರಾರೂ ಸೀರೆ ಬದಲಾಯಿಸುತ್ತಿರಲಿಲ್ಲ. ಬದಲಾಯಿಸುತ್ತಿರುವಾಗ ಅಕಸ್ಮಾತ್ ಅವನು ಹೋಗಿದ್ದರೆ ಹೊರಗೆ ಹೋಗಿಬಿಡುತ್ತಿದ್ದ. ಹೊರಗೆ ಹೋಗಲು ಅಲ್ಲಿಯೂ ಎರಡು ಕೋಣೆಗಳಿದ್ದವು. ಬೇಕಾದರೆ ಅವಳೇ ಹೋಗುತ್ತಾಳೆ. ಆದರೂ ಮತ್ತೊಂದು ಕಡೆ ನೋಡಿದ. ಗೋಡೆಯ ಮೇಲೆ ಎರಡು ಫೋಟೋಗಳಿದ್ದವು. ಅವು ಕನಕಳವೇ. ಒಂದೊಂದರಲ್ಲಿ ಒಂದೊಂದು ಬಗೆಯಾಗಿ ನಗುತ್ತಿದ್ದಳು.

ಎದ್ದು ಆ ಎರಡು ಫೋಟೋಗಳನ್ನೂ ಕೈಗೆ ತೆಗೆದುಕೊಂಡು, ಪುನಃ ಕುಳಿತು, ಅವುಗಳನ್ನು ನೋಡತೊಡಗಿದ.

ನಗುತ್ತಿರುವ ಕನಕಳನ್ನು ನೋಡುವುದು ಒಂದು ಬಗೆಯಾಗಿ ಸುಖವಾಗಿಯೇ ಇತ್ತು.

ನೋಡುವುದು ಮುಗಿದಿರಲಿಲ್ಲ. ಅಷ್ಟರಲ್ಲಿ ಕನಕ ಮಾತನಾಡಿದಳು.

"ನನಗಿಂತ ಆ ನಿರ್ಜೀವ ಫೋಟೋಗಳೇ ನಿಮ್ಮ ಕಣ್ಣಿಗೆ ಚೆನ್ನಾಗಿ ಕಂಡುಬರುತ್ತಿವೆಯೇನು ?"

ಶಂಕರ ತಿರುಗಿ ನೋಡಿದ.

ತೆಳುವಾದ ಬಿಳಿಯ ಬಟ್ಟೆಯನ್ನು ಸೊಂಟಕ್ಕೆ ಒಂದು ಸುತ್ತು ಸುತ್ತಿಕೊಂಡಿದ್ದಳು. ಅದರ ಮತ್ತೊಂದು ಕೊನೆಯನ್ನು ಅವಳ ವಕ್ಷಸ್ಥಲದ ಮೇಲೆ ಹಾದು, ಭುಜದ ಮೇಲೆ ಬಟ್ಟಾಗಿ, ಉಳಿದುದು ಹಿಂದೆ ಬಿದ್ದು, ಗಾಳಿಗೆ ಹಾರುತ್ತಿದ್ದಿತು.

ಮೈಮೇಲೆ ಬಟ್ಟೆ ಇದ್ದರೂ ಇಲ್ಲದಂತೆಯೇ ಇದ್ದಿತು. ಆ ಬಟ್ಟೆ ನೀರಿನ ಅಲೆಗಳಂತೆ ಮೈಮೇಲೆ ಆಡುತ್ತಿತ್ತು.

ಮೊದಲು ಹೋಟಲಿನ ರೂಮಿನಲ್ಲಿ ಕುಳಿತಿದ್ದಾಗ ಅವಳ ಭುಜ, ಕುಚಗಳನ್ನು ನೋಡಿದ್ದ. ಈಗ ಸ್ವಲ್ಪ ಹೊತ್ತಿನ ಮೊದಲು ಅವಳು ತನ್ನ ಪಕ್ಕ

ದಲ್ಲಿ ಕುಳಿತಿದ್ದಾಗ ಅವಳ ಪಾದ, ಮೊಳಕಾಲುಗಳನ್ನು ನೋಡಿದ್ದ. ಆಗಲೇ ಅವಳು "ಚೆನ್ನಾಗಿದೆಯೇ ?" ಎಂದು ಕೇಳಿದ್ದ.

ಈಗ ಅವಳ ಪೂರ್ಣ ದೇಹವನ್ನು ನೋಡುತ್ತಿದ್ದಾನೆ. ನಿಜವಾಗಿ ಚೆನ್ನಾಗಿದೆ. ವರ್ಣಿಸಲಾರದಷ್ಟು ಚೆನ್ನಾಗಿದೆ.

ಅವನೆಂದೂ ಹೆಂಗಸಿನ ದೇಹವನ್ನು ನೋಡಿಯೇ ಇರಲಿಲ್ಲ.

ತನ್ನನ್ನು ಅವನು ನೋಡುತ್ತಿದ್ದಾನೆಂದು ಅವಳು ಕಂಡುಕೊಂಡಳು. ನೋಡಲಿ, ಎಂದು ಎತ್ತಲೋ, ಏನೋ ನೋಡುತ್ತಿರುವಂತೆ ಎರಡು ಗಳಿಗೆ ನಿಂತಿದ್ದಳು.

ಅವಳು ನಿಂತಿದ್ದ ತರಹ ಅವನ ಮನಸ್ಸಿನಲ್ಲಿ ನಾನಾ ಬಗೆಯಾದ ಭಾವಗಳನ್ನುಂಟುಮಾಡಿತು. ಮಾತನಾಡುವ ಶಬ್ಧ ಕೇಳಿಬರದಿದ್ದರೂ ತನ್ನ ಬಳಿಗವಳು ಕರೆಯುತ್ತಿರುವಂತೆ ತೋರಿತು. ಎಷ್ಟೋ ಜನರಿಗೆ ಅವನು ಏನ್ನಾದರೂ ಕೊಟ್ಟಿದ್ದಾನೆ. ಹಾಗೆಯೇ ಎಷ್ಟೋ ಜನರಿಂದ ತಾನೂ ಏನನ್ನಾದರೂ ತೆಗೆದುಕೊಂಡಿದ್ದಾರೆ. ಆದರೆ ಕನಕಳ ಕೊಡುಗೆಯ ಬಗೆ ಆ ರೀತಿಯಾಗಿರಲಿಲ್ಲ. ಮುಚ್ಚುಮರೆಯಿಲ್ಲದೇ ಸರ್ವವನ್ನೂ ಸಮರ್ಪಿಸಲು ಮುಂದೆ ಬಂದು ನಿಂತಿರುವಂತೆ ಅವನಿಗೆನ್ನಿಸಿತು.

ಹಾಗೆ ಎರಡು ಗಳಿಗೆ ನಿಂತಿದ್ದನಂತರ ಅವಳು ನಕ್ಕಳು. ಮುತ್ತಿನ ಸಾಲುಗಳಂತಹ ಹಲ್ಲುಗಳು ಸ್ವಲ್ಪವೇ ಕಂಡುಬರುವಂತೆ ನಕ್ಕಳು. ಆ ನಗುವನ್ನು ನೋಡಿದ ನಂತರವಂತೂ ಶಂಕರ ತನ್ನ ದೃಷ್ಟಿಯನ್ನು ಬೇರೇ ಕಡೆಗೆ ತಿರುಗಿಸುವುದಕ್ಕೆ ಆಗಲೇ ಇಲ್ಲ.

ಮುಂದೆ ಬಂದಳು.

ಅದೇನೋ ಒಂದು ಬಗೆಯ ಶಬ್ಧ–ಆ ಶಬ್ಧ ಅಳುವಿನಂತೆಯೂ ಇರಲಿಲ್ಲ. ನಗುವಿನಂತೆಯೂ ಇರಲಿಲ್ಲ—ವನ್ನು ಮಾಡಿಕೊಂಡು ಮುಂದೆ ಬಂದು ಅವನ ತೊಡೆಗಳ ಮೇಲೆ ಕುಳಿತುಕೊಂಡಳು. ಹಾರದಂತೆ ಅವನ ಕೊರಳ ಸುತ್ತಲೂ ಬರೀ ತೋಳನ್ನುಹಾಕಿ ಮುಖವನ್ನು ಎಳೆದುಕೊಂಡು ಮುತ್ತಿಟ್ಟು ಕೇಳಿದಳು.

"ನಾನು ಕುಳಿತುಕೊಂಡಿರುವುದು ನಿಮಗೆ ಭಾರವಾಗಿದೆಯೇ ?"

"ಇಲ್ಲ."

ಹೌದು! ಅವನಿಗೆ ಭಾರವಾಗಿ ಕಂಡುಬರುತ್ತಿರಲಿಲ್ಲ. ಅವಳು ಏಳು ಮಲ್ಲಿಗೆಯ ಹೂವಿನಷ್ಟೇ ತೂಕವೆಂದು ಭಾಸವಾಗತ್ತಿತ್ತು.

"ನಾನುಟ್ಟಿರುವ ಸೀರೆ— — —"

"ಹೀಗೆ-ಹೀಗೆ ನಾನೆಂದೂ ಒಬ್ಬ ಹೆಂಗಸಿನ ಸಮೀಪದಲ್ಲಿ ಕುಳಿತು ಕೊಂಡುದು— — — —"

ಮುಂದೆ ಅವನು ಮಾತನಾಡಲಾಗಲಿಲ್ಲ. ಮೈಗೆ ತಗುಲುತ್ತಿದ್ದ ನಗ್ನ ಶರೀರ, ಅವಳ ಶರೀರದ ಸುಖೋಷ್ಣತೆಗಳು ಅವನಲ್ಲಿ ಭಾವೋದ್ರೇಕವನ್ನು ಉಂಟುಮಾಡಿದುವು.

"ಹೀಗೆ-ಹೀಗೆ ಅಂದರೆ ಹೆಂಗಸು ಸರಿಯಾಗಿ ಬಟ್ಟೆ ಹಾಕಿಕೊಳ್ಳದಿರುವಾಗ ಅಲ್ಲವೇ?"

ಮಾತನಾಡಲಿಲ್ಲ. ಸುಮ್ಮನೆ ಹೂಗುಟ್ಟಿದ. ಅವಳ ಮುಖವನ್ನು ನೋಡಿದ. ಇನ್ನೂ ಕೆಳಗೆ ನೋಡಿದಾಗ ಅವಳ ದುಂಡು ಮೊಲೆಗಳು ಕಣ್ಣಿಗೆ ಬಿದ್ದುವು. ಆಗವನಿಗೆ ಸಂಕೋಚ, ನಾಚಿಕೆಗಳಾದುವು. ಆದರೂ ಸಹ ದೃಷ್ಟಿಯನ್ನು ಅಲ್ಲಿಂದ ತೆಗೆಯಲು ಅವನಿಂದ ಆಗಲಿಲ್ಲ. ಹಾಗೆ ನೋಡುತ್ತಿದ್ದಂತೆ ಅತ್ಯಂತ ಪ್ರಿಯವಾದ ಪರಿಮಳವು ಬರುತ್ತಿರುವ ಹಾಗೆ ತೋರಿತು.

"ನೀವು ಹಾಕಿಕೊಂಡಿರುವ ಗಂಧವು ಬಹಳ ಚೆನ್ನಾಗಿದೆ."

"ನಾನು ಯಾವ ಗಂಧವನ್ನೂ ಹಚ್ಚಿಕೊಂಡಿಲ್ಲ."

"ಅಂದರೆ— — —"

"ಅಂದರೆ ನನ್ನ ಮೈ ವಾಸನೆಯೇ ಅದು. ಅದು ಮೊದಲಿನಿಂದಲೂ ಇದೆ.''

ಅವನ ಮನಸ್ಸಿನಲ್ಲಿ ಎಷ್ಟೋ ಭಾವನೆಗಳು ಬಂದುವು. ತನ್ನ ಕೈಗಳೆರಡನ್ನೂ ಮೇಲೆತ್ತಿ ಅವಳ ಶರೀರವನ್ನು ಸ್ಪರ್ಶಿಸಬೇಕೆಂದು ತೋರಿತು. ಅವಳ ಶರೀರವನ್ನು ಬಾಚಿ ತಬ್ಬಿಕೊಳ್ಳಬೇಕೆನ್ನಿಸಿತು. ಆ ಆಸೆಗಳು ಎಷ್ಟೇ ಹೆಚ್ಚಾಗಿದ್ದರೂ ಅವನೇನೂ ಮಾಡಲಾರದವನಾಗಿದ್ದ.

ಅಸಮಾಧಾನ ಪಟ್ಟುಕೊಂಡಂತೆ ಅವಳು ಹೇಳಿದಳು.

"ನೀವು ನನ್ನನ್ನು ಪ್ರೀತಿಸುವುದಿಲ್ಲವೇನೋ?"

"ಹಾಗಲ್ಲ. ಏನೆಂದರೆ— — — —"

ಏನೆಂದರೆ ಅವನಿಂದ ಹೇಳಲಾಗಲಿಲ್ಲ. ಸುಂದರಿಯು ಅರ್ಧ ನಗ್ನಳಾಗಿ ತೊಡೆಯ ಮೇಲೆ ಕುಳಿತುಕೊಂಡಿರುವಾಗ ಅವನಿಂದ ಹೇಳಲಾಗಲಿಲ್ಲ.

"ಏನದು?"

"————"

"ಹೇಳಿ!"

"ನಾನು ಇದುವರೆವಿಗೂ ಹೆಂಗಸನ್ನು ನೋಡಿಯೇ ಇಲ್ಲ."

ಅವಳಿಗದು ಗೊತ್ತಿತ್ತು. ಆದರೂ ಗೊತ್ತಿಲ್ಲದಂತೆ ಕೇಳಿದಳು.

"ನೀವು ತಮಾಷೆ ಮಾಡುತ್ತಿದ್ದೀರಿ?"

"ಇಲ್ಲ, ನಿಜ."

"ಸಣ್ಣ ಹುಡುಗರ ವಿಷಯದಲ್ಲಿಯಾದರೆ ಅದನ್ನು ಒಪ್ಪಬಹುದು. ಆದರೆ ನಿಮ್ಮಂತಹ ಯುವಕರ ವಿಷಯದಲ್ಲಿ ಅದನ್ನು ನಂಬುವುದೇ ಕಷ್ಟ."

"ನಾನು ಹೇಳಿದರೂ ನಂಬುವುದಿಲ್ಲವೇ?"

ಆ ಮಾತು ಹೇಳುತ್ತಾ ಅವಳ ಮುಖ ನೋಡಿದ.

ಮುಖದಲ್ಲಿ ಮುಗ್ಧತೆಯಿತ್ತು. ಕಣ್ಣುಗಳಲ್ಲಿ ಪ್ರಾಮಾಣಿಕತೆ ಇತ್ತು. ಮಾತಿನಲ್ಲಿ ಸರಳತೆಯಿತ್ತು. ಅದಷ್ಟರಿಂದಲೂ ತೃಪ್ತಿಗೊಂಡು ಅವಳು ಹೇಳಿದಳು.

"ನೀವು ಹೇಳಿದ ಮೇಲೆಯೂ ನಂಬುವುದಿಲ್ಲವೇ? ನಂಬುತ್ತೇನೆ."

"ಹೌದು. ಮೊಟ್ಟಮೊದಲು ಈ ರೀತಿ ನೋಡುತ್ತಿರುವುದು ನಿನ್ನನ್ನೇ— — —'

"ನೀವೇಕೆ ಹೀಗೆ ನಡುಗುತ್ತಿದ್ದೀರಿ?"

"ಏನೋ ಒಂದು ಬಗೆಯಾಗಿ ಚಳಿಯಾದಂತೆ ಆಗುತ್ತಿದೆ."

"ಹೆದರಬೇಡಿ. ಹೆದರುವುದಕ್ಕೆ ಕಾರಣವಾದರೂ ಏನಿದೆ? ನಾನಿದ್ದೇನೆ. ಹೆದರಿಕೊಳ್ಳಬೇಡಿ."

ಅವಳೆದ್ದು ನಿದಾನವಾಗಿ ಹೋಗಿ, ಹಾಸಿಗೆಯ ಮೇಲೆ ಬಿದ್ದು ಕೊಂಡಳು.

ದಿಂಬಿನ ಮೇಲೆ-ತಲೆಯಿಟ್ಟುಕೊಂಡೇ ಅವನ ಕಡೆಗೆ ಕುಡಿನೋಟ

[೧೦]

ದಿಂದ ನೋಡಿದಳು. ಸುಂದರವಾದ ತೋಳನ್ನು ಪೂರ್ಣವಾಗಿ ಅವನ ಕಡೆ ಚಾಚಿ "ಬನ್ನಿ. ಹತ್ತಿರಕ್ಕೆ ಬನ್ನಿ" ಎಂದಳು.

ಹತ್ತಿರಕ್ಕೆ ಹೋಗಬೇಕೆನ್ನಿಸಿತು. ಆದರೆ ಹೋಗಲಾರದಂತೆ ಭಾಸವಾಯಿತು. ಕಾಲುಗಳು ನಿರ್ಬಲವಾದಂತೆ ಆದುವು. ಮೊದಲಿಗಿಂತ ನಡುಕ ಹೆಚ್ಚಾಯಿತು. ಎದೆ ಜೋರುಜೋರಾಗಿ ಹೊಡೆದುಕೊಳ್ಳಲಾರಂಭವಾಯಿತು.

ಹೇಗೋ ಕಷ್ಟದಿಂದ ಎದ್ದು ಅವನು ಅವಳನ್ನು ಸಮೀಪಿಸಿದ. ಮಂಚದ ಪಕ್ಕದಲ್ಲಿ ಹೋಗಿ ನಿಂತುಕೊಂಡ. ಅವಳ ಕಡೆ ನೋಡತೊಡಗಿದ.

ಚಾಚಿದ್ದ ಕೈನಿಂದಲೇ ಅವನ ಕೈ ಹಿಡಿದೆಳೆದಳು. ಪಕ್ಕದಲ್ಲಿ ಕುಳಿತುಕೊಂಡ.

ಅವಳು ಗಳಿಗೆ ಸುಮ್ಮನಿದ್ದಳು. ಹಿಡಿದುಕೊಂಡಿದ್ದ ಅವನ ಕೈಯನ್ನು ಬಿಟ್ಟುಬಿಟ್ಟಳು. ನಿದಾನವಾಗಿ ಹೇಳಿದಳು.

"ನಾನು ವಾಸ್ತವವಾಗಿ ನಿಮ್ಮನ್ನು ಪ್ರೀತಿಸುತ್ತೇನೆ. ಅದರಿಂದ ಸುಳ್ಳು ಹೇಳುವುದಿಲ್ಲ. ನಿಜ ಹೇಳುತ್ತೇನೆ. ನಿಮ್ಮೊಡನೆ ನಡೆದುಕೊಂಡಂತೆ ಇತರರೊಂದಿಗೆ ನಡೆದುಕೊಳ್ಳುವುದಿಲ್ಲ. ಅವರನ್ನು ನೋಡಿ ನಗುತ್ತಿದ್ದೆ. ತಮಾಷೆ ಮಾಡುತ್ತಿದ್ದೆ. ನೀವು ಹೆಂಗಸರನ್ನು ನೋಡದಿರುವುದೂ ಒಳ್ಳೆಯದೇ ಆಯಿತು. ನಿಮಗೆ ಆ ವಿಷಯವೇನೂ ಗೊತ್ತಿಲ್ಲದಿರುವುದೂ ಒಳ್ಳೆಯದೇ ಆಯಿತು. ನಾನೀಗ ನಿಮಗೆಲ್ಲವನ್ನೂ ತಿಳಿಸುತ್ತೇನೆ. ನೀವು ನಿಮ್ಮ ಜನ್ಮದಲ್ಲಿ ಈ ರಾತ್ರಿಯನ್ನು ಮರೆಯಲಾರಿರಿ"

"ಹೂಂ"

"ಏಕೆಂದರೆ ನೀವು ಚೆನ್ನಾಗಿದ್ದೀರಿ. ನಾನು ನಿಮ್ಮ ಪ್ರೀತಿಸುತ್ತೇನೆ"

"ನಾನೂ ನಿನ್ನನ್ನು ಪ್ರೀತಿಸುತ್ತೇನೆ."

"ನಿಜವಾಗಿ ಪ್ರೀತಿಸುತ್ತೀರಾ?"

"ಖಂಡಿತವಾಗಿಯೂ ಪ್ರೀತಿಸುತ್ತೇನೆ."

"ನಿಮ್ಮ ಜೇಬಿನಲ್ಲಿರುವ ಹಣವನ್ನು ಕೇಳಿದರೆ ನನಗೇ ಕೊಟ್ಟುಬಿಡುತ್ತೀರಾ?"

"ಕೊಡುತ್ತೇನೆ."

"ಹಾಗಾದರೆ ಕೊಡಿ."

ಸ್ವಪ್ನದಲ್ಲಿ ಹೇಗೋ ಹಾಗೆ ತೆಗೆದು ಕೊಟ್ಟ. ಅವಳು ಹೊಸ ನೋಟು ಗಳನ್ನು ಕೈಯಲ್ಲಿ ಹಿಡಿದುಕೊಂಡಾಗ ಪುನಃ ವಾಪ್ಸು ಕೊಡುತ್ತಾಳೆಂದು ಕೊಂಡ. ಆದರೆ ಈ ಬಾರಿ ಅವಳು ವಾಪ್ಸು ಕೊಡಲಿಲ್ಲ. ದಿಂಬಿನ ಕೆಳಗೆ ಇಟ್ಟುಕೊಂಡಳು.

ನೋಟುಗಳನ್ನು ದಿಂಬಿನ ಕೆಳಗಿಡುವಾಗ ಅವಳು ಎದ್ದು ಕುಳಿತು ಕೊಂಡಿದ್ದಳು. ಹಾಗೆಯೇ ಮುಂದುಗಡೆ ಕೈ ಹಾಕಿ ಅವನ ಕೋಟು ತೆಗೆದಳು.

ಅವಳು ಶಂಕರನ ಷರ್ಟಿನ ಗುಂಡಿಯನ್ನು ಬಿಚ್ಚುತ್ತಿರುವಾಗ ಅವನೇ ಕೈ ಹಾಕಿದ.

ಕನಕ ಅವನ ಕೈಗಳನ್ನು ನಿಧಾನವಾಗಿ ತೆಗೆದು ಕೆಳಗೆ ಹಾಕಿ ಹೇಳಿದಳು.

"ನೀವು ಸುಮ್ಮನಿರಿ. ನಾನೆಲ್ಲವನ್ನೂ ಮಾಡುತ್ತೇನೆ."

ಅವನು ಮೌನವಾಗಿದ್ದ. ತಾಯಿ ಮಗುವಿನ ಷರ್ಟು ಕಳಚುವಂತೆ ಕಳಚಿದಳು. ಅದೇ ರೀತಿಯಾಗಿಯೇ ಅವನನ್ನು ಹಾಸಿಗೆಯ ಮೇಲೆ ಮಲಗಿ ಸಿದಳು. ಅನಂತರ ಅವನನ್ನು ಸಮಿಾಪಿಸಿದಳು.

ಶಂಕರನಿಗೆ ವಿಪರೀತ ಭಯವಾಯಿತು. ಹತ್ತಿರಕ್ಕೆ ಬಂದ "ಅಮ್ಮಾ ತಾಯಿ"ಯನ್ನು ಮಗು ಎರಡು ಕೈಗಳಿಂದಲೂ ತಳ್ಳುವಂತೆ ಅವಳನ್ನು ತಳ್ಳಿದ.

"ಯಾಕೆ?"

ತಾನು ಮಾಡಿದ್ದು ತಪ್ಪೆನ್ನುವಂತೆ ಅವನಿಗೆ ಭಾಸವಾಯಿತು. ಪರಿತಾ ಪದಿಂದ ಹೇಳಿದ.

"ಏನೂ ಇಲ್ಲ."

"ನೀವೇನು ಭಯಪಡಬೇಡಿ. ನಾನು ಎಲ್ಲವನ್ನೂ ಹೇಳಿಕೊಡುತ್ತೇನೆ. ನೀವು ಪುನಃ ಎಂದೂ ಭಯಪಡದಂತೆ ಮಾಡುತ್ತೇನೆ. ಈ ಜಗತ್ತಿನಲ್ಲಿ ಯಾವುದು ಮನಸ್ಸಿಗೆ ಅತ್ಯಂತ ಆನಂದವನ್ನು ಉಂಟುಮಾಡುವ ಸುಖವೋ ಆ ಸುಖವನ್ನು ತೋರಿಸುತ್ತೇನೆ."

ಕನಕ ಪಕ್ಕದಲ್ಲಿ ಮಲಗಿಕೊಂಡು ನಡುಗುತ್ತಿದ್ದ ಅವನ ಶರೀರವನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು.

ಸ್ವಲ್ಪ ಹೊತ್ತಿನ ಮೇಲೆ ಅವನ ಶರೀರದ ಬಿಗುವು, ನಡುಕಗಳು ಮಾಯವಾಗಿದ್ದವು.

ವಿಪರೀತ ಆಸೆಯಿದ್ದರೂ ಇಳಿಯಲು ಭಯಪಡುತ್ತಿದ್ದಂತಹ ಸೌಂದರ್ಯ ಜಲಧಿಯಲ್ಲಿ ಅವನು ಮಿಂದುಬಿಟ್ಟಿದ್ದ.

# ೭

ಒಂದು ಹೊತ್ತಿನಲ್ಲಿ ಶಂಕರನಿಗೆ ಎಚ್ಚರವಾದಾಗ ಕನಕ ಪಕ್ಕದಲ್ಲಿರಲಿಲ್ಲ. ಬೆಳಗಾಗಿ ಹೋಯಿತೇನೋ ಎಂಬಾಲೋಚನೆಯು ಮೊದಲು ಬಂದಿತು. ತೆರೆದಿದ್ದ ಕಿಟಕಿಯಲ್ಲಿ ನೋಡಿದ. ಹೊರಗಡೆಯಿಂದ ಬೆಳಕು ಬರುತ್ತಿರಲಿಲ್ಲ ಅಂದರೆ ಇನ್ನೂ ಬೆಳಗಾಗಿಲ್ಲ. ಬೆಳಗಾಗಿಲ್ಲವೆಂದು ನಂಬುವಂತೆಯೂ ಇಲ್ಲ. ರಾತ್ರಿ ಬಲು ಹೊತ್ತು ಮಲಗಿ ನಿದ್ದೆ ಮಾಡಿದಂತೆ ಮನಸ್ಸಿಗೆ ಭಾಸವಾಗುತ್ತಿದೆ.

ಆದರೂ ಇಷ್ಟು ಹೊತ್ತಿಗೇ ಕನಕ ಎಲ್ಲಿಗೆ ಹೋದಳು?

ಕನಕ ಎಲ್ಲಿಗೂ ಹೋಗಿರಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಬಂದಳು. ಬರುತ್ತಾ ಚಹಾ ತೆಗೆದುಕೊಂಡು ಬಂದಳು.

ಅವಳ ಪಕ್ಕದಲ್ಲಿ ಕುಳಿತು ಚಹಾ ಕುಳಿಯುತ್ತಾ ಕೇಳಿದ.

"ಇದೇನು, ಕನಕ. ಇಷ್ಟು ಹೊತ್ತಿಗೇ ಚಹ ತೆಗೆದುಕೊಂಡು ಬಂದೆ?"

"ಬೆಂಗಳೂರಿನವರು ಬೆಳಗಾಗಿನ ಹೊತ್ತು ಬೆಡ್ ಕಾಫೀ ಕುಡಿಯುತ್ತಾರೆಂದೂ, ಆ ವೇಳೆಗೆ ಹೊತ್ತು ಹುಟ್ಟಿಯೇ ಇರುವುದಿಲ್ಲವೆಂದೂ ಕೇಳಿದ್ದೆ."

"ನಾವು ದಿನವೂ ಬೆಡ್ ಕಾಫೀ ಕುಡಿಯುತ್ತೇವೆಯೋ ಇಲ್ಲವೋ, ಬೆಡ್ ಚಹ ಅಂತೂ ಕುಡಿಯುವುದಿಲ್ಲ."

ಈ ಮಾತು ಹೇಳಿ ಶಂಕರ ನಕ್ಕ. ಕನಕ ಚಹ ಕುಡಿದು ಮುಗಿದಿತ್ತು. ಅವಳೂ ನಕ್ಕಳು.

ಕನಕಳ ನಗು ಸಂಗೀತದಂತೆ ಕಿವಿಗೆ ಇಂಪಾಗಿತ್ತು.

ಅದರಿಂದ ಶಂಕರನ ಮನಸ್ಸಿಗೊಂದು ಆಲೋಚನೆ ಬಂದಿತು.

ಆಗ ತಾನೇ ಚಹಾ ಬಟ್ಟಲು ಕೆಳಗಿಟ್ಟಿದ್ದವಳನ್ನು ಆಲಂಗಿಸಿ ಮೇಲೆ ಹೊದ್ದಿಕೆ ಎಳೆದುಕೊಂಡ.

ಕನಕ ತಪ್ಪಿಸಿಕೊಳ್ಳುವಳಂತೆ ಪ್ರಯತ್ನ ಮಾಡುತ್ತಾ ಕೇಳಿದಳು.

"ಇದೇನು, ಬೆಳಗಾದನಂತರ ?''

"ಇನ್ನೂ ಬೆಳಗಾಗಿಲ್ಲ, ಚಿನ್ನ. ಕಿಟಕಿಯಲ್ಲಿ ನೋಡು. ಇದು ರಾತ್ರಿಯ ಲೆಕ್ಕವೇ !"

ಮುಂದೆ ಅಡ್ಡಿಮಾತನಾಡಲು ಅವಕಾಶವಾಗದಂತೆ ಅವನ ತುಟಿಗಳು ಅವಳ ತುಟಿಗಳನ್ನು ಮುಚ್ಚಿಬಿಟ್ಟಿದ್ದವು.

ಪುನಃ ಶಂಕರನಿಗೆ ಎಚ್ಚರವಾಗುವ ವೇಳೆಗೆ ಬೆಳಗಾಗಿಬಿಟ್ಟಿತ್ತು. ಅಷ್ಟೇ. ಅಲ್ಲ. ಬಲಿತ ಬಿಸಿಲ್ಲು ಕೋಣೆಯಲ್ಲಿ ಬಿದ್ದಿತ್ತು.

ಈ ಬಾರಿ ಕನಕಳೆಲ್ಲಿಂದು ಹುಡುಕ ಬೇಕಾಗಿ ಬರಲಿಲ್ಲ. ಅವಳೇ ಎಬ್ಬಿಸಿದಳು.

ಅಷ್ಟು ಹೊತ್ತಿಗೆ ಕನಕ ಸ್ನಾನಮಾಡಿ, ಒಗೆದ ಸೀರೆಯುಟ್ಟಿದ್ದಳು. ನೊಸಲಿಗೆ ತೆಳುವಾಗಿ ತ್ರಿಪುಂಡ್ರಗಳನ್ನು ಧರಿಸಿ, ನಡುವೆ ಕುಂಕುಮ ಹಚ್ಚಿಕೊಂಡಿದ್ದಳು.

ಬಳಿ ಇದ್ದ ಅವಳ ಕಡೆ ಸ್ವಾಭಾವಿಕವಾಗಿ ಕೈ ಮುಂದೆ ಹೋಗುವುದರಲ್ಲಿತ್ತು. ಆದರೆ ತಾನು ಸ್ಪರ್ಶಿಸುವುದರಿಂದ ಮಡಿಯುಂದಿರುವ ಅವಳು ಮೈಲಿಗೆಯಾಗುತ್ತಾಳೆಂದು ಇದ್ದಲ್ಲಿಯೇ ನಿಂತಿತು.

ಮನೆಯ ಹಿಂದೆ ಸಣ್ಣ ಅಂಗಳ. ಅವನು ಕೈ ಕಾಲು ತೊಳೆದುಕೊಂಡು ಬರುವವರೆವಿಗೆ ಕಾದು ನಿಂತಿದ್ದಳು. ಬಂದವನನ್ನು ಕೇಳಿದಳು.

" ನೀವು ಈಗಲೇ ಸ್ನಾನ ಮಾಡಿಬಿಡಬಾರದೇ ? "

" ಬೇಡ. ಆ ಮೇಲೆ ಮಾಡುತ್ತೇನೆ "

ಕನಕ ಅವನಿಗೆ ತಂಬಿಗೆಯಲ್ಲಿ ನೀರು ಮೊಗೆದು ಕೊಟ್ಟಳು. ಶಂಕರ ಮುಖ ತೊಳೆದುಕೊಂಡು ಅವಳಿಂದ ತೆಗೆದುಕೊಂಡ ಟವಲಿನಿಂದ ಮುಖ ಒರಿಸಿ ಕೊಂಡ.

ಒಳಗೆ ಬರುತ್ತಾ ಕನಕನ ಹೆಗಲ ಮೇಲೆ ಕೈ ಹಾಕಿ ಎಳೆದು ಕೊಳ್ಳುತ್ತಾ ಹೇಳಿದ.

" ನಿನ್ನೊಂದಿಗೆ ಒಂದು ವಿಷಯ ಮಾತನಾಡಬೇಕು. "

ಅವನ ಹಿಡಿತದಿಂದ ಹಠಾತ್ತನೆ ತಪ್ಪಿಸಿಕೊಂಡು, ಸ್ವಲ್ಪದೂರವಾಗಿ ನಿಂತು ಅಂದಳು

" ಏನು ವಿಷಯವೋ ಹೇಳಿ. ಆ ಮೇಲೆ ರಾತ್ರಿಯ ಲೆಕ್ಕದಲ್ಲಿ ಬಂದೀತು "

ಕನಕ ಹೇಳಿದ ಮಾತಿಗೆ ಶಂಕರನಿಗೆ ನಗುವೇನೋ ಬಂದಿತು. ಆದರೆ ತನಗೆ ದುರಾಸೆ ಎಂದು ಎಲ್ಲಿ ತಪ್ಪು ತಿಳಿದುಕೊಳ್ಳುತಾಳೆಯೋ ಎಂದು ನಾಚಿಕೆಯಾಯಿತು.

"ಅಲ್ಲ, ಕನಕ ಅದಕ್ಕಲ್ಲ. ನಿಜವಾಗಿ ನಿನ್ನೊಂದಿಗೆ ಮಾತನಾಡಬೇಕು"

" ಆಗಲಿ, ಮಾತನಾಡಿ. ಅದಕ್ಕೆ ಮೈ ಮೇಲೆ ಕೈ ಹಾಕಬೇಕೆ ? "

"ಹಾಕಬಾರದೇಕೆ ?"

"ಹಾಕಬಹುದು. ಆಮೇಲೆ ವಿಷಯ ಅಲ್ಲಿಗೇ ನಿಲ್ಲುವುದಿಲ್ಲ"

"ಹಾಗಾದರೆ ನೀನು ನನ್ನನ್ನು ನಂಬುವುದಿಲ್ಲ, ಎನ್ನು"

"ಅದಿರಲಿ, ಅದೇನೋ ಹೇಳಬೇಕು-ಎಂದಿರಲ್ಲ, ಹೇಳಿ"

ಅಷ್ಟು ಹೊತ್ತಿಗೆ ಶಂಕರ ಮಂಚದ ಮೇಲೆ ಕುಳಿತುಕೊಂಡಿದ್ದ. ಪಕ್ಕದಲ್ಲಿ ಕೈ ತಟ್ಟಿ ಹೇಳಿದ.

"ನೀನಿಲ್ಲಿ ಬಂದು ಕುಳಿತುಕೊಳ್ಳದಿದ್ದರೆ ನಾನು ಹೇಳುವುದೇ ಇಲ್ಲ"

"ಹೇಳಲೇ ಬೇಡಿ"

ಕನಕ ನಗುತ್ತಾ ಹೊರಟುಹೋದಳು. ಎರಡು ಗಳಿಗೆಯ ನಂತರ ಎರಡು ಕಾಲೀ ದೋಸೆಗಳನ್ನು ತಟ್ಟೆಯಲ್ಲಿಟ್ಟುಕೊಂಡು ತಂದಳು. ಧಾರಾಳವಾಗಿ ಸುರಿದಿದ್ದ ಬೆಣ್ಣೆ ಕಾಸಿದ ತುಪ್ಪ ಗಮಗುಟ್ಟುತ್ತಿತ್ತು. ಇಟ್ಟಿದ್ದ

ಕಾಯಿಚಟ್ನಿ ಬಾಯಲ್ಲಿ ನೀರು ಬರಿಸುವಂತಿತ್ತು. ಅದಿಲ್ಲದಿದ್ದರೆ "ನನ್ನ ಪಕ್ಕದಲ್ಲಿ ಕುಳಿತುಕೊಂಡು, ನಾನು ಹೇಳುವ ಮಾತುಗಳನ್ನು ಕೇಳುವ ವರೆವಿಗೆ ನಾನೀ ದೋಸೆ ತಿನ್ನುವುದಿಲ್ಲ" ಎಂದು ಹಟಹಿಡಿಯುತ್ತಿದ್ದನೆಂದು ತೋರುತ್ತದೆ.

ಅವಳು ತಟ್ಟೆಯನ್ನು ಅವನ ಕೈಗೆ ಕೊಟ್ಟು ತಾನು ಕುರ್ಚಿಯನ್ನೆಳೆದು ಪಕ್ಕದಲ್ಲಿ ಕುಳಿತುಕೊಂಡಳು.

"ನೀನು ತಿನ್ನುವುದಿಲ್ಲವೇನು ?"

"ನೀವು ತಿನ್ನಿ. ಆಮೇಲೆ ನಾನು ತಿನ್ನುತ್ತೇನೆ"

"ಯಾಕೆ ? ನನಗೆ ಮತ್ತೊಂದು ಬೇಕಾದರೆ ಇಲ್ಲವೆನ್ನಬೇಕಾಗುತ್ತದಲ್ಲಾ ಎಂದೇನು ?"

"ಒಂದಲ್ಲದಿದ್ದರೆ ಹತ್ತು ತಿನ್ನಿ. ಇನ್ನೂ ಹಿಟ್ಟಿದೆ. ಹುಯ್ದು ಕೊಡುತ್ತೇನೆ"

ಶಂಕರ ತಿನ್ನತೊಡಗಿದ. ಅವನು ಮುಗಿಸುತ್ತಿದ್ದ ಹಾಗೆಯೇ ಕನಕ ಮತ್ತೆರಡು ದೋಸೆಗಳನ್ನು ತಂದಳು. ಅವನದು ಹೆಚ್ಚು ತಿನ್ನುವ ಸ್ವಭಾವವಲ್ಲ. ಆದರೂ ಅವಳ ಬಲಾತ್ಕಾರದಿಂದ ಮತ್ತೊಂದು ದೋಸೆಯನ್ನು ಹಾಕಿಸಿಕೊಂಡ.

ಅವನಿಗೆ ಕುಡಿಯುವುದಕ್ಕೆ ಚಹಾ ಕೊಟ್ಟು, ತಾನೂ ಎರಡು ದೋಸೆ ತಂದು ತಿನ್ನುತ್ತಾ ಕುಳಿತಳು.

ಅವನೇ ಕೇಳಿದ.

"ನಾನು ಕೇಳಬೇಕೆಂದಿರುವುದನ್ನು ಕೇಳಲೇ ?"

ನಗುತ್ತಾ ಅವಳು ಹೇಳಿದಳು.

"ಕೇಳಿ, ಅಗತ್ಯವಾಗಿ ಕೇಳಿ"

"ನಿನಗೆಷ್ಟು ವರ್ಷ ವಯಸ್ಸು, ಕನಕ"

"ಇಪ್ಪತ್ತು ವರ್ಷದ ಹತ್ತಿರ ಹತ್ತಿರವಾಗಿರಬಹುದು"

ಶಂಕರನಿಗೆ ಈ ಪ್ರಶ್ನೆಯನ್ನು ಆಗಲೇ ಕೇಳಿ ಮುಗಿಸಬೇಕಾದ ಅಗತ್ಯವಿರಲಿಲ್ಲ. ಮುಂದಿನ ಪ್ರಶ್ನೆ ಕೇಳಲು ಧೈರ್ಯ ತಂದುಕೊಳ್ಳುವುದಕ್ಕೆ ಈ

ಪ್ರಶ್ನೆ ಕೇಳಿದ್ದ. ಅವನೆಂದುಕೊಂಡಂತೆ ಪೂರ್ಣ ಧೈರ್ಯ ಬರಲಿಲ್ಲ. ಆದರೂ ಕೇಳಿದ.

"ನೀನು ಈ ವೃತ್ತಿಗೆ ಹೇಗೆ ಬಂದೆ ?"

"ನೀವು ಈ ಪ್ರಶ್ನೆಯನ್ನೇ ಕೇಳುತ್ತೀರೆಂದು ಊಹೆ ಮಾಡಿದ್ದೆ. ಮೊದಲು ಕೇಳುವ ಬದಲು ಆಮೇಲೆ ಕೇಳಿದಿರಿ. ಅಷ್ಟೇ ವ್ಯತ್ಯಾಸ.

"ನಾನು ಹನ್ನೆರಡು ಹದಿಮೂರು ವರ್ಷದವಳಾಗಿದ್ದಾಗ ನಮ್ಮಪ್ಪ ಸತ್ತುಹೋದರು. ನಾವೇನು ಶ್ರೀಮಂತರಲ್ಲ. ನಮ್ಮಮ್ಮ ಎಷ್ಟೋ ಕಷ್ಟ ಪಟ್ಟು ನನ್ನನ್ನು ಸಾಕತೊಡಗಿದಳು. ಅವಳಿಗೂ ವಯಸ್ಸಾಗುತ್ತಾ ಬಂದಂತೆ ಅದು ಅಸಾಧ್ಯವಾಯಿತು. ಅವಳಿಗಿದ್ದವಳು ನಾನೊಬ್ಬಳೇ ಮಗಳು. ನನ್ನನ್ನು ಯಾರಾದರೂ ಯೋಗ್ಯನಾದ ವರನಿಗೆ ಮದುವೆ ಮಾಡಿಕೊಟ್ಟು, ನನ್ನ ಮನೆಯಲ್ಲಿಯೇ ಇದ್ದು ಜೀವ ಬಿಡಬೇಕೆಂದುಕೊಂಡಿದ್ದಳು. ಆದರೆ ಬಡವರ ಮಗಳಾದ ನನ್ನನ್ನು ತಂದುಕೊಳ್ಳಲು ಯಾರೂ ಮುಂದೆ ಬರಲಿಲ್ಲ. ದುಡಿಯಲು ಕೈಲಾಗದಾಗ ನಮ್ಮಮ್ಮ ಸಣ್ಣಪುಟ್ಟ ಒಡವೆಗಳನ್ನು ಮಾರಿ ಮನೆ ಖರ್ಚು ನಡೆಸತೊಡಗಿದಳು.

"ಏನಾದರೂ ಆಗಲಿ, ಮಾನವಾಗಿ ಬದುಕಬೇಕು ಎಂಬುದಷ್ಟೇ ನಮ್ಮಮ್ಮನ ಅಭಿಮತವಾಗಿತ್ತು. ಆದರೆ ದೇವರ ಇಚ್ಛೆ ಹಾಗಿರಲಿಲ್ಲ.

"ನಮ್ಮಮ್ಮನ ಹತ್ತಿರವಿದ್ದ ಅಲ್ಪಸ್ವಲ್ಪ ಒಡವೆ ವಸ್ತುಗಳೂ ಮುಗಿದುವು. ಯಾರಾದರೂ ಏನಾದರೂ ಕೊಡಬೇಕು, ನಾವು ತಿನ್ನಬೇಕು. ಆ ಸ್ಥಿತಿಗೆ ಬಂದೆವು. ಒಂದು ದಿನ ಊಟವಿದ್ದರೆ ನಾಲ್ಕು ದಿನ ಊಟವಿರುತ್ತಿರಲಿಲ್ಲ. ಹೀಗೆ ಎಷ್ಟು ದಿನವಿರಲಾದೀತು. ಅದಲ್ಲದೇ ಅಷ್ಟು ಹೊತ್ತಿಗೆ ನಾನೂ ವಯಸ್ಸಿಗೆ ಬಂದಿದ್ದೆ. ಗಂಡಸರೆಲ್ಲರೂ ನನ್ನನ್ನು ಅದೊಂದು ಬಗೆಯಾಗಿ ನೋಡುತ್ತಿದ್ದರು. ಕಡೆಕಡೆಗೆ ನಾವು ಸರಿಯಾಗಿಯೇ ಇದ್ದರೂ ಜನರು ಅನೇಕ ಬಗೆಯಾಗಿ ಮಾತನಾಡಿಕೊಳ್ಳುತ್ತಿದ್ದರು.

"ಮಾನವಾಗಿರಬೇಕೆಂದು ಕಷ್ಟಪಟ್ಟುಕೊಂಡು ಬದುಕಿದ್ದರೂ ಕೆಟ್ಟ ಹೆಸರು ತಪ್ಪಲಿಲ್ಲ. ಇನ್ನೇಕೆ ಈ ಬದುಕು ಬದುಕಬೇಕು ? ಅದರ ಮೇಲೆ

ಕಾಮದೃಷ್ಟಿಯಿಂದಲೇ ನೋಡುತ್ತಿದ್ದ ಗಂಡಸರ ವಿಷಯವಾಗಿ ನನಗೆ ದ್ವೇಷ ಉಂಟಾಗಿತ್ತು.

"ಒಂದು ಬಾರಿ ಒಟ್ಟಿಗೆ ಎರಡು ದಿನ ಊಟವಿರಲಿಲ್ಲ. ಆ ದಿನವೇ ಈ ವೃತ್ತಿಯನ್ನು ಆರಂಭಿಸಿದೆ. ಅಂದಿನಿಂದ ನಾನೂ ಸುಖವಾಗಿ ಊಟ ಮಾಡುತ್ತಿದ್ದೇನೆ. ನಮ್ಮಮ್ಮನು ಊಟ ಮಾಡುವುದಕ್ಕೂ ಹಣ ಕಳಿಸುತ್ತಿದ್ದೇನೆ."

ಈ ಕತೆಯನ್ನು ಕೇಳಿದ ಶಂಕರನಿಗೆ ಬಹಳ ಪರಿತಾಪವಾಯಿತು. ತಾನು ಮೆಚ್ಚಿರುವ ಕನಕ ಹೆತ್ತವಮ್ಮನಿಗಾಗಿ ತ್ಯಾಗ ಮಾಡಿರುವುದನ್ನು ನೋಡಿ ಹೆಮ್ಮೆಯೂ ಆಯಿತು.

ಅವನು ಹೆಮ್ಮೆಪಡುತ್ತಿರುವಾಗಲೇ ಕನಕ ಅಂದಳು.

"ಇದಾಯಿತಲ್ಲ, ಇನ್ನೊಂದು ವಿಧವಿದೆ."

ಹಾಯಾಗಿ ಮಲಗಿದವನ ಮೇಲೆ ಚೇಳು ಬಿದ್ದು ಕುಟುಕಿದಂತಾಯಿತು, ಶಂಕರನಿಗೆ.

"ಅಂದರೆ— — —?"

"ಅದನ್ನೂ ಕೇಳಿಬಿಡಿ. ನಮ್ಮಪ್ಪ ಅಮ್ಮನಿಗೆ ಅಷ್ಟೇನೂ ಕಷ್ಟವಿರಲಿಲ್ಲ. ದುರಾಶಾಪರರಾಗಿದ್ದರು. ನಾನು ಮೈನೆರೆಯುವುದನ್ನೇ ಕಾಯುತ್ತಾ ಇದ್ದರೋ ಎಂಬಂತೆ–ಒಂದು ದಿನ ನಮ್ಮಮ್ಮ "ನಿಮ್ಮಪ್ಪ ಹೇಳಿದರು. ಈ ದಿನ ಸಾಹುಕಾರರ ಮಗ ಶರಭಣ್ಣ ಬರುತ್ತಾರೆ. ಅವರೊಡನೆ ವಿಶ್ವಾಸದಿಂದ ಮಾತನಾಡು. ಅವರು ಹೇಳಿದಂತೆ ಕೇಳು" ಎಂದು ಹೇಳಿದಳು. ನಾನು ಅದೆಲ್ಲ ಬೇಡವೆಂದೆ. ಎಷ್ಟೋ ಅತ್ತೆ. ಕರೆದೆ. ಒಂದೂ ಪ್ರಯೋಜನವಾಗಲಿಲ್ಲ. ಸಾಯಂಕಾಲ ಏಳು ಗಂಟೆಯ ಹೊತ್ತಿಗೆ ಶರಭಣ್ಣ ಬಂದು ಕೋಣೆಯಲ್ಲಿ ನಮ್ಮಪ್ಪನೊಡನೆ ಮಾತನಾಡುತ್ತಾ ಕುಳಿತುಕೊಂಡ. ಅವ ಬಂದ ಎರಡು ಗಳಿಗೆಗೆಲ್ಲಾ ಅಪ್ಪ ಹೊರಗೆ ಬಂದವನೇ ಅಮ್ಮನ ಮುಖ ನೋಡಿದ. ಅಮ್ಮ ನನ್ನನ್ನು ಒಳಗೆ ಹೋಗಲು ಹೇಳಿದಳು. ನಾನು ಹೋಗುವುದಿಲ್ಲವೆಂದೆ. ಅಪ್ಪ ಸುಟ್ಟುಬಿಡುವಂತೆ ನನ್ನ ಕಡೆಗೆ ನೋಡಿದ. ಅಮ್ಮ ನನ್ನನ್ನು ಎಳೆದುಕೊಂಡು ಹೋಗಿ ಒಳಗೆ ಬಿಟ್ಟು, ಬಾಗಿಲೆಳೆದು ಹಾಕಿಕೊಂಡಳು.

"ಆಮೇಲೆ ಏನು ಆಗಬೇಕಾಗಿದ್ದಿತೋ ಆಯಿತು. ಶರಭಣ್ಣ ಹೊರಟು ಹೋದ ಮೇಲೆಯೂ ನಾನು ಅಲ್ಲಿಯೇ ಬಿದ್ದಿದ್ದೆ. ಅನಂತರ ಎರಡು ಬಾರಿ

ನಮ್ಮಮ್ಮ ಬಂದು ಮಾತನಾಡಿಸಿದಳು. ನಾನು ಮಾತನಾಡಲಿಲ್ಲ. ಮೂರ ನೆಯ ಬಾರಿ "ಊಟ ಮಾಡು" ಎಂದು ಕರೆದಳು. ನಾನು "ತಲೆನೋವು ಊಟ ಬೇಡವೆ"ಂದೆ. ಬಲಾತ್ಕಾರದಿಂದ ಸ್ವಲ್ಪ ಹಾಲು ಕುಡಿಸಿ ಹೊರಟು ಹೋದಳು.

"ಹಾಗೆಯೇ ನಿದ್ದೆ ಬಂತು. ಎಚ್ಚರವಾದಾಗ ಅರ್ಧ ರಾತ್ರಿ. ಮನೆ ಯಲ್ಲಿ ನಮ್ಮಪ್ಪ,ಅಮ್ಮ,ಹುಡುಗರು ಮಲಗಿದ್ದಾರೆ. ನನಗೊಂದು ಆಲೋಚನೆ ಬಂದಿತು. ಹೊಟ್ಟೆಯಲ್ಲಿಟ್ಟುಕೊಂಡು ಬೆಳೆಸಿದ ತಾಯಿತಂದೆಗಳೇ ತನ್ನನ್ನು ಮಾರಲು ಉದ್ಯುಕ್ತರಾಗಿರುವಾಗ ನಾನೇಕೆ ಅವರ ಬಳಿ ಇರಬೇಕು ? ಇದ್ದು ನನ್ನನ್ನು ಮಾರಿಕೊಂಡು ಇವರಿಗೆ ಹಣ ಕೊಡುತ್ತಾ ಇರುವುದೇ? ನನ್ನ ಬದುಕು ಹೇಗಾದರೂ ಆಗಲಿ, ಎಂದುಕೊಂಡವಳು ಆಗಲೇ ಆ ಮನೆ ಬಿಟ್ಟು ಹೊರಟುಬಂದೆ.

"ಅಂದಿನಿಂದ ಈ ಜೀವನ. ನಿಮಗೆ ಯಾವುದು ಪ್ರಿಯವಾದರೆ ಅದನ್ನು ಇಟ್ಟುಕೊಳ್ಳಿ."

ಎರಡನೆಯ ಕತೆ ಮುಗಿಯುವ ವೇಳೆಗೆ ಶಂಕರನಿಗೆ ಕೆಂಡಾಮಂಡಲ ವಾಗಿ ಕೋಪ ಬಂದಿತ್ತು.

"ನೀನೇನು ನನ್ನನ್ನು ತಮಾಷೆ ಮಾಡುತ್ತಿದ್ದೀಯೋ?"

ಇಷ್ಟು ಹೊತ್ತೂ ನಗು ಬರದ ಅವಳಿಗೆ ನಗು ಬಂದಿತು. ನಕ್ಕು ಹೇಳಿದಳು.

"ಇದರಲ್ಲಿ ತಮಾಷೆಯೇನು, ಬಂದಿತು?"

"ತಮಾಷೆಯಲ್ಲದಿದ್ದರೆ ನೀನು ಹೀಗೆಲ್ಲಾ ಮಾತನಾಡುತ್ತಿದ್ದೆಯೇನು ? ನಾನು ನಿನ್ನ ಜೀವನವನ್ನು ಕುರಿತು ಕೇಳಿದರೆ ಹೀಗೆ ಇಲ್ಲದ ಕತೆಯ ನ್ನೆಲ್ಲಾ ಕಟ್ಟಿ ಹೇಳುತ್ತಿದ್ದೆಯಾ?"

ನಗುತ್ತಲೇ ಕನಕ ಹೇಳಿದಳು.

"ಸಣ್ಣ ವಿಷಯಗಳಿಗೆಲ್ಲಾ ಕೋಪ ಮಾಡಿಕೊಳ್ಳುತ್ತಿದ್ದರೆ ಹೇಗೆ ? ನೀವು ಕೇಳಿದ ಪ್ರಶ್ನೆಗೆ ಬರುವ ಉತ್ತರ ಹಾಗೆಯೇ?"

"ಅಂದರೆ— —"

"ಅಂದರೆ ಎಲ್ಲರೂ ಹೇಳುವುದು ಇದೇ ಕತೆಗಳನ್ನು ಅಥವಾ ಇಂತಹದೇ ಕತೆಗಳನ್ನು"

"ಎಲ್ಲರೂ ಹೇಳುತ್ತಾರೆಂದು ನೀನೂ ನನಗೆ ಸುಳ್ಳು ಹೇಳುವುದೇ, ಕನಕ."

ಇತರರಿಗಿಂತಲೂ ಇವನು ಮಾತ್ರ ಹೇಗೆ ಹೆಚ್ಚೋ ಕನಕಾಂಗಿಗೆ ಅರ್ಥವಾಗಿರಲಿಲ್ಲ. ಆದರೂ ಆ ಭಾವನೆಯನ್ನು ಸ್ಪಷ್ಟವಾಗಿ ಹೇಳಲಾರದೇ ಅಂದಳು.

"ನಿಮಗೆ ಸುಳ್ಳು ಹೇಳಿ ಮೋಸ ಮಾಡಬೇಕೆಂದಿದ್ದರೆ ಒಂದೇ ಕತೆ ಹೇಳುತ್ತಿದ್ದೆ. ನೀವು ಎಂದೆಂದೂ ಇಂಥಾ ವಿಷಯದಲ್ಲಿ ಮೋಸ ಹೋಗದಿರಲೆಂದೇ ಎರಡು ಕತೆಗಳನ್ನು ಹೇಳಿದ್ದು."

"ಹಾಗಾದರೆ ನೀನೆಂದೂ ನಿನ್ನ ನಿಜವಾದ ಕತೆಯನ್ನು ಯಾರಿಗೂ ಹೇಳಲಿಲ್ಲವೇ, ಕನಕ?"

ಇಲ್ಲವೆನ್ನುವಂತೆ ಅವಳು ತಲೆಯಾಡಿಸಿದಳು.

"ಅದೇಕೆ?"

"ಕೆಲವು ವೇಳೆ ನಿಜ ಹೇಳಿದರೆ ನಮ್ಮನ್ನೇ ನಾವು ಚುಚ್ಚಿಕೊಂಡಂತೆ ಆಗುತ್ತದೆ"

ಯಾರನ್ನೇ ಆಗಲಿ ನೋಯಿಸುವುದು ಶಂಕರನಿಗೆ ಸರಿ ಎನ್ನಿಸುತ್ತಿರಲಿಲ್ಲ. ಹಾಗೆಯೇ ಕನಕಳ ಪೂರ್ವ ಕತೆಯನ್ನು ವಿಚಾರಿಸಲಿಲ್ಲ.

ಶಂಕರ ಮಾತನಾಡದೇ ಕುಳಿತಿದ್ದುದನ್ನು ನೋಡಿ, ಸ್ವಲ್ಪ ಹೊತ್ತು ಸುಮ್ಮನಿದ್ದು, ಕನಕ ಕೇಳಿದಳು.

"ನಾನು ಪತಿತೆ. ನನ್ನಂತಹವಳೊಡನೆ ರಾತ್ರಿಯನ್ನು ಕಳೆದುದು ನಿಮ್ಮ ಮನಸ್ಸಿಗೆ ತಪ್ಪು ಮಾಡಿದಂತೆ ಕಂಡುಬರಬಹುದಲ್ಲವೇ ?"

"ಹಾಗೇನೂ ಇಲ್ಲ, ಕನಕ"

"ದೇವರಾಣೆಗೂ !"

"ಜೀವನದಲ್ಲಿ ಎಷ್ಟೋ ಅಸಂಖ್ಯಾತ ರಾತ್ರಿಗಳಿರುತ್ತದೆ. ಅಂತಹದರಲ್ಲಿ ಒಂದು ರಾತ್ರಿಯನ್ನು ಮರೆತುಬಿಟ್ಟರೆ ಎಲ್ಲವೂ ಸರಿಹೋಗತ್ತದೆ, ಬಿಡಿ"

ಮಗುವಿನಂತೆ ಅಂದ, ಶಂಕರ.

"ನಿನ್ನೆಯ ರಾತ್ರಿಯನ್ನು ಮರೆಯುವುದು ಅಷ್ಟು ಸುಲಭವಲ್ಲ"

ಆ ಮಾತು ಕೇಳಿ, ಕನಕಳಿಗೆ ನಗು ಬಂದಿತು.

"ಹೌದು, ಹೌದು. ನಾನು ಹೇಳಿಕೊಟ್ಟ ಪಾಠ ಮರೆಯುವುದು ಕಷ್ಟವೇ ಆಗಬಹುದು. ಆ ಮಾತಿರಲಿ, ನಾನು ಹೇಳಿಕೊಟ್ಟ ಪಾಠ ಬಹಳ ಚೆನ್ನಾಗಿದ್ದಿತಲ್ಲವೇ ?"

ಪ್ರಶ್ನೆ ಹಾಗೆ ಕೇಳಲ್ಪಟ್ಟಾಗ ಶಂಕರನಿಗೆ ನಾಚಿಕೆಯಾಯಿತು.

"ನನ್ನ ಪ್ರಶ್ನೆಗೆ ಜವಾಬು ಕೊಡದಿದ್ದರೆ ಬೇಡ, ಬಿಡಿ. ಎಂದಾದರೊಂದು ದಿನ ನಿಮಗೆ ನನ್ನ ಜ್ಞಾಪಕ ಬಂದರೆ ನನಗೆ ಅಷ್ಟೇ ಸಾಕು"

"ಎಂದಾದರೊಂದು ದಿನ! ನಿನ್ನನ್ನು ಮರೆಯುವುದು ನನ್ನಿಂದ ದುಸ್ಸಾಧ್ಯ"

"ಈ ಮನೆಯಿಂದ ಹೊರಗೆ ಹೋಗುವವರೆವಿಗೆ ಹೇಳುವುದೇ ಹಾಗೆ. ಇನ್ನೊಂದು ದಿನವಾದರೂ ನೆನಪು ಮಾಡಿಕೊಂಡು ಈ ಬಡವಳ ಮನೆಗೆ ಬಂದರೆ ಅದೇ ದೊಡ್ಡ ಭಾಗ್ಯ"

ಮಾತಿಗೆ ಮರುಮಾತು ಹೇಳಲು ಹೊರಟ ಶಂಕರ ಇನ್ನೇನೋ ಕೇಳಬೇಕೆಂದುಕೊಂಡು ಮಾತು ತಿರಿಗಿಸಿದ.

"ಕನಕ. ನೀನು ನಿಜವಾಗಿಯೂ ನನ್ನನ್ನು ಪ್ರೀತಿಸುತ್ತೀಯಾ ?"

"ಪ್ರೀತಿಸದೇ ಉಂಟೆ ? ನಿಮಗೇಕೆ ಸಂದೇಹ ? ನನ್ನ ತರಹ ನೋಡಿದರೆ ನಾನು ಪ್ರೀತಿಸುತ್ತಿರುವಂತೆ ಕಂಡುಬರುತ್ತಿಲ್ಲವೇ ?"

"ಬರುತ್ತದೆ. ಆದರೆ ನನಗೆ ಒಂದು ಸಂದೇಹವಿದೆ"

"ಅದೇನು ಹೇಳಿ"

"ವಾಸ್ತವವಾಗಿ ನೀನು ನನ್ನನ್ನು ಪ್ರೇಮ ಮಾಡುವುದಾದರೆ ನಿನ್ನೆಯ ದಿನ ರಾತ್ರಿ ನೀನೇಕೆ ನನ್ನಿಂದ ಹಣ ತೆಗೆದುಕೊಂಡೆ ?"

ಪ್ರಶ್ನೆ ಸ್ವಲ್ಪ ಕಠಿಣವಾಗಿತ್ತು.

"ಅವೆರಡೂ ಬೇರೆ ಬೇರೇ ವಿಷಯಗಳು"

"ಅಲ್ಲ. ಸ್ತ್ರೀ ಪುರುಷರ ರತಿ ಎನ್ನು. ಅಮರ ಪ್ರೇಮವೆನ್ನು. ಅದಕ್ಕೆ ಮೂಲ ಅವರವರಲ್ಲಿರುವ ವಿಶ್ವಾಸ. ಅಲ್ಲಿ ಹಣದ ಮಾತು ಬರುವುದು ಸರಿಯಲ್ಲವೆಂದು ನನ್ನ ಅಭಿಪ್ರಾಯ"

"ಇವೆಲ್ಲಾ ಆದರ್ಶದ ಮಾತುಗಳು. ನೀವು ಹೇಳಿದಂತೆ ನಾನು ಹಣ ತೆಗೆದುಕೊಳ್ಳದೇ ಪ್ರೀತಿಸಲು ಆರಂಭ ಮಾಡಿದರೆ ಹೊಟ್ಟೆಗೇನು ಮಾಡಲಿ ?"

"ನಾನು ಹೇಳುತ್ತಿರುವುದು ಅದೇ ಕನಕ. ಪ್ರೇಮವನ್ನೂ ಹಣವನ್ನೂ ಬೆರಸಬಾರದು. ಯಾರು ಯಾರನ್ನು ಪ್ರೇಮ ಮಾಡುತ್ತಾರೆಯೋ, ಅವರು ಅವರನ್ನು ಪ್ರೀತಿಸಬೇಕು. ಜೀವನಕ್ಕೆ ಹಣವನ್ನು ಬೇರೆಯಾಗಿ ಸಂಪಾದಿಸಿಕೊಳ್ಳಬೇಕು. ಹಾಗೆ ಮಾಡುವುದರಿಂದ ಪ್ರೇಮ–ಹಣಗಳನ್ನು ಬೇರೆ ಬೇರೆಯಾಗಿಡುವುದು ಸಾಧ್ಯವಾಗುತ್ತದೆ"

ಶಂಕರ ಮರುಮಾತನಾಡದಂತೆ ಜವಾಬು ಕೊಟ್ಟು ಅವನ ಬಾಯಿ ಮುಚ್ಚಿಸುವ ಬಗೆ ಕನಕಳಿಗೆ ಗೊತ್ತಿತ್ತು. ಆದರೆ ಒಟ್ಟಾಗಿ ಇನ್ನೂರು ಕೊಟ್ಟವನನ್ನು ಹಾಗೆ ಮಾಡುವುದು ಅವಳಿಗೆ ಒಪ್ಪಲಿಲ್ಲ. ಇನ್ನೂರು ರೂಪಾಯಿ ! ನಲವತ್ತು ಜನ ಕೊಡುವಷ್ಟು ಹಣ. ಇಪ್ಪತ್ತು ರಾತ್ರಿಗಳಿಗಾಗುವ ಸಂಪಾದನೆ.

"ಪ್ರೇಮಿಸಿದವರನ್ನು ಪ್ರೀತಿ ಮಾಡುತ್ತೇನೆಂದುಕೊಳ್ಳಿರಿ. ನಾನು ಜೀವನೋಪಾಯಕ್ಕೇನು ಮಾಡುವುದು ?"

"ಜೀವನೋಪಾಯಗಳಿಗೆ ಎಷ್ಟೋ ಮಾರ್ಗಗಳಿವೆ. ಹೆಂಗಸರು ಆಸ್ಪತ್ರೆಗಳಲ್ಲಿ ನರ್ಸುಗಳಾಗಬಹುದು. ಸ್ಕೂಲುಗಳಲ್ಲಿ ಮೇಡಂಗಳಾಗಬಹುದು"

"ಇನ್ನು ನಾನು ನರ್ಸ್ ಅಥವಾ ಮೇಡಂ ಆಗಲು ಸಾಧ್ಯವೇ ?"

ನಕ್ಕಳು, ಕನಕ.

"ಇನ್ನೂ ಸಾಧ್ಯ. ಅದಕ್ಕೆ ಸ್ವಲ್ಪ ದಿನ ಓದಬೇಕು, ಅಷ್ಟೆ. ಅದೂ ಆಗದಿದ್ದರೆ ಹೊಲಿಗೆ ಕೆಲಸ ಕಲಿತು ಟೈಲರ್ ಆಗಬಹುದು"

ಅವಳು ಉತ್ತರ ಕೊಡಲಿಲ್ಲ.

"ಯಾಕೆ, ನಾನು ಹೇಳುವುದು ಸರಿಯಾಗಿ ಕಂಡುಬರುವುದಿಲ್ಲವೇ ?"

"ನಿಮ್ಮ ದಮ್ಮಯ್ಯ. ನಿಮಗೆ ಗೊತ್ತಾಗುವುದಿಲ್ಲ, ಸುಮ್ಮನಿರಿ"

ಹೇಳಲೇಬೇಕೆಂದು ಶಂಕರ ಹಠ ಹಿಡಿದ. ಅವಳು ಹೇಳಿದಳು.

"ಕೇಳಲೇ ಬೇಕಾದರೆ ಕೇಳಿಬಿಡಿ. ನರ್ಸ್ ಆಸ್ಪತ್ರೆಯಲ್ಲಿ ಕೆಲಸ ಮಾಡಿಕೊಂಡಿದ್ದರೆ ಅಷ್ಟರಲ್ಲಿಯೇ ಮುಗಿಯುತ್ತದೆ ಎಂದಿದ್ದೀರೇನು ? ಶಾಲೆಯಲ್ಲಿ ಪಾಠ ಹೇಳಿ ಬಂದುಬಿಟ್ಟರೆ ಮೇಡಂ ಕೆಲಸ ಮುಗಿಯಿತು ಎನ್ನುತ್ತೀರೇನು ?

ಅವಳು ಯಾರ ಬಳಿಯಲ್ಲಿ ಕೆಲಸ ಮಾಡುತ್ತಿರುತ್ತಾಳೆಯೋ ಅವರು ಅವಳಿಂದ ಕೆಲಸವಲ್ಲದೇ ಇನ್ನೂ ಏನೋ ಅಪೇಕ್ಷಿಸುತ್ತಾರೆ. ಹೆಂಗಸರು ಹೆಂಗಸಿನ ಕೈಕೆಳಗೇ ಕೆಲಸ ಮಾಡಿದಳೆಂದುಕೊಳ್ಳಿರಿ. ಅಲ್ಲಿಗೂ ಈ ಭಾಧೆ ತಪ್ಪಿದ್ದಲ್ಲ. ಆಧಿಕಾರಿಯಾದ ಹೆಂಗಸು ತನ್ನ ಕೈಕೆಳಗಿರುವ ಹೆಂಗಸರನ್ನು ಸ್ವಪ್ರಯೋಜನಕ್ಕಾಗಿ ಮಾರಲು ಪ್ರಯತ್ನ ಮಾಡುತ್ತಾಳೆ. ಅಂತೂ ಒಟ್ಟಿನಲ್ಲಿ ಆಗುವುದೇನು ? ಸಂಬಳ ಬರುವುದರಲ್ಲಿ ಅರಹೊಟ್ಟೆ ತಿಂದುಕೊಂಡು, ಕಂಡವರಿಗೆಲ್ಲಾ ಸೂಳೆಯಾಗಿ ಬದುಕಬೇಕು. ಅದರಿಂದ ಏನು ವ್ಯತ್ಯಾಸವಾಯಿತೆನುತ್ತೀರಿ ?"

ಶಂಕರನಿಗೆ ಏನು ಹೇಳಬೇಕೋ ಗೊತ್ತಾಗಲಿಲ್ಲ. ವಿಷಯಕ್ಕಿಂತಲೂ ಅವಳ ಬುದ್ಧಿಶಕ್ತಿಯು ಅವನನ್ನು ವಿಸ್ಮಯಗೊಳಿಸಿತು.

"ನಾನು ಎಲ್ಲರ ವಿಷಯವನ್ನೂ ಹೇಳುತ್ತಿಲ್ಲ. ಸಂಭವಿಸಬಹುದಾದ ಆತಂಕಗಳನ್ನು ಹೇಳುತ್ತಿದ್ದೇನೆ. ಒಟ್ಟಿನಲ್ಲಿ ಒಂದು ಮಾತು. ಯಾರು ಯಾವ ವೃತ್ತಿಯನ್ನೇ ಅವಲಂಬಿಸಲಿ. ಅದರಿಂದ ಇತರರ ಆಶ್ರಯವನ್ನು ಮಾಡಲೇ ಬೇಕಾಗುತ್ತದೆ. ಹೆಂಗಸು ಗಂಡಸರ ಆಶ್ರಯಕ್ಕೆ ಬಂದಾಗಲೆಲ್ಲಾ ಅವರು ಅವಳ ದೇಹಸುಖವನ್ನು ಅಪೇಕ್ಷಿಸುತ್ತಾರೆ. ಅದಕ್ಕೆ ಗಂಡು ಹೆಣ್ಣನ್ನು ನೋಡುವ ದೃಷ್ಟಿಯೇ ಕಾರಣ. ಆ ದೃಷ್ಟಿ ಕಾಮದೃಷ್ಟಿ."

"ಯಾರದು ಹೇಗಾದರೂ ಹೋಗಲಿ, ನೀನು ಮಾತ್ರ ಬಂದವರ ಬಳಿಗೆಲ್ಲಾ ಹೋಗುವುದು ನನಗೆ ಇಷ್ಟವಿಲ್ಲ.''

ಇಷ್ಟವಿಲ್ಲ. ಹಾಗೆನ್ನಲು ಇವನಾರು? ತನಗೆ ತಾಳೀ ಕಟ್ಟಿದ ಗಂಡನೇ?

''ನಾನೂ ಕಂಡಕಂಡವರ ಬಳಿಗೆಲ್ಲಾ ಹೋಗುವುದಿಲ್ಲ. ಹಣ ತೆಗೆದು ಕೊಳ್ಳುತ್ತೇನೆಂಬುದು ನಿಜ. ಆದರೆ ನನ್ನ ಮನಸ್ಸಿಗೆ ಒಪ್ಪಿಗೆಯಾಗದವನ ಬಳಿ ಹೋಗುವುದಿಲ್ಲ."

"ಅದೆಲ್ಲಾ ಬೇಡ, ಕನಕ. ಇನ್ನು ಮೇಲೆ ನೀನು ಯಾರಿಂದಲೂ ಹಣ ತೆಗೆದುಕೊಳ್ಳಕೂಡದೆಂದು ನನ್ನ ಇಷ್ಟ."

"ಹಾಗಾದರೆ ನಾನು ಉಪವಾಸವಿದ್ದು ಸಾಯಬೇಕು."

"ನೀನು ಉಪವಾಸ ಬೀಳದಂತೆ ನಾನು ನೋಡಿಕೊಳ್ಳುತ್ತೇ.''

"ಅದು ಹೇಗೆ?"

"ನಾನು ನಿನ್ನನ್ನು ಮದುವೆಯಾಗುತ್ತೇನೆ.''

ಕನಕ ಚಕಿತಳಾದಳು. ಅವಳೆಂದೂ ಅಷ್ಟು ಚಕಿತಳಾಗಿರಲಿಲ್ಲ. ಮುಖ ಭಾವ ನೋಡಿದರೆ ಅವಳಾ ಮಾತು ನಂಬಿದಳೆಂದು ಹೇಳುವುದಕ್ಕೆ ಆಗುತ್ತಿರಲಿಲ್ಲ.

"ಯಾಕೆ, ನನ್ನ ಮಾತು ನಂಬುವುದಿಲ್ಲವೇ?''

"ನಂಬುತ್ತೇನೆ. ಆದರೆ ಮದುವೆ ಎಂದರೆ ಮಕ್ಕಳಾಟಿಕೆ ಎಂದುಕೊಂಡಿರಾ?ನನಗಂತೂ ಹೇಳುವವರು ಕೇಳುವವರು ಯಾರೂ ಇಲ್ಲ. ನಿಮಗೂ ಇಲ್ಲವೇ ? ನಿಮ್ಮ ತಾಯಿತಂದೆಗಳನ್ನು ಕೇಳಬೇಡವೇ ?''

"ಯಾರನ್ನೂ ಕೇಳಬೇಕಾಗಿಲ್ಲ. ನನ್ನ ಮನಸ್ಸಿಗೆ ನ್ಯಾಯವೆಂದು ಕಂಡು ಬಂದುದಕ್ಕೆ ಯಾರು ಅಡ್ಡಿ ಹೇಳಿದರೂ ನಾನು ಕೇಳುವುದಿಲ್ಲ."

ಕನಕ ಮದುವೆ ಮಾಡಿಕೊಂಡು ಸಂಸಾರ ಮಾಡಲು ತಯಾರಾಗಿದ್ದಳೋ ಇಲ್ಲವೋ ಹೇಳಲಾಗುವುದಿಲ್ಲ. ಆದರೆ ಅವನು ಹೇಳಿದ ಮಾತುಗಳಿಂದ ಅವಳಿಗೆ ಆನಂದವಾಯಿತು. ಭಾವೋದ್ರೇಕದಿಂದ ಕುಣಿಯುವಂತಾಯಿತು.

ಕುರ್ಚಿಯಲ್ಲಿ ಕುಳಿತಿದ್ದವಳು ಮೇಲೆದ್ದು ತೊಟ್ಟಿಲಲ್ಲಿ ಕುಳಿತಿರುವ ಮಗುವನ್ನು ಎತ್ತಿಕೊಂಡು ಮೇಲೆ ಮೇಲೆ ಮುತ್ತಿಡುವ ತಾಯಿಯಂತೆ ಮಂಚದ ಮೇಲೆ ಕುಳಿತಿದ್ದ ಶಂಕರನನ್ನು ಮುದ್ದಿಸಿದಳು.

ಕಡೆಯಲ್ಲಿ ಅವನ ತುಟಿಗಳಿಂದ ತನ್ನ ತುಟಿಯನ್ನು ನಿಧಾನವಾಗಿ ಬೇರೆ ಮಾಡಿ ಹೇಳಿದಳು.

"ನನ್ನ ವಿಷಯವಾಗಿ ನಿಮ್ಮಷ್ಟು ಆದರವನ್ನು ತೋರಿದವರೆ ಇಲ್ಲ."

# ೭

ಬೆಳಗಾಗ ಹತ್ತು ಗಂಟೆಯಾಗಿತ್ತು. ಶಂಕರ ಮಂಚದ ಮೇಲೆ ಮಲಗಿಕೊಂಡು ಏನೋ ಯೋಚಿಸುತ್ತಿದ್ದ. ಏನು ಯೋಚಿಸುತ್ತಿದ್ದನೆಂಬುದರ ಪರಿಜ್ಞಾನ ಅವನಿಗೇ ಇಲ್ಲ. ನೂರಾರು ಯೋಚನೆಗಳು. ಎಲ್ಲಾ ಕುರಡು ಆಲೋಚನೆಗಳು. ಒಂದು ಮನಸ್ಸಿಗೆ ಬರುತ್ತದೆ. ಅದು ಮಥನವಾಗುವುದರೊಳಗಾಗಿ ಪುಟ್ಟ ಹಕ್ಕಿಯಂತೆ ಅದು ಹಾರಿಹೋಗುತ್ತದೆ.

ಅಷ್ಟರಲ್ಲಿಯೇ ಮತ್ತೊಂದು ಹಾರಿ ಬಂದು ಆ ಸ್ಥಳದಲ್ಲಿ ಕುಳಿತುಕೊಳ್ಳುತ್ತದೆ.

ಮನೆಯ ಬಾಗಿಲು ಸರಿಸಿದಂತಾಯಿತು.

ಯಾರೋ ಬಂದಿರಬೇಕು. ಇಲ್ಲ, ಕನಕ ಬಂದಿರಬೇಕು. ಕನಕಳೇ? ಸಾಮಾನು ತೆಗೆದುಕೊಂಡು ಇಷ್ಟು ಬೇಗ ವಾಪ್ಸ ಬರುವುದು ಹೇಗೆ ಸಾಧ್ಯ? ಪೇಟೆಗೆ ಹೋಗುವುದಿಲ್ಲವೆಂದು ವಾಪ್ಸ ಬಂದುಬಿಟ್ಟಳೇನು?

ಬಾಗಿಲು ಸರಿಸಿಕೊಂಡು ಬಂದವರು ಅವರು ಯಾರೂ ಅಲ್ಲ. ವಾಸುದೇವ.

ಶಂಕರನಿಗೆ ಗಾಬರಿಯಾಯಿತು. ಅವನಿಲ್ಲಿ ವಾಸುದೇವನನ್ನು ನಿರೀಕ್ಷಿಸಿರಲಿಲ್ಲ. ಜಗ್ಗನೆ ಎದ್ದು ಕುಳಿತುಕೊಂಡ.

"ನಾನಿಲ್ಲಿರುವುದು ನಿಮಗೆ ಹೇಗೆ ಗೊತ್ತಾಯಿತು?"

ವಾಸುದೇವನಿಗೆ ಗೊತ್ತಾಗುವುದು ಕಷ್ಟವೇನೂ ಆಗಿರಲಿಲ್ಲ. ಅವನೊಡನೆ ಇದ್ದ ಬೇಬಿ ಬೆಳಗಿನ ಜಾವ ಹಾಸಿಗೆಯಿಂದ ಎದ್ದು ಹೋಗುವಾಗ ತನ್ನೊಡನೆ ಬಂದಿದ್ದ ಕನಕಳಿಗಾಗಿ ಪಕ್ಕದ ಕೋಣೆಯೊಳಗೆ ಹೋಗಿ ನೋಡಿದ್ದಳು. ಖಾಲಿಯಾಗಿತ್ತು. ಬಂದು ವಾಸುದೇವನಿಗೆ ಹೇಳಿದ್ದಳು.

"ನೋಡಿದಿರಾ? ಕನಕ ಆ ಹುಡುಗನನ್ನು ಹಾರಿಸಿಕೊಂಡು ಹೊರಟು ಹೋಗಿದ್ದಾಳೆ. ಅತ್ತಕಡೆಯ ಬಾಗಿಲು ತೆಗೆದುಕೊಂಡು ಹೊರಟುಹೋಗಿದ್ದಾರೆ. ಕೋಣೆ ಖಾಲಿ."

ಬೆಳಗಾಗ ನೋಡಿಕೊಳ್ಳೋಣವೆಂದು ಹೊದೆದುಕೊಂಡು ಮಲಗಿದ, ವಾಸುದೇವ.

ಎಚ್ಚರವಾಗುವ ವೇಳೆಗೆ ಒಂಬತ್ತೂವರೆ ಗಂಟೆಯಾಗಿತು. ಚಹಾ ತರಿಸಿ ಕುಡಿದುಕೊಂಡು ಕನಕಳಮನೆ ವಿಚಾರಿಸಿಕೊಂಡು ನೇರವಾಗಿ ಬಂದಿದ್ದ.

"ನನ್ನನ್ನೇನು ಗುಗ್ಗು ಎಂದುಕೊಂಡಿದ್ದೀಯಾ? ಹೋಗುವುದಕ್ಕಿಂತ ಮುಂಚೆ ಗೊತ್ತಾಗಿದ್ದರೆ ಚೆನ್ನಾಗಿತ್ತು. ಹೋದ ಮೇಲೇನು? ಎಲ್ಲಿ ಓಡಿಹೋಗುತ್ತೀ. ಇಲ್ಲೇ ಇರುತ್ತೀ. ಬೆಳಗಾಗ ನೋಡಿಕೊಳ್ಳೋಣವೆಂದು ಸುಮ್ಮನಾದೆ."

ವಾಸುದೇವನು ಮಾತನಾಡಿದ ಧೋರಣೆಯನ್ನು ನೋಡಿದರೆ ಅವನಿಗೆ ವಿಪರೀತ ಅಸಮಾಧಾನವಾಗಿದೆ ಎಂದೂ, ಅಸಮಾಧಾನ ಕೋಪಕ್ಕೆ ತಿರುಗುವವರೆವಿಗೆ ಕಾದಿದೆ ಎಂದೂ ತೋರುತ್ತಿತ್ತು. ಅದಷ್ಟೂ ಅರ್ಥವಾದರೂ ಸಹ ಏನೂ ಅರ್ಥವಾಗದಂತೆ ಹೇಳಿದ.

"ನಾನೇ ಬಂದು ನೋಡಬೇಕು ಎಂದಿದ್ದೆ. ಅಷ್ಟರಲ್ಲಿ ನೀವೇ ಬಂದಿರಿ. ಒಳ್ಳೆಯದೇ ಆಯಿತು. ಬನ್ನಿ, ಕುಳಿತಕೊಳ್ಳಿ."

"ನಾನು ಬಂದುದು ಇಲ್ಲಿ ಕುಳಿತುಕೊಳ್ಳುವುದಕ್ಕೆ ಅಲ್ಲ. ಏಳು. ಹೋಗೋಣ."

ತಾನು ಏಳುವುದಕ್ಕೆ ತಡಮಾಡಿದರೆ ತನಗೂ ವಾಸುದೇವನಿಗೂ ಜಗಳವಾಗಬಹುದೆಂದು ಶಂಕರ ಅರ್ಥ ಮಾಡಿಕೊಂಡ. "ನನ್ನಿಷ್ಟದಂತೆ ನಾನು ನಡೆಯುತ್ತೇನೆ. ಕೇಳುವುದಕ್ಕೆ ನೀನಾರು?" ಎಂದು ಹೇಳುವುದಕ್ಕೆ ತಯಾ

ರಾಗಿದ್ದ. ಆದರೆ ಆ ಮಾತು ಕತೆಗಳನ್ನು ಈ ಮನೆಯಲ್ಲಿ ಆಡುವುದಕ್ಕೆ ಅವನು ಸಿದ್ಧವಾಗಿರಲಿಲ್ಲ.

ಎದ್ದು, ಹೊರಗೆ ಬಂದ. ಅದೇ ಮನೆಯಲ್ಲಿದ್ದ ಇನ್ನೊಬ್ಬ ಹುಡುಗಿ ದೇವರ ಪಠಕ್ಕೆ ಹೂವಿಡುತ್ತಿದ್ದಳು. ಅವಳನ್ನು ಕರೆದು ತಾನು ಸ್ವಲ್ಪ ಹೊರಗೆ ಹೋಗುವುದಾಗಿಯೂ, ಕನಕ ಬಂದರೆ ಪುನಃ ಬರುವುದಾಗಿ ಹೇಳ ಬೇಕೆಂದೂ ಹೇಳಿ, ವಾಸುದೇವನೊಡನೆ ಹೊರಟ.

ಹೋಗುತ್ತಾ ದಾರಿಯಲ್ಲಿ ಕೇಳಿದ.

"ನಿನ್ನೆಯ ದಿನ ರಾತ್ರಿ ನಾನೇಕೆ ಕನಕಳೊಂದಿಗೆ ಬಂದೆನೆಂಬುದನ್ನು ನೀವು ಕೇಳಲೇ ಇಲ್ಲವಲ್ಲ."

ಕೇಳುವುದು ವಾಸುದೇವನಿಗೆ ಇಷ್ಟವಿರಲಿಲ್ಲ. ಆದರೂ ಸುಮ್ಮನೆ ಕೇಳಿದ.

"ಯಾಕೆ ಹೇಳದೇ ಬಂದೆ ?"

"ನಾನು ಕನಕಾಂಗಿಯನ್ನು ಪ್ರೀತಿಸುತ್ತೇನೆ."

"ಓಹೋ ! ಪ್ರೀತಿಸುತ್ತೀಯಾ, ಸರಿ. ನಿನ್ನೆಯ ದಿನ ರಾತ್ರಿ ಅವಳಿ ಗೇನು ಕೊಟ್ಟೆ ?"

"ಯಾಕೆ ?"

"ಹೇಳು. ನನ್ನೊಂದಿಗೆ ಹೇಳಬಾರದೇ ?"

"ಇನ್ನೂರು ರೂಪಾಯಿ ಕೊಟ್ಟೆ."

"ಸಾಕಷ್ಟು ಪ್ರೀತಿ ಮಾಡಿದ್ದೀಯೆ ! ಇನ್ನು ಅವಳನ್ನು ಮರೆತುಬಿಟ್ಟು ಸುಮ್ಮನಿರು."

"ಹಾಗಲ್ಲ, ಮಿ|| ವಾಸುದೇವ್. ನಾನು ಕನಕಳನ್ನು ಉದ್ಧಾರಮಾಡ ಬೇಕೆಂದಿದ್ದೇನೆ."

"ಉದ್ಧಾರವೆಂದರೆ ಏನೋ ?"

ಏಕಾಏಕಿ ಮದುವೆ ಮಾಡಿಕೊಳ್ಳುತ್ತೇನೆಂದು ಹೇಳಲು ಅವನಿಗೆ ಸಂ ಕೋಚವಾಗಿ ಹೀಗೆ ಹೇಳಿದ.

"ಅವಳೀಗ ಕೆಟ್ಟ ವೃತ್ತಿಯಲ್ಲಿದ್ದಾಳೆ. ಆದರೆ ವಾಸ್ತವವಾಗಿ ಹುಡುಗಿ ಒಳ್ಳೆಯವಳು. ಅವಳಿಗೆ ಹಾಗೆಲ್ಲಾ ಬದುಕುವುದು ಇಷ್ಟವಿಲ್ಲ. ಅದರಿಂದ

ಈ ವೃತ್ತಿಯನ್ನು ಬಿಟ್ಟು ಸ್ವತಂತ್ರವಾಗಿ ಜೀವನೋಪಾಯ ಮಾಡಿಕೊಳ್ಳಲು ಸಹಾಯ ಮಾಡಬೇಕೆಂದಿದ್ದೇನೆ.”

“ಹೌದು, ಹೌದು. ಅನೇಕರು ಇದೇ ರೀತಿ ಉದ್ಧಾರ ಮಾಡಿದ್ದಾರೆ.”

“ಏನು, ಆ ಧ್ವನಿಯಲ್ಲಿ ಮಾತನಾಡುತ್ತೀರಿ?”

“ಇನ್ನೇನು ಹೇಳಲಿ, ಹೇಳು. ಅವಳನ್ನೆಲ್ಲಿಯಾದರೂ ಸರಿಮಾಡಲಾಗುತ್ತದೆಯೇ? ಅದು ನಿನ್ನ ಭ್ರಾಂತಿ.”

“ಹಾಗಲ್ಲ. ಅವಳು ಆ ವೃತ್ತಿಯು ತನಗೆ ಅಸಹ್ಯವೆನ್ನುತ್ತಾಳೆ.”

“ನಿನ್ನನ್ನು ಮೋಸ ಮಾಡುವುದಕ್ಕಾಗಿ ಹೇಳುತ್ತಾಳೆ. ನಿನ್ನಿಂದ ಮತ್ತಷ್ಟು ಹಣ ಕಿತ್ತುಕೊಳ್ಳುವುದಕ್ಕಾಗಿ ಈ ಹೂಟ ಎತ್ತಿದ್ದಾಳೆ.

“ನೀನು ಹೇಳುವು— — — —”

“ನೀನು ಹೇಳುವುದೂ ಬೇಡ. ನಾನು ಕೇಳುವುದೂ ಬೇಡ. ಅವಳಿಗೆ ಬೇಕಾಗಿರುವುದು ಹಣ. ಹಣ. ಹಣ”

ಕನಕಾಂಗಿಯು ಮನೆಗೆ ಬರುತ್ತಿದಂತೆಯೇ ಶಿವಣ್ಣ ಅವಳನ್ನು ಎದುರುಗೊಂಡ.

“ಏನು ಚಿನ್ನ, ನಿನ್ನೆಯ ದಿನ ರಾತ್ರಿ ಅಷ್ಟೊಂದು ಅವುಟ ಮಾಡಿಬಿಟ್ಟೆ?”

ಯಾರೋ ಬಂದು ಎದುರುಗೊಳ್ಳುತ್ತಾರೆಂದು ಅವಳು ನಿರೀಕ್ಷಿಸಿದ್ದರೆ ಅದರ ಬದಲು ಮತ್ತಾರೋ ಬಂದು ಎದುರುಗೊಂಡುದರಿಂದ ಅವಳಿಗೆ ಒಂದು ಗಳಿಗೆ ಏನು ಹೇಳುವುದಕ್ಕೂ ತೋರಲಿಲ್ಲ.

“ಅದಿರಲಿ, ನೀನೇಕೆ ಇಲ್ಲಿ ಬಂದೆ?”

“ಯಾಕೆ ಬಂದೆ? ನಾನೇಕೆ ಬರುತ್ತೇನೆಂಬುದು ನಿನಗೆ ಗೊತ್ತಿಲ್ಲವೇ?”

“ಗೊತ್ತಾಗುತ್ತದೆ–ಗೊತ್ತಾಗುತ್ತದೆ, ತಡಿ,”

“ನೀನು ಹಾಗೆಲ್ಲಾ ಕೋಪದಿಂದ ಮಾತನಾಡಬೇಡ, ಕನಕ. ಹಾಗೆ ಮಾತನಾಡಿದರೆ ನನಗೆಷ್ಟು ದುಃಖವಾಗುತ್ತದೆ ಎಂಬುದನ್ನು ಬಲ್ಲೆಯಾ? ನಿನಗಾಗಿ ಎಷ್ಟು ಕಷ್ಟಪಟ್ಟು ದುಡ್ಡು ತಂದಿಟ್ಟುಕೊಂಡು ನಿನ್ನೆಯಿಂದ ಕಾದಿದ್ದೇನೆ ಎಂಬುದನ್ನು ಬಲ್ಲೆಯಾ?”

ಈಗ ದುಡ್ಡು ತರಲು ಅವನಿಗೆ ಎಷ್ಟು ಕಷ್ಟವೆಂಬುದು ಅವಳಿಗೆ ಗೊತ್ತಿತ್ತು. ಅವರಪ್ಪ ಅಂಗಡಿಯಲ್ಲಿ ಇಲ್ಲದಾಗ ಗಲ್ಲಾದಿಂದ ಹಣ ಹೊಡೆದು ಕೊಂಡು ಬರಬೇಕು. ಅದು ಮುದುಕನಿಗೆ ಗೊತ್ತೇ ಆಗುತ್ತದೆ. ನಾಲ್ಕೈದು ದಿನವಾದರೂ ಇದಕ್ಕಾಗಿ ಬೈಸಿಕೊಳ್ಳಬೇಕು.

ಮೊದಲು ಅಷ್ಟು ಕಷ್ಟವಾಗುತ್ತಿರಲಿಲ್ಲ. ಮುದುಕ ಅವನ ಮೇಲೆಯೇ ಅಂಗಡಿ ಬಿಟ್ಟುಬಿಟ್ಟಿದ್ದ. ಮಗ ಮೈ ಸುಖಕ್ಕಾಗಿ ಅಂಗಡಿ ದುಡ್ಡು ಖರ್ಚು ಮಾಡುತ್ತಿದ್ದಾನೆಂದು ತಿಳಿದಕೂಡಲೇ ಮಗನಿಗೆ ಅಂಗಡಿ ಬಿಡಿಸಿ ತಾನೇ ಗಲ್ಲಾದ ಮೇಲೆ ಬಂದು ಕೂರಲು ಮೊದಲುಮಾಡಿದ್ದ.

"ಕಾದಿದ್ದೇನೆ'' ಎಂದು ಅವನೆಂದ ಮಾತು ಕನಕಳ ಮನಸ್ಸಿನ ಮೇಲೆ ಸ್ವಲ್ಪ ಪರಿಣಾಮವನ್ನು ಉಂಟುಮಾಡಿತು. ಆದರೂ ಶಂಕರ ಅಲ್ಲಿಲ್ಲದೇ ಇದ್ದುದು ಅವಳಿಗೆ ವಿಸ್ಮಯಕರವಾಗಿತ್ತು. ಇವನು ಬಂದುದರಿಂದ ಅವನು ಹೊರಟುಹೋದನೇನೋ ಎಂದು ಕೋಪ ಬಂದಿತ್ತು.

"ನೀನು ಇಲ್ಲಿಗೆ ಬಂದಾಗ ಯಾರಾದರೂ ಇದ್ದರೇನು?"

"ಇರಲಿಲ್ಲ, ಚಿನ್ನ. ಬಾಗಿಲು ಸೇರಿಸಿತ್ತು. ಯಾರಾದರೂ ಇದ್ದಾ ರೇನೋ ಎಂದು ನೋಡಿ, ಇಲ್ಲದಿರುವುದನ್ನು ಗೊತ್ತುಮಾಡಿಕೊಂಡು ಒಳಗೆ ಬಂದೆ. ಒಂದು ಒಂದೂವರೆ ಗಂಟೆಯಿಂದ ಕಾಯುತ್ತಿದ್ದೇನೆ. ಯಾರೂ ಬಂದು ಸಹ ಇಲ್ಲ."

"ನಿಜ ಹೇಳುತ್ತಿದ್ದೀಯಾ?"

"ಶಿವನಾಣೆ, ಕನಕ."

"ಇಲ್ಲ. ನೀನು ಸುಳ್ಳು ಹೇಳುತ್ತಿದ್ದೀಯೆ?"

"ನಾನು ಹೇಳುವುದು ಸುಳ್ಳೆನ್ನುವುದಾದರೆ ಶಾರದೆಯನ್ನೇ ಕರೆದು ಕೇಳು."

ಅದೇ ಮನೆಯಲ್ಲಿದ್ದ ಹುಡುಗಿಯನ್ನು ಕನಕ ಕೂಗಿಕೊಂಡಳು.

"ಶಾರದಾ——ಶಾರದಾ."

ಶಾರದೆ "ಏನು?''ಎಂದುಕೊಂಡು ಬಂದಳು.

"ಇವನು ಬಂದ ಮೇಲೆ ಅಲ್ಲವೇ ಆತ ಹೊರಟುಹೋದದ್ದು?"

"ಇಲ್ಲ, ಆತ ಮೊದಲೇ ಹೊರಟುಹೋದ ನೀನು ಹೋಗುತ್ತಿದ್ದ

ಹಾಗೆಯೇ ಮತ್ತಾರೋ ಹುಡುಕಿಕೊಂಡು ಬಂದರು. ಅವರೊಡನೆ ಮಾತ ನಾಡುತ್ತಾ ಹೋದ. ಹೋಗುವಾಗ ನನ್ನನ್ನು ಕರೆದು ಪುನಃ ಬರುವುದಾಗಿ ನಿನಗೆ ಹೇಳಬೇಕೆಂದು ಹೇಳಿ ಹೋದ. ಆತ ಹೋದ ಐದುಹತ್ತು ನಿಮಿಷಗಳ ಮೇಲೆ ಈತ ಬಂದ."

ಇನ್ನೊಬ್ಬ ಬಂದಿದ್ದ ಎಂಬಂಶವನ್ನು ಶಾರದೇ ಹೇಳದೆ ಇದ್ದಿದ್ದರೆ ಕನ ಕಾಂಗಿ ಕೂಡಲೇ ನಂಬುತ್ತಿರಲಿಲ್ಲ. ಆ ಇನ್ನೊಬ್ಬ ಯಾರಾಗಿರಬಹುದೆಂಬು ದನ್ನು ಊಹೆ ಮಾಡಿದಳು. ಹಿಂದಿನ ರಾತ್ರಿ ತನ್ನನ್ನೂ ಬೇಬಿಯನ್ನೂ ಹೋಟಲಿಗೆ ಕರೆಸಿದಾತ ಬೆಳಗಾಗ ಗೆಳೆಯ ಕೋಣೆಯಲ್ಲಿಲ್ಲದಿರುವುದನ್ನು ಗಮನಿಸಿ ಹುಡುಕಿಕೊಂಡು ಬಂದಿದ್ದಾನೆ. ಕೃಷ್ಣ ಮನೆಯನ್ನು ತೋರಿಸಿರ ಬಹುದು.

ಇನ್ನು ಅವನು ಕೈತಪ್ಪಿ ಹೋದ ಎಂದುಕೊಂಡಳು, ಕನಕ. ಆ ಮ ತ್ತೊಬ್ಬ ಘಾತುಕ ಬಂದು ಇಲ್ಲಸಲ್ಲದ ಮಾತುಗಳನ್ನು ಕಿವಿಗಳಲ್ಲಿ ಊದಿದ ಮೇಲೆ ಪುನಃ ಇಲ್ಲಿ ಬರುತ್ತಾನೆಯೆ ? ಬರುವುದಕ್ಕೆ ಅವನಿಗೆ ಬುದ್ಧಿ ಇಲ್ಲವೇ?

'ಕಾದಿದ್ದೇನೆ' ಎಂದು ಹೇಳಿದ ಶಿವಣ್ಣ ಆಗ ಅವಳ ಕಣ್ಣಿಗೆ ಕಾಣಿಸಿದ.

"ನಿನ್ನೆ ಇಲ್ಲಿಂದ ಹೊರಟ ನೀನು ಹಣವನ್ನೆಲ್ಲಾ ಉಡಾಯಿಸಿ ಬಿಟ್ಟಿ ಯೋ ಇಲ್ಲವೋ ?

"ಇಲ್ಲ. ಕನಕ. ಹಾಗೆಯೇ ಇಟ್ಟುಕೊಂಡಿದ್ದೇನೆ."

ಶಿವಣ್ಣ ಜೇಬಿನಿಂದ ಹೊರತೆಗೆದು ತೋರಿಸಿದ. ತೋರಿಸುವಾಗ ಗೋಲ್ಡ್‌ಫ್ಲೇಕ್ ಸಿಗರೇಟು ಪ್ಯಾಕೂ ಹೊರಗೆ ಬಂದಿತು.

"ಒಂದು ಕಾಸೂ ಖರ್ಚು ಮಾಡಲಿಲ್ಲ. ನೀನು ಬೇರೇ ಸಿಗರೇಟು ಸೇದುವುದಿಲ್ಲವಲ್ಲ ಎಂದು ಇಲ್ಲಿಗೆ ಬರುತ್ತಾ ಒಂದು ಸಿಗರೇಟು ಪ್ಯಾಕ್ ತೆಗೆ ದುಕೊಂಡೆ. ಬೆಳಗ್ಗೆ ಚಹಾ ಕುಡಿದೆ. ಇನ್ನೇನೂ ಖರ್ಚು ಮಾಡಲಿಲ್ಲ, ಎಲ್ಲಿ ಸಿಗರೇಟು ತೆಗೆದುಕೋ."

"ಸಾಕ್ಷಿ ಹೇಳಿ ಸರಿಮಾಡಿದವಳಿಗೆ ಸಿಗರೇಟು ಕೊಡಬೇಡವೇ ?"

ಎನ್ನುತ್ತಾ ಶಾರದೆ ಮುಂದೆ ಬಂದು ಸಿಗರೇಟು ತೆಗೆದು ಹಚ್ಚಿ ಕೊಂಡು, ಅಲ್ಲಿಯೇ ಇದ್ದ ಈಸೀ ಚೇರೊಂದರ ಮೇಲೆ ಒರಗಿಕೊಂಡು, ಕಾದಂಬರಿಗಳಲ್ಲಿ ಬರೆಯುವಂತೆ ಧೂಮಪಾನಾಸಕ್ತಳಾದಳು.

ಕನಕಳೂ ಸಿಗರೇಟು ತೆಗೆದುಕೊಂಡಳು. ಹಚ್ಚಿಕೊಳ್ಳುತ್ತಿರುವಾಗ ಅವಳ ಮನಸ್ಸಿಗೊಂದು ಆಲೋಚನೆ ಬಂದಿತು. ತಾನು ಬೈದು ಕಳಿಸಿದರೂ ಪುನಃ ಬಂದಿದ್ದಾನೆ. ಇಂತಹವನನ್ನು ತಿರಸ್ಕರಿಸಬಾರದು ಎಂದುಕೊಂಡಳು.

ಅಷ್ಟು ಹೊತ್ತಿಗೆ ಶಿವಣ್ಣ ಹೋಗಿ ಮಂಚದ ಮೇಲೆ ಕುಳಿತುಕೊಂಡು ಮನೆಯ ಯಜಮಾನನಂತೆ ಸಿಗರೇಟು ಸೇದತೊಡಗಿದ. ಕನಕ ಕುರ್ಚಿಯ ಮೇಲೆ ಕುಳಿತು ಅವನೊಂದಿಗೆ ಮಾತನಾಡುತ್ತಾ ಇದ್ದಳು.

ಮಾತು–ಸಾನ್ನಿಧ್ಯಗಳಿಂದಲೇ ತೃಪ್ತನಾಗದ ಶಿವಣ್ಣ ಅಂದ.

"ಎಲ್ಲಾ ಸರಿ. ಬರೀಬಾಯಿ ಮಾತಿನಲ್ಲಿಯೇ ಉಳಿಯುತಲ್ಲಾ ಎಂದು ಯೋಚಿಸುತ್ತಿದ್ದೇನೆ. ಈ ದಿನ ಇನ್ನೆಲ್ಲಿಯಾದರೂ ಹೋಗುತ್ತಾನೆ. ಅಷ್ಟರ ಮೇಲೆ ಬರುವವನಾದರೆ ಸಾಯಂಕಾಲ ಬರುತ್ತಾನೆ. ರಾತ್ರಿ ಇಲ್ಲೇ ಬಿದ್ದಿದ್ದು ಈಗ ತಾನೇ ಹೋದವನು ಈಗಲೇ ಬಂದುಬಿಡುತ್ತಾನೆಯೇ ? ನಿನಗೊಂದು ಹುಚ್ಚು. ಇಷ್ಟು ದಿನಗಳಾದರೂ ಅನುಭವ ಬಂದಿಲ್ಲ."

"ಹಾಗಲ್ಲ, ಶಿವು. ಅವನು ಇತರರ ಹಾಗಲ್ಲ. ಬಂದರೂ ಬಂದುಬಿಡಬಹುದು."

"ಹಾಗಿದ್ದರೇ ನಾವು ಎಷ್ಟು ಬೇಗ ಮುಗಿಸಿಬಿಟ್ಟರೆ ಅಷ್ಟು ಒಳ್ಳೆಯದಲ್ಲವೇ?"

ಕನಕಳಿಗೂ ಆ ಮಾತು ಸರಿಯೆಂದೇ ಒಪ್ಪಿತು.

ಎಲ್ಲಿ, ದುಡ್ಡು ತೆಗೆ."

ಶಿವು ಜೇಬಿನಿಂದ ಐದು ರೂಪಾಯಿ ನೋಟು ತೆಗೆದ.

"ಐದು ರೂಪಾಯಿ. ಅದೆಲ್ಲಾ ಆಗುವುದಿಲ್ಲ. ನೀನೇ ಇಟ್ಟುಕೋ"

"ಏನು? ಮಾಮೂಲೇ ಅಷ್ಟಲ್ಲವೇ? ಹಳೆಯ ಗಿರಾಕಿಗಳಿಗೂ ಹೀಗೆಲ್ಲಾ ಮಾಡಿದರೆ?"

"ಅಷ್ಟಕ್ಕೆ ಆಗುವುದಿಲ್ಲ. ಆ ಹಳೇ ಕತೆಯನ್ನೆಲ್ಲಾ ಮಾತನಾಡಬೇಡ."

"ಹಾಗಾದರೆ ಏನು ಮಾಡಬೇಕು, ಎನ್ನುತ್ತೀ?"

"ಇಪ್ಪತ್ತು ರೂಪಾಯಿ ಕೊಡಬೇಕು."

"ಅಬ್ಬಾ! ಒಳ್ಳೇ ರೇಟು. ಈ ಊರಿನಲ್ಲಿ ಸಂಸಾರಿಗಳೂ ಅಷ್ಟು ಕೇಳು ವುದಿಲ್ಲ."

"ನೋಡು, ಶಿವು. ಹೆಚ್ಚು ಮಾತನಾಡಬೇಡ. ನಾನೀಗ ಈ ವೃತ್ತಿ ಬಿಟ್ಟುಬಿಟ್ಟಿದ್ದೇನೆ. ಇನ್ನಾರಾದರೂ ಆಗಿದ್ದರೆ ಮನೆಗೇ ಸೇರಿಸುತ್ತಿರಲಿಲ್ಲ. ನೀನಾದುದರಿಂದ "ಹೂಂ" ಎಂದೆ. ಇಷ್ಟವಿದ್ದರೆ ನಾನು ಕೇಳಿದಷ್ಟು ಕೊಡು. ಇಲ್ಲವಾದರೆ ನೀನು ಕೊಡುವಷ್ಟು ತೆಗೆದುಕೊಳ್ಳುವವರ ಬಳಿಗೆ ಹೋಗು."

ಶಿವಣ್ಣ ಎಷ್ಟೋ ಕೇಳಿಕೊಂಡ ಮೇಲೆ ಕನಕ ಹದಿನೈದಕ್ಕೆ ಒಪ್ಪಿ ಕೊಂಡಳು. ಮಾತಿನ ಭರದಲ್ಲಿ ಮೊದಲು ಹತ್ತು ಕೊಡುವುದೆಂದೂ, ಸುಖ ಕೊಡುವುದರಲ್ಲಿ ಮೋಸವಾಗಿಲ್ಲವೆಂದು ಶಿವಣ್ಣನಿಗೆ ಮನವರಿಕೆಯಾದರೆ ಇನ್ನೈದು ಕೊಡುವುದೆಂದೂ ಶಿವಣ್ಣ ಅವಳನ್ನು ಒಪ್ಪಿಸಿದ.

"ಸರಿ. ಬೇಗನೇ ಮುಗಿಸಿ ಬಿಡೋಣ."

"ಅವಳನ್ನು ಹೊರಗೆ ಕಳಿಸಿಬಿಡು, ಕನಕ."

ಅವಳ ಕಡೆಗೆ ನೋಡಿದಳು. ಈಸೀ ಚೇರಿನ ಮೇಲೆ ಮಲಗಿದ್ದ ಅವಳ ಕಣ್ಣು ಮುಚ್ಚಿತ್ತು. ಬಾಯಿ ಸ್ವಲ್ಪವಾಗಿ ತೆರೆದಿತ್ತು ಗೊರಕೆ ಕೇಳಿ ಬರುತ್ತಿತ್ತು. ಕನಕ ಅತ್ತಲಿಂದ ಕಣ್ಣು ತಿರುಗಿಸಿದಳು.

ಎಬ್ಬಿಸಲು ಕನಕಳಿಗೆ ಇಷ್ಟವಿಲ್ಲವೆಂದುಕೊಂಡು ಶಿವಣ್ಣ ಸೂಚಿಸಿದ.

"ನಾನೇ ಅವಳನ್ನು ಎಬ್ಬಿಸಿ ಹೊರಗೆ ಕಳಿಸುತ್ತೇನೆ."

"ಬೇಡ, ಬೇಡ. ಪಾಪ, ದಣಿದು ಮಲಗಿದ್ದಾಳೆ. ಅವಳನ್ನೇಕೆ ಎಬ್ಬಿಸಬೇಕು ?"

"ಹಾಗಾದರೆ ಅವಳು ಇಲ್ಲಿರುವಂತೆಯೇ— — —"

"ಅದಕ್ಕೇನು?"

"ಅಲ್ಲ. ಮಧ್ಯದಲ್ಲಿ ಅವಳಿಗೆ ಎಚ್ಚರವಾಗಿ ಹೋದರೆ–"

"ಎದ್ದರೇನಂತೆ? ಇನ್ನೊಬ್ಬ ಹೆಂಗಸು ನೋಡುತ್ತಿದ್ದರೆ ನಿನಗೆ ಮತ್ತಷ್ಟು ಖುಷಿಯಾಗಬೇಕಲ್ಲವೇ?"

"ನಿನಗೆ ನಾಚಿಕೆಯಾಗುವುದಿಲ್ಲವೇ ?"

"ಆಗುವುದಿಲ್ಲ. ಎಷ್ಟೋ ಬಾರಿ ಹಾಗೆ ನನ್ನನ್ನು ಅವಳು ನೋಡಿದ್ದಾಳೆ."

"ಕುರ್ಚಿಯ ಮೇಲೆ ಕುಳಿತಿದ್ದೀಯಲ್ಲಾ. ಹತ್ತಿರ ಬಂದು ಕುಳಿತುಕೊಳ್ಳಬಾರದೇ?"

ಬಂದು ಪಕ್ಕದಲ್ಲಿ ಕುಳಿತುಕೊಂಡು ಹೇಳಿದಳು.

"ಅದೆಲ್ಲಾ ಆಗುತ್ತದೆ. ಮೊದಲು ದುಡ್ಡು ತೆಗಿ."

ಶಿವಣ್ಣ ಹತ್ತು ರೂಪಾಯಿ ತೆಗೆದು ಕೊಟ್ಟ.

"ಉಳಿದುದೂ ಕೊಟ್ಟುಬಿಡು."

"ಯಾಕೆ, ಅವಸರ ಪಡುತ್ತೀ? ಮಾತನಾಡಿದಂತೆ ನಡೆದುಕೊಳ್ಳೋಣ. ನಾನೇನು ನಿನಗೆ ಮೋಸ ಮಾಡುತ್ತೇನೆಯೇ, ಮೋಸ ಮಾಡುವುದಕ್ಕೇ ತಾನೇ ನೀನು ಬಿಡುತ್ತೀಯಾ?"

ಹಾಸಿಗೆಯ ಮೇಲೆ ಕುಳಿತಿದ್ದವರು ಮಲಗಿಕೊಂಡರು.

ಹದಿನೈದು ನಿಮಿಷಗಳನಂತರ ಶಿವಣ್ಣ ಇನ್ನೂ ಹಾಸಿಗೆಯ ಮೇಲೆ ಮಲಗಿದ್ದ ಹಾಗೆಯೇ ಕನಕ ಮೇಲೆದ್ದು ರವಿಕೆ ಕಟ್ಟಿಕೊಂಡು, ಸೀರೆಸೆರಗುಗಳನ್ನು ಸರಿಮಾಡಿಕೊಂಡಳು. ಕ್ರಾಪು ಬಾಚಣಿಗೆಯಿಂದ ಕೆದರಿದ ತಲೆಗೂದಲನ್ನು ಬಾಚಿಕೊಂಡು, ಮುಡಿದಿದ್ದ ಹೂ ತೆಗೆದು ಪುನಃ ಸರಿಯಾಗಿ ಮುಡಿದುಕೊಂಡಳು. ಮುಖ, ಕೊರಳುಗಳಿಗೆ ಪೌಡರ್ ಹಾಕಿಕೊಂಡಳು.

ಪಫ್‌ನಿಂದ ಮುಖಕ್ಕೆ ಪೌಡರ್ ಹಾಕಿಕೊಳ್ಳುತ್ತಿದ್ದಾಗ ಕನಕ ಕನ್ನಡಿಯ ಮುಂದೆ ನಿಂತಿದ್ದಳು. ಕನ್ನಡಿಯಲ್ಲಿ ಕಂಡ ಮತ್ತೊಂದು ಮುಖ, ಶಿವಣ್ಣನ ಮುಖದ ಪ್ರತಿಬಿಂಬವನ್ನು ಕುರಿತು ಹೇಳಿದಳು.

"ಶಾರೂ ಇನ್ನೂ ನಿದ್ದೆ ಮಾಡುತ್ತಲೇ ಇದ್ದಾಳೇನು?"

ಅತ್ತ ಕಡೆ ನೋಡಿ ಶಿವಣ್ಣ ಉತ್ತರ ಕೊಟ್ಟ.

"ಹಾಗೆಯೇ ಕಾಣುತ್ತದೆ"

"ಹಾಗಾದರೆ ಮಧ್ಯ ಅವಳಿಗೆ ಎಚ್ಚರವಾಗಲಿಲ್ಲ?"

"ಇಲ್ಲವೆಂದು ಕಾಣುತ್ತದೆ. ಎಚ್ಚರವಾಗಿದ್ದೂ ನಿದ್ದೆಯಂತೆ ನಟಿಸಿದಳೋ ಎಂಬುದನ್ನು ನೀನು ಹೇಳಬೇಕು."

"ಚೆನ್ನಾಯಿತು. ನಾನು ಹೇಗೆ ಹೇಳಲಿ. ಸದಾ ಅತ್ತಕಡೆಯೇ ನೋಡು ತ್ತಿದ್ದ ನೀನು ಹೇಳಬೇಕು."

ಆ ಮಾತಿಗೆ ಅವನು ನಕ್ಕ.

ಉಳಿದೈದು ರೂಪಾಯಿ ಇನ್ನೂ ಕನಕಳಿಗೆ ಬಂದಿರಲಿಲ್ಲ. ಅವನನ್ನು ಮತ್ತಷ್ಟು ಖುಷೀ ಮಾಡಲು ಕೇಳಿದಳು.

"ಅದೇನು, ಆಗಾಗ ಅವಳ ಕಡೆಗೆ ನೋಡುತ್ತಿದ್ದೆಯಲ್ಲಾ."

"ಅವಳೂ ನೋಡುತ್ತಿದ್ದರೆ ಇನ್ನಷ್ಟು ಮಜವಾಗಿರುತ್ತದೆ-ಎಂದೆ ಯಲ್ಲ. ಅದರಿಂದ ನೋಡುತ್ತಿದ್ದೆ."

"ಕಾಸಿಗೆ ತಕ್ಕ ಕಜ್ಜಾಯ. ಸಾಕಷ್ಟು ಕಾಸು ಬಿಚ್ಚದೇ ಬಿಟ್ಟೇ ಮಜ ಯಾಕೆ ಸಿಕ್ಕಬೇಕೆಂದು ಶಾರೂ ನಿದ್ದೆ ಮಾಡುತ್ತಲೇ ಇದ್ದಳೋ ಏನೋ?"

"ಅವಳಿಗೆ ನಡುವೆ ಎಚ್ಚರವಾಗಿದ್ದಿದ್ದರೆ ನಿನಗೂ ಅವಳಿಗೂ ಇನ್ನಷ್ಟು ಕೊಡುತ್ತಿದ್ದೆ."

ಕನಕ ಪೌಡರ್ ಹಾಕಿಕೊಂಡು ಮುಗಿದಿತ್ತು. ಕನ್ನಡಿಯಿಂದ ಇತ್ತ ಕಡೆಗೆ ತಿರುಗಿದಳು. ತಿರುಗುತ್ತಾ ಇರುವಾಗ ಅವಳ ತುಟಿಗಳ ಮೇಲೆ ನಗೆಯು ಸುಳಿದಾಡುತ್ತಿತ್ತು.

ಮುಂದೆ ಹೋಗಿ ಶಿವಣ್ಣ ದೀರ್ಘವಾಗಿ ಅವಳ ತುಟಿಗಳನ್ನು ಚುಂಬಿಸಿ ದ. ಕನಕ ಪ್ರತಿರೋಧ ಮಾಡದೇ ಸುಮ್ಮನಿದ್ದಳು.

"ನೀನು ಹೇಳಿದ ಆ ಮಜಾ ಹೇಗಿರುತ್ತದೆಯೋ ಇನ್ನೊಂದು ದಿನ ನೋಡಬೇಕು."

"ಆಗಲಿ, ನೋಡೋಣ. ಎಲ್ಲಿ ಉಳಿದ ದುಡ್ಡು ಕೊಡು."

"ಓ! ತೆಗೆದುಕೋ. ಆಡಿದ ಮಾತಿಗೆ ನಾನೆಂದೂ ಹಿಂದೇಟು ಹೊಡೆ ಯುವುದಿಲ್ಲ."

ಶಿವಣ್ಣ ಜೇಬಿನಿಂದ ಇನ್ನೈದು ರೂಪಾಯಿ ತೆಗೆದು ಕೊಟ್ಟ.

ಹೊರಡುವುದರಲ್ಲಿದ್ದವನು ಅಂಗಲಾಚಿ ಕೇಳಿದ.

"ಇನ್ನೊಂದು ಬಾರಿ— —ಕನಕ."

"ಹೂಂ"

ಕನಕ ಮೊದಲಿನಂತೆಯೇ ನಿಂತಿದ್ದಳು. ಆಗತಾನೇ ಅವನು ಕೊಟ್ಟಿದ್ದ

ಐದು ರೂಪಾಯಿ ಅವಳ ಕೈಯಲ್ಲಿತ್ತು. ಶಿವಣ್ಣ ಮುಂದೆ ಬಂದು ಆಲಂಗಿಸಿ, ಚುಂಬಿಸಿದ. ಬಿಟ್ಟು ಹೋಗಲಾರದೇ ಅವಳ ಭುಜದ ಮೇಲೆ ಎರಡು ಕೈಗಗಳನ್ನು ಕ್ಷಣಕಾಲ ಇಟ್ಟುಕೊಂಡು ಮುಖ ನೋಡಿದ.

ಮಾತುಕತೆಗಳಲ್ಲಿ ಯಾರೂ ಬಾಗಿಲಿನ ಚಿಲಕ ಹಾಕಿರಲಿಲ್ಲ. ಸೇರಿಸಿದ್ದ ಬಾಗಿಲು ಸರಿಯಿತು. ಯಾರೋ ಒಳಗೆ ಬಂದರು. ಕನಕ ನೋಡಿದಳು. ಬಂದವನು ಶಂಕರ.

"ಓಹೋ! ಬಂದಿರಾ? ನಿಮ್ಮನ್ನೇ ಕಾಯುತ್ತಿದ್ದೆ."

ಎನ್ನುತ್ತಾ ಕನಕ ಹಿಂದೆ ಸರಿದಳು. ಅವಳ ಭುಜದ ಮೇಲಿದ್ದ ಶಿವಣ್ಣನ ಕೈಗಳು ಕೆಳಗೆ ಬಿದ್ದುಹೋದವು. ಜಿಕ್ಕಿನ ಮರಿಯಂತೆ ಅವನು ಹೇಗೋ ಹೊರಗೆ ಹೋಗಿಬಿಟ್ಟ.

ಇವಿಷ್ಟೂ ಕ್ಷಣಕಾದಲ್ಲಿ ನಡೆದುಹೋದುವು.

ಈ ಗಲಾಟೆಯಲ್ಲಿ ಶಾರದೆಗೂ ಎಚ್ಚರವಾಗಿರಬೇಕು. ಅವಳು ಕಣ್ಣು ಬಿಟ್ಟು ನೋಡಿದಳು. ಶಂಕರ ಬಂದು ನಿಂತಿದ್ದಾನೆ. ಶಂಕರನನ್ನು ನೋಡಿದೊಡನೆಯೇ ಎದ್ದು ನಿಂತಳು. ಶಿಕ್ಷೆ ಮಾಡುವವನಂತೆ ನಿಂತಿದ್ದಾನೆ. ಕನಕ ಧೈರ್ಯದಿಂದ ಏನು ಬಂದರೂ ಎದುರಿಸುವವಳಂತೆ ನಿಂತಿದ್ದಾಳೆ.

ಆ ಸಮಯದಲ್ಲಿ ತಾನು ಅಲ್ಲಿರುವುದು ಸರಿಯಲ್ಲವೆಂದು ತಿಳಿದುಕೊಂಡ ಸೂಕ್ಷ್ಮಮತಿಯಾದ ಅವಳು ಮೆಲ್ಲನೆ ಅಲ್ಲಿಂದ ನಿರ್ಗಮಿಸಿದಳು.

ಶಂಕರ ಅಲ್ಲಿ ಹಾಗೆಯೇ ನಿಂತಿದ್ದ. ಅವನ ಶರೀರವು ಕೋಪದಿಂದ ಕಂಪಿಸುತ್ತಿತ್ತು. ಕಣ್ಣುಗಳು ಕೆಂಡಗಳಂತೆ ಜ್ವಲಿಸುತ್ತಿದ್ದವು. ಇವನು ಮಾತನಾಡಲಿಲ್ಲ. ಅವಳನ್ನು ಬೈಯಲಿಲ್ಲ. ಆದರೆ ನೈಮುರಿಯ ಹಿಡಿದು ಹೊಡೆಯಬೇಕೆಂದು ಅವನ ಮನಸ್ಸು ತವಕಪಡುತ್ತಿತ್ತು.

"ನೀವು ಬರುವುದು ಇಷ್ಟು ಹೊತ್ತಾಯಿತೆಂದು ನಾನು ಎಣಿಸಿರಲಿಲ್ಲ. ನೀವು ಬರಲಿಲ್ಲವಲ್ಲಾ ಎಂದು ತವಕ ಪಡುತ್ತಿದ್ದೆ"

ಹೇಗೆ ಮಾತು ಮೊದಲು ಮಾಡಬೇಕೆಂಬುದು ಗೊತ್ತಾಗದೇ ಶಂಕರ ಆರಂಭಿಸಿದ.

"ನೀನು ಪೇಟೆಗೆ ಹೋದ ಮೇಲೆ ನಾನು ಇಲ್ಲಿಯೇ ಇದ್ದೆ. ಅಷ್ಟರಲ್ಲಿ ವಾಸುದೇವ ಹುಡುಕಿಕೊಂಡು ಬಂದ. ಹೊರಗೆ ಕರೆದುಕೊಂಡು ಹೋದ.

ನಡೆದುದನ್ನೆಲ್ಲಾ ಕೇಳಿದ. ಹೇಳಿದೆ. ನಿನ್ನನ್ನು ಮರೆತುಬಿಡಬೇಕೆಂದು ಉಪದೇಶ ಮಾಡಿದ. ನಾನು ಹಾಗಾಗುವುದಿಲ್ಲವೆಂದು ಅವನನ್ನು ಬಿಟ್ಟು ನಿನ್ನ ಬಳಿಗೆ ವಾಪ್ಸು ಬಂದೆ”

“ಒಳ್ಳೆಯದೇ ಆಯಿತು ?”

“ಆಗಲಿಲ್ಲ’’

“ಯಾಕೆ ?”

“ನಾನು ಕೊಟ್ಟ ಮಾತು ಉಳಿಸಿಕೊಂಡೆ. ನೀನು ಉಳಿಸಿಕೊಳ್ಳಲಿಲ್ಲ”

ಅವಳಿಗೆ ಅರ್ಥವಾಯಿತು. ಆದರೂ ಕೇಳಿದಳು.

“ಹಾಗೆಂದರೆ ?”

“ಹಾಗೆಂದರೆ———ನೀನು ಅವನ————”

“ಶಿವ ಶಿವಾ. ಎಲ್ಲಿಯಾದರೂ ಉಂಟೆ ? ನೀವು ತಪ್ಪು ತಿಳಿದು ಕೊಂಡಿರಿ ?”

“ನಾನು ಬಂದಾಗ ನಿನ್ನನ್ನು ಚುಂಬಿಸುತ್ತಿರಲಿಲ್ಲವೇ ? ಅವನ ಕೈಗಳು ನಿನ್ನ ಭುಜದ ಮೇಲಿದ್ದುದನ್ನು ನಾನೇ ಕಣ್ಣಾರೆ———?”

“ಅಯ್ಯೋ ! ನೀವು ಏನೋ ತಿಳಿದುಕೊಂಡಿರಿ. ಶಾರೂ ಇಲ್ಲಿಯೇ ಇದ್ದಳು. ಅವಳಿದ್ದೂ ಹಾಗೆ———’’

‘‘ಇದ್ದರೆ ಏನು ?”

“ನಾವೇನು ಮನುಷ್ಯರೆಂದುಕೊಂಡಿದ್ದೀರೋ ಹೇಗೆ ? ನನ್ನ ಮಾತು ನಂಬದಿದ್ದರೆ ಶಾರಿಯನ್ನೇ ಕೇಳಿ’’

‘‘ಯಾರನ್ನೇಕೆ, ಕೇಳಲಿ——— ?”

“ನಾನು ಹೇಳುವುದನ್ನು ಕೇಳಿರಿ. ನಾನು ಹೊರಡುವುದರಲ್ಲಿದ್ದಾಗ ಅವನು ಬಂದ. ಸ್ವಲ್ಪ ಸಾಮಾನು ತರಬೇಕೆಂದು ಹೇಳಿ ದುಡ್ಡು ಕೊಟ್ಟೆ. ಅವನೊಂದು ಕಡೆ, ನಾನೊಂದು ಕಡೆ ಹೋದೆವು. ನಾನು ಬಂದ ಮೇಲೆ ಅವನು ಬಂದ. ಸಾಮಾನು ಕೆಳಗಿಟ್ಟು ಉಳಿದ ಹಣ ನನ್ನ ಕೈಲಿ ಕೊಟ್ಟ. ಅದಿನ್ನೂ ಕೈಯಲ್ಲೇ ಇದೆ, ನೋಡಿರಿ. ಮೊದಲು ನನಗೂ ಅವನಿಗೂ ಸಂಬಂಧವಿತ್ತು. ಆ ಸಂಬಂಧದ ಮೇಲೆ ಮೈ ಮೇಲೆ ಕೈ ಹಾಕಿದ. ನಾನು ಮೈ ಕೊಡವಿ ಹಿಂದೆ ಸರಿಯುತ್ತಿದ್ದ ಹಾಗೆಯೇ ನೀವು ಬಂದಿರಿ. ನೀವು

ನಂಬಿದರೆ ನಂಬಿ, ಬಿಟ್ಟರೆ ಬಿಡಿ, ನಾನಂತೂ ಶಿವನಾಣೆಗೂ ಹೇಳುತ್ತೇನೆ. ನಿನ್ನೆಯ ದಿನ ರಾತ್ರಿಯವರೆವಿಗೆ ಏನೇನಾಯಿತೋ ಆಯಿತು. ನಿಮ್ಮನ್ನು ನೋಡಿದ ಮೇಲೆ, ನಿಮಗೆ ಮಾತು ಕೊಟ್ಟ ಮೇಲೆ ನಿಮ್ಮ ವಿನಾ ಮತ್ತೊಬ್ಬ ಗಂಡಸನ್ನು ಮನಸ್ಸಿನಲ್ಲಿ ಸಹ ಆಲೋಚನೆ ಮಾಡಿಲ್ಲ"

ಅವಳು ಹೇಳಿದುದನ್ನೆಲ್ಲಾ ಶಂಕರ ನಂಬಿದನೆಂದು ಹೇಳಲಾಗುವುದಿಲ್ಲ. ಅವನು ಮನಸ್ಸಿನಲ್ಲಿ ಹೊಸದೊಂದು ಆಲೋಚನೆಯು ಬರುತ್ತಿತ್ತು. ಅದರೊಡನೆಯೇ ಮನಸ್ಸು ಸಮಾಧಾನವಾಗುತ್ತಿತು.

ಹೋಗಿ ಹಾಸಿಗೆಯ ಮೇಲೆ ಕುಳಿತು ಕೊಂಡ.

ಅವಳು ಹೋಗಿ ಪಕ್ಕದಲ್ಲಿ ಕುಳಿತುಕೊಂಡು ಕೇಳಿದಳು.

"ನೀವು ನನ್ನ ಮಾತು ನಂಬುವುದಿಲ್ಲವೇ ?"

"ಈಗ ನಂಬುವುದು, ಬಿಡುವುದು ಮಾತೇ ಇಲ್ಲ, ಕನಕ. ಹೊಸದೊಂದು ಆಲೋಚನೆ ಮಾಡಿದ್ದೇನೆ."

ಆ ಮಾತಿನಲ್ಲಿ ಪೂರ್ಣವಾಗಿ ಕ್ಷಮಿದಂತಹ ಅರ್ಥವಿತ್ತು.

"ಏನು ಹೇಳಿ ?"

"ನೋಡು ಕನಕ. ಈಗಲೇ ಈ ಕ್ಷಣವೇ ಈ ಮನೆಯನ್ನು ಬಿಟ್ಟು ಹೋಟಲಿಗೆ ಹೊರಟು ಹೋಗೋಣ. ಸಾಧ್ಯವಾದಷ್ಟು ಬೇಗ ಬೇರೆ ಮನೆ ಮಾಡುತ್ತೇನೆ. ಅಲ್ಲಿಗೆ ಹೋಗೋಣ."

"ಆಗಬಹುದು. ಆದರೆ — —"

"ಏನು ಆದರೆ — — —"

"ಅಂತಹದೇನೂ ಇಲ್ಲ. ನೀವೇಕೆ ಇಷ್ಟು ಅವಸರ ಪಡುತ್ತಿರೋ ನನಗೆ ಅರ್ಥವಾಗುವುದಿಲ್ಲ. ನಿಮ್ಮೊಡನೆ ಬರುವುದಕ್ಕೆ, ನೀವು ಹೇಳಿದಂತೆ ಕೇಳಿಕೊಂಡಿರುವುದಕ್ಕೆ ನಾನು ನಿನ್ನೆಯ ದಿನವೇ ಒಪ್ಪಿಕೊಂಡಿದ್ದೇನೆ. ಆದರೆ ನೀವು ನನ್ನನ್ನು ಕರೆದುಕೊಂಡು ಹೋಗುವ ಮೊದಲು ನಾವಿಬ್ಬರೂ ಗಮನಿಸಬೇಕಾದಂತಹ ಎಷ್ಟೋ ವಿಷಯಗಳಿವೆ."

"ಏನದು — —?"

"ನೋಡಿ, ನನ್ನ ಹಣಕಾಸಿನ ಸ್ಥಿತಿಗಳನ್ನು ನೋಡಿಕೊಳ್ಳಬೇಕು. ನಿಮ್ಮ ಪಣಕಾಸಿನ ಸ್ಥಿತಿಗಳನ್ನು ನೋಡಿಕೊಳ್ಳಬೇಕು. ಎಂದೆಂದಿಗೂ ನಾವು

ನಾವಿಬ್ಬರೂ ಸುಖವಾಗಿರುವುದಕ್ಕೆ ಬೇಕಾದ ಆಲೋಚನೆಗಳನ್ನು ಮಾಡಿಕೊಳ್ಳಬೇಕು."

ಶಂಕರ ಕೋಪದಿಂದ ಹೇಳಿದ.

"ಕನಕ. ನೀನು ಹಾಳು ದುಡ್ಡಿನ ವಿಷಯ ಬಿಟ್ಟು ಬೇರೇ ದೃಷ್ಟಿಯಿಂದ ನೋಡುವುದೇ ಇಲ್ಲವಲ್ಲ."

ದುಡ್ಡಿನ ದೃಷ್ಟಿಯು ಅವಳಿಗೆ ಮುಖ್ಯವಾಗಿತ್ತು. ಶಂಕರನ ಹಿಂದೆ ಬೀಳುವ ಮೊದಲು ಅವನ ಬಳಿ ಎಷ್ಟು ಹಣವಿದೆ ಎಂಬುದನ್ನು ತಿಳಿದುಕೊಳ್ಳಬೇಕಾಗಿತ್ತು.

"ಹಣದ ದೃಷ್ಟಿಯೂ ಇರಬೇಕು. ಹಣವಿಲ್ಲದೆ ಈ ಪ್ರಪಂಚದಲ್ಲಿ ಯಾವುದೂ ಸಾಧ್ಯವಿಲ್ಲ. ಪ್ರೀತಿಸುವುದಕ್ಕೂ ಬೇಕಾದಷ್ಟು ಹಣವಿರಬೇಕು."

ಕೋಪ ಮರುಕಳಿಸಿ ಬಂತು. ಮರುಕಳಿಸಿ ಬಂದಾಗ ಹೆಚ್ಚಾಗಿಯೇ ಬಂದಿತು. ಶಂಕರ ಎದ್ದುನಿಂತುಕೊಂಡು, ಹೊರಡಲು ಉದ್ಯುಕ್ತನಾಗಿ ಹೇಳಿದ.

"ವಾಸುದೇವ ಹೇಳಿದ್ದೇ ಸರಿ. ನೀನು ಎಲ್ಲವನ್ನೂ ಹಣದಿಂದ ತೂಕ ಮಾಡಿ ನೋಡುತ್ತೀಯೆ! ನಿನಗೆ ಎಲ್ಲದಕ್ಕಿಂತಲೂ ಹಣವೇ ಮುಖ್ಯ. ನನ್ನನ್ನು ಪ್ರೀತಿಸುತ್ತಿರುವುದಾಗಿ ನೀನು ಹೇಳುತ್ತಿರುವುದೂ ಹಣಕ್ಕಾಗಿಯೇ! ಅವನು ಹೇಳಿದಂತೆ ನೀನು ಬೀದಿಯ ಹೆಣ್ಣು! ಹಣಕ್ಕಾಗಿ ಬಾಯಿಬಿಡುವ ನಾಯಿ. ತಿರುಗಿ ನಿನ್ನ ಮುಖ ನೋಡಿದರೆ ಕೇಳು."

ಅವಳ ಮುಖವನ್ನು ಸಹ ನೋಡದೇ ಅವನು ಬಾಗಿಲಿನ ಕಡೆ ಹೊರಟ.

ಅವಳಿಗೂ ಕೋಪ ಬಂತು, ಹೇಳಿದಳು.

"ಹೋದರೆ ಹೋಗು, ಹಾಳಾಗಿ ಹೋಗು. ಬೀದಿಯ ಹೆಣ್ಣು. ನಾಯಿ. ನನ್ನನ್ನು ಬೈಯ್ಯುವುದಕ್ಕೆ ನೀನಾರು? ನೀನೇನು ತಾಳೀ ಕಟ್ಟಿದ ಗಂಡನೇ? ಪೀಡೆ ಹೋಯಿತೆಂದುಕೊಳ್ಳುತ್ತೇನೆ, ಹೋಗು.''

## ೮

ಶಂಕರ ಹೋಟಲಿನ ಕೋಣೆಗೆ ವಾಪ್ಸು ಬಂದಾಗ ಕೊಠಡಿಯ ಬಾಗಿಲು ತೆಗೆದಿತ್ತು. ಯಾರೂ ಇರಲಿಲ್ಲ. ಹೋಗಿ ಮಂಚದ ಮೇಲೆ ಕುಳಿತು ಕೊಂಡು ಸಿಗರೇಟು ಹಚ್ಚಿಕೊಂಡ.

ಕೋಣೆಯಲ್ಲಿ ಸ್ವಲ್ಪ ಬದಲಾವಣೆಯಾಗಿತ್ತು. ಎದುರಿಗೆ ಹೊಸ ದೊಂದು ಹೋಲ್ಡಾಲೂ, ಚರ್ಮದ ಪೆಟ್ಟಿಗೆಯೂ ಇದ್ದುವು. ಕ್ಲಾತ್ ಹ್ಯಾಂಗ ರಿನ ಮೇಲೆ ಅದುವರೆವಿಗೆ ನೋಡದ ಕೋಟುಗಳೆರಡು ತೂಗಾಡುತ್ತಿದ್ದವು. ಕನ್ನಡಿಗೆ ಸೇರಿದ ಟೇಬಲ್ ಮೇಲೆ ಮತ್ತಷ್ಟು ಪುರುಷ ಸೌಂದರ್ಯ ಸಾಧ ನೆಗಳು ಸೇರಕೊಂಡಿದ್ದವು. ಕೋಣೆಯಲ್ಲಿ ಆಸ್ಪತ್ರೆಯಲ್ಲಿರುವ ಹೊಸ ವಾಸನೆ ಯೊಂದು ಬಂದಿತ್ತು.

ಯಾರೋ ಹೊಸಬರು ಬಂದಿದ್ದಾರೆ? ವಾಸನೆಯನ್ನು ಹಿಡಿದು ನೋಡಿ ದರೆ ಔಷಧಗಳ ಸಮೇತ ಯಾರೋ ಡಾಕ್ಟರು ಬಂದಂತಿದೆ. ಅವರಾರು?

ಅವರಾರೆಂಬುದನ್ನು ಯೋಚಿಸಲು ಶಂಕರನ ಮನಸ್ಸು ಸಿದ್ಧವಾಗಿರ ಲಿಲ್ಲ. ಅವನ ಸರ್ವಸ್ವವೂ ಅಪಹರಣವಾಗಿರುವಾಗ ಅವನ ಜೀವನವೇ ಭಗ್ನ ವಾಗಿರುವಾಗ ಯಾರು ಬಂದರೆ ತಾನೇ ಏನು?

ಸ್ವಲ್ಪ ಹೊತ್ತಿಗೆಲ್ಲಾ ವಾಸುದೇವ ಬಂದ.

ಬಂದವನು "ಯಾವಾಗ ಬಂದೆ?" ಎಂದು ಕೇಳಿದರೂ ಶಂಕರನ ಉತ್ತರವನ್ನು ನಿರೀಕ್ಷಿಸದೇ ಹೇಳಿದ.

"ಹುಬ್ಬಳ್ಳಿಯಿಂದ ನನ್ನ ಸ್ನೇಹಿತರೊಬ್ಬರು ಬಂದಿದ್ದಾರೆ, ಶಂಕರು."

ಶಂಕರನಿಗೆ ಹುಬ್ಬಳ್ಳಿ ಸ್ನೇಹಿತರ ವಿಷಯುಗಳೊಂದೂ ಬೇಕಾಗಿರಲಿಲ್ಲ. ತನ್ನ ದುಃಖ ಯಾರೊಂದಿಗಾದರೂ ತೋಡಿಕೊಳ್ಳಬೇಕಾಗಿತ್ತು. ಅದನ್ನು ವಾಸುದೇವನೊಂದಿಗೆ ಹೇಳಿಕೊಳ್ಳೋಣ ಎನ್ನುವಷ್ಟರಲ್ಲಿ ಇಲ್ಲಿ ಯಾವನೋ ಗೆಳೆಯ ಬಂದುಬಿಟ್ಟಿದ್ದಾನೆ. ಆದರೆ ಆ ಕ್ಷಣದಲ್ಲಿ ಅಸಮಾಧಾನವನ್ನು ತೋರುವುದು ಸೌಜನ್ಯವಲ್ಲ ಅದರಿಂದ ನಿರಾಸಕ್ತಿಯಿಂದ ಕೇಳಿದ.

"ಕೋಣೆಗೆ ಬಂದೊಡನೆಯೇ ಯಾರೋ ಬಂದಿದ್ದಾರೆಂದುಕೊಂಡೆ, ಯಾರು ಬಂದಿದ್ದಾರೋ ?"

"ಶಶಿಕಾಂತ್ ಅಂತ. ನಮ್ಮ ಮೈಸೂರಿನವನೇ. ಜರ್ನಲಿಸ್ಟ್. ಈಗ ಕೆಲವು ದಿನಗಳಿಂದ ಹುಬ್ಬಳ್ಳಿಯಲ್ಲಿದ್ದಾನೆ. ನಾನು ಬಂದಿದ್ದೇನೆಂದು ಯಾರೋ ಬೆಳಗಾವಿಯಿಂದ ಹೋದವರು ಹೇಳಿದರಂತೆ. ನೋಡಿಕೊಂಡು ಹೋಗೋಣವೆಂದು ಬಂದಿದ್ದಾನೆ"

ಬಂದವರು ಡಾಕ್ಟರೆಂದುಕೊಂಡಿದ್ದ. ಅಲ್ಲ. ಜರ್ನಲಿಸ್ಟ್. ಹಾಗಾದರೆ ಈ ವಾಸನೆ ? ಅದೇನೆಂದು ಶಂಕರ ಕೇಳಲಿಲ್ಲ.

"ಎಲ್ಲಿ ? ಎಲ್ಲಾದರೂ ಹೊರಗಡೆ ಹೋಗಿದ್ದಾರೇನು ?"

"ಇಲ್ಲ. ಕೆಳಗಡೆ ಸ್ನಾನ ಮಾಡುತ್ತಿದ್ದಾನೆ. ಇನ್ನೇನು ಬರುತ್ತಾನೆ. ಬಹಳ ಸ್ವಾರಸ್ಯವಾಗಿ ಮಾತನಾಡುತ್ತಾನೆ. ಅವನೊಂದಿಗೆ ಮಾತನಾಡಲು ಕುಳಿತರೆ ನೀನು ರಾತ್ರಿಯೆಲ್ಲಾ ನಿದ್ದೆಯೇ ಮಾಡುವುದಿಲ್ಲ"

ಶಶಿಕಾಂತ್ ತಂದಿದ್ದ "ಟೈಂ" ತೆಗೆದು ನೋಡುತ್ತಾ ವಾಸುದೇವ ಕುಳಿಕುಕೊಂಡ.

ತಾನು ಕೂಡಲೇ ವಾಪ್ಸು ಬಂದ ವಿಷಯ ಗೆಳೆಯ ಕೇಳಲಿಲ್ಲವಲ್ಲಾ ಎಂದು ಶಂಕರನಿಗೆ ಮನಸ್ಸು ಖಿನ್ನವಾಯಿತು. ತಡೆಯುವಂತಿಲ್ಲ. ತಾನೇ ಆದರೂ ಹೇಳಿಕೊಳ್ಳಬೇಕು. ಅವನೇ ಹೇಳಿದ.

"ನೀವು ಹೇಳಿದ್ದು ಸರಿ"

ಪತ್ರಿಕೆಯಿಂದ ವಿಮುಖನಾದಂತೆ ತಿರುಗಿ ನೋಡಿದ. ಆದರೂ ಆಸಕ್ತಿ ಅದರ ಮೇಲೆಯೇ ಇದ್ದಿತು. ಕೇಳಿದ.

"ಯಾವ ವಿಷಯ ?"

"ಅದೇ ! ಕನಕಳ ವಿಷಯ."

"ಸರಿ."

"ಅವಳು ಸೂಳೆ. ಕಾಸೆಸೆದವರ ಹಿಂದೆ ಓಡಿ ಹೋಗುವ ಸೂಳೆ"

"ಹೂಂ"

"ಅವಳನ್ನು ಉದ್ಧಾರ ಮಾಡುವುದು ದೇವರಿಂದಲೂ ಸಾಧ್ಯವಿಲ್ಲ"

"ಹೌದು. ಸಾಧ್ಯವಿಲ್ಲ"

"ಅವಳೇನು ಮಾಡಿದಳು, ಗೊತ್ತೇ ?"

"ಏನು ಮಾಡಿದಳು ?"

"ನಾನು ಇತ್ತ ಬರುತ್ತಲೇ ಅತ್ತ ಯಾವನೊಂದಿಗೋ ಮಲಗಿಕೊಂಡಳು. ಅದೂ ಐದು ರೂಪಾಯಿಗಾಗಿ. ಹಿಂದಿನ ರಾತ್ರಿ ಇನ್ನೂರು ರೂಪಾಯಿ ತೆಗೆದುಕೊಂಡವಳು ಈ ದಿನ ಬೆಳಗಾಗ ಐದು ರೂಪಾಯಿಗಾಗಿ-"

"ಹೌದು. ಅವರುಗಳು ಹಾಗೆಯೆ ?"

"ನನಗೇನು ಮಾಡಬೇಕೆನ್ನಿಸುತ್ತದೆ, ಗೊತ್ತೆ ?"

"ಏನು ಮಾಡಬೇಕೆನ್ನಿಸುತ್ತದೆ ?"

"ಅವಳ ಕೊರಳು ಹಿಸುಕಿ ಕೊಲ್ಲಬೇಕು-ಎನ್ನಿಸುತ್ತದೆ"

ಈಗ ವಾಸುದೇವ ಆಸಕ್ತಿಯಿಂದ ಮಾತನಾಡಿದ.

"ಹಾಗೆಲ್ಲಾ ಮಾಡಬಾರದು"

"ಅವಳನ್ನು ಸುಮ್ಮನೆ ಬಿಟ್ಟುಬಿಡಬೇಕು-ಅಂತೀರಾ"

"ಹೌದು. ಸುಮ್ಮನೆ ಬಿಟ್ಟುಬಿಡಬೇಕು, ಮಗು. ಅಷ್ಟೇ ಅಲ್ಲ. ಅವಳನ್ನು ಮರೆತುಬಿಡಬೇಕು. ಇನ್ನಾವಳಾದರೂ ಕಣ್ಣಿಗೆ ಚೆನ್ನಾಗಿ ಕಂಡು ಬಂದರೆ ಅವಳಲ್ಲಿ ಆಸಕ್ತಿ ವಹಿಸಬೇಕು. ಆದರೆ ಕನಕಳಿಗೆ ಕೊಟ್ಟಂತೆ ಹಣ ಕೊಡಬಾರದು"

ಯಾರೋ ಹೊರಗಡೆ ಮಹಡಿಯ ಮೆಟ್ಟಿಲುಗಳನ್ನು ಹತ್ತಿ ಬರುವ

ಶಬ್ದ ಕೇಳಿಸಿತು. ಮರದಲ್ಲಿ ಮಾಡಿದ ಮೆಟ್ಟಿಲುಗಳು. ಶಬ್ದ ಚೆನ್ನಾಗಿಯೇ ಕೇಳಿಬರುತ್ತಿತ್ತು. ಅದರಿಂದ ಶಂಕರ ಮಾತನಾಡಲಿಲ್ಲ. ವಾಸುದೇವ ಹೇಳು ವುದೆಲ್ಲವನ್ನೂ ಹೇಳಿ ಮುಗಿದಿತ್ತು.

ಶಶಿಕಾಂತ ಬಂದ.

ಪಾಯಿಜಾಮ ಹಾಕಿಕೊಂಡು ಬನಿಯನ್ ಧರಿಸಿದ್ದ. ಕಾಲಿನಲ್ಲಿ ಚಪ್ಪಲಿ ಮೆಟ್ಟಿದ್ದ. ಭುಜದ ಮೇಲೆ ಬಣ್ಣದ ಟರ್ಕಿ ಟವಲು ಕುಳಿತಿತ್ತು. ಒರಸಿದ್ದರೂ ಕೆದರಿದ್ದ ತಲೆಯಿಂದ ನೀರು ತೊಟ್ಟಿಕ್ಕುತ್ತಿತ್ತು. ಸಿಗರೇಟಂತೂ ತುಟಿಗಳಿಗೆ ಸಿಕ್ಕಿಕೊಂಡು ಹೊಗೆಯುಗುಳುತ್ತಿತ್ತು.

ಅವರವರಿಗೆ ಪರಿಚಯ ಮಾಡಿಸಿದ, ವಾಸುದೇವ.

"ನಿಮ್ಮನ್ನು ನೋಡಿದುದು ಬಹಳ ಸಂತೋಷ ಮಿ|| ಶಂಕರ್. ಆದರೆ ಓದಿ ಮುಂದೆ ಬರಬೇಕಾದವರು ಇವನ ಜೊತೆ ಸೇರಿ ಬಿಟ್ಟಿರಲ್ಲಾ ಎಂದು ವಿಷಾದ, ಅಷ್ಟೇ"

ಆ ಮಾತು ಹೇಳಿ ಅವನೂ ನಕ್ಕ, ಅವನೊಡನೆ ಇತರರೂ ನಕ್ಕರು.

ಶಂಕರ ಹೋಟಲಿಗೆ ಬರುವ ವೇಳೆಗಾಗಲೇ ಊಟದ ಹೊತ್ತಾಗಿತ್ತು. ಶಶಿಕಾಂತ ಸ್ನಾನದ ಮನೆಯಿಂದ ಬಂದು ಬಟ್ಟೆ ಬರೆಗಳನ್ನು ಬದಲಾಯಿಸು ವುದರೊಳಗಾಗಿ ಕೃಷ್ಣ ಮೂರು ತಟ್ಟೆಗಳಲ್ಲಿ ಊಟವನ್ನು ತಂದಿಟ್ಟು ಹೋದ.

ಕೂಡಲೇ ಕುಳಿತು ಊಟ ಮಾಡಬೇಕೆಂಬುದು ಎಲ್ಲರೂ ಒಪ್ಪಿಕೊಂಡು ತೀರ್ಮಾನವಾಗಿತ್ತು. ಶಶಿಕಾಂತನೂ ಬಟ್ಟೆ ಬದಲಾಯಿಸಿ ಆಗಿತ್ತು. ಆದರೆ ಏನೋ ಮಾಡುತ್ತಾ ತಡ ಮಾಡುತ್ತಿದ್ದ. ಅಭ್ಯಾಗತನಾದರೂ ಅವನನ್ನು ಬಿಟ್ಟು ಊಟ ಮಾಡುವಂತಿರಲಿಲ್ಲ.

ಕಡೆಗೆ ವಾಸುದೇವನಿಗೆ ರೇಗಿ ಹೋಗಿ ಅವನನ್ನು ಹಿಡಿದು ಕೂರಿಸಿದ. ಊಟ ಆರಂಭವಾಯಿತು.

ಊಟದೊಂದಿಗೇ ಶಶಿಕಾಂತ ಮಾತಗಳಿಗೂ ಆರಂಭಿಸಿಬಿಟ್ಟ. ಆಡು ವುದಕ್ಕವನಿಗೆ ಬೇಕಾದಷ್ಟು ವಿಷಯಗಳಿದ್ದುವು. ಕರ್ನಾಟಕವಾಗಲೇಬೇ ಕೆಂದು ಆಗತಾನೇ ನಿರ್ಧರವಾಗಿದ್ದಿತು. ತಪ್ಪಿಸುವುದಕ್ಕಾಗುವುದಿಲ್ಲವೆಂಬುದು ನಿರ್ಧರವಾದ ನಂತರ ಎಲ್ಲರೂ ಒಪ್ಪಿಕೊಂಡಿದ್ದರು. "ಸಂತೆ ನೆರೆಯುವುದ ಕ್ಕಿಂತ ಮೊದಲು ಕಳ್ಳರು ನೆರೆದರು" ಎಂಬಂತೆ ಪುಡಾರಿಗಳು ಅತ್ತಲಿಂದಿತ್ತ,

ಇತ್ತಲಿಂದತ್ತ ಓಡಿಯಾಟಗಳನ್ನು ಆರಂಭಿಸಿದ್ದರು. ಧಾರವಾಡದೆಮ್ಮೆಗಳ ಸಗಣಿ ಬುತ್ತಿಯನ್ನು ಕಟ್ಟಿಕೊಂಡು ಹುಬ್ಬಳ್ಳಿಯ ಜನ ಮೈಸೂರಿಗೆ ಯಾತ್ರೆ ಹೋಗಿ ಬರುತ್ತಿದ್ದರು. ಮೈಸೂರು ಮಂದಿ ಕಾವೇರಿ ಮರಳನ್ನು ಕಟ್ಟಿ ಕೊಂಡು ಕರ್ನಾಟಕ ಯಾತ್ರೆಯನ್ನು ಮಾಡುತ್ತಿದ್ದರು.

ಅಂತೂ, ಮುಂಬರುವ ಕರ್ನಾಟಕ ಮಾತುಗಳಲ್ಲಿ ಊಟ ಮುಗಿಯಿತು.

ಭೋಜನಾನಂತರ ಸಿಗರೇಟು ಸೇದುವವರೆವಿಗೆ ತಡೆದಿದ್ದು ವಾಸು ದೇವ ಮಲಗಿಬಿಟ್ಟ. ಶಂಕರನೂ ಮಲಗಬೇಕೆಂದಿರುವಾಗ ಶಶಿಕಾಂತ, “ಸ್ವಲ್ಪ ತಡೆಯಿರಿ. ನಾನೂ ಬಂದು ಬಿಡುತ್ತೇನೆ” ಎಂದು ಹೇಳಿ ಹೊರಟ.

ಗ್ಲಾಸಿನಷ್ಟು ನೀರಿಗೆ ಸ್ವಲ್ಪ ಡೆಟಾಲ್ ಹಾಕಿಕೊಂಡು ಅವನು ಬಾಯಿ ತೊಳೆಯುವುದಕ್ಕೆ ಹೊರಟ. ದಿನಕ್ಕೆ ನಾಲ್ಕೈದು ಬಾರಿಯಾದರೂ ಬಾಯಿ ತೊಳೆವರೆ ಅವನಿಗೆ ಸರಿಹೋಗುತ್ತಿರಲಿಲ್ಲ.

ಮಲಗಬೇಕಾದರೆ ಇವನು ಬರುವವರೆವಿಗೆ ಯಾಕೆ ತಡಮಾಡಬೇಕೋ ಶಂಕನಿಗೆ ಅರ್ಥವಾಗಲಿಲ್ಲ. ಆದರೂ ಅವನು ಬರುವವರೆವಿಗೆ ತಡೆವಿದ್ದ.

ಶಶಿಕಾಂತ ಶಂಕರನನ್ನು ಮಲಗುವುದಕ್ಕೆ ಬಿಡಲೇ ಇಲ್ಲ. ಮಾತನಾ ಡಿಸುತ್ತಲೇ ಇದ್ದ. ಅವನ ವಿಷಯವನ್ನು ಸೂಕ್ಷ್ಮವಾಗಿ ವಿಚಾರಿಸಿ ಎಷ್ಟು ಹೇಳುತ್ತಾನೆಯೋ ಅಷ್ಟನ್ನು ಕೇಳಿ ತಿಳಿದುಕೊಂಡ. ತನ್ನ ವಿಷಯವನ್ನು ಎಷ್ಟು ಹೇಳಬಹುದೋ ಅಷ್ಟನ್ನು ಹೇಳಿದ. ಆದರೆ ಯಾವುದೂ ಮುಚ್ಚು ಮರೆಯಿಲ್ಲದಿದ್ದರೆ ಹೇಗೆ ಮಾಡಬೇಕೋ, ಹೇಗೆ ಮಾತನಾಡಬೇಕೋ ಹಾಗೆ ಮಾತನಾಡಿದ.

ಕೇಳಿದರೆ ಮಾತ್ರ ವಾಸುದೇವ ಶಂಕರನಿಗೆ ಸಿಗರೇಟು ಕೊಡುತ್ತಿದ್ದ. ಶಶಿಕಾಂತ ಹಾಗಲ್ಲ. ತಾನೂ ಸಿಗರೇಟು ಸೇದುವಾಗಲೆಲ್ಲಾ ಬಲತ್ಕಾರ ಮಾಡಿ ಅವನಿಂದಲೂ ಸೇದಿಸುತ್ತಿದ್ದ. ಅವನು ಗಂಟೆಗೆ ಐದಾದರೂ ಸಿಗ ರೇಟು ಸೇದುತ್ತಿದ್ದ. ಶಂಕರನಿಂದ ಮೂರಾದರೂ ಸೇದಿಸುತ್ತಿದ್ದ.

ಮಧ್ಯಾಹ್ನ ಚಹಾದ ಹೊತ್ತು ಬರುವ ವೇಳೆಗೆ ಅವರೆಷ್ಟೋ ಆಪ್ತ ರಾಗಿದ್ದರು.

ಚಹಾದ ಹೊತ್ತಿಗೆ-ಅಂದರೆ ನಾಲ್ಕರಿಂದ ನಾಲ್ಕೂವರೆಯ ಒಳಗೆ ವಾಸುದೇವನಿಗೆ ತನ್ನಷ್ಟಕ್ಕೆ ತಾನೇ ಎಚ್ಚರವಾಗುತ್ತಿತ್ತು.

ಎದ್ದವನೇ ಹೇಳಿದ.

"ಈ ದಿನ ಶಂಕರ ನಿನ್ನ ಕೈಗೆ ಸಿಕ್ಕಿಹಾಕಿಕೊಂಡ. ಪಾಪ ಬಡಪಾಯಿ"

"ಸುಮ್ಮನಿರಯ್ಯಾ ! ನಿಮ್ಮ ಹುಡುಗನನ್ನೇನೂ ಮಾಡಿಲ್ಲ. ನೋಡಿಕೋ. ನಾಲು ಜಖಂ ಆಗದೇ ಇದ್ದಕ್ಕಿದ್ದ ಹಾಗೆಯೇ ಇದೆ. ಸ್ಪಾಟಸ್‌ಕೋ ವೈರ್ಟೈ ಮಾಡಿದ್ದೇನೆ"

"ಏನು ಮಾಡುತ್ತೀಯೆ ? ಸತಾಯಿಸಿ ಬೇಜಾರು ಮಾಡಿರುತ್ತೀ ?"

"ಸುಮ್ಮನೆ ಕುಳಿತಿದ್ದೀರಲ್ಲಾ. ಅವನಿಗೆ ಬುದ್ಧಿ ಹೇಳ್ರೀ"

ಒಳ್ಳೆಯ ಡಿಫೆನ್ಸ್ ಸಾಕ್ಷಿಯಂತೆ ಶಂಕರ ಮುಖ ಮಾಡಿದ.

"ಯಾವುದೋ ಜ್ಞಾನದಲ್ಲಿ ಮರೆತುಬಿಟ್ಟೆ. ಇಲ್ಲದಿದ್ದರೆ ಖಂಡಿತ ಈ ಈ ಹಸುಳೆಯನ್ನು ನಿನ್ನ ಬಳಿ ಬಿಟ್ಟು ನಿರಾಂತಕನಾಗಿ ಮಲಗುತ್ತಿರಲಿಲ್ಲ"

ಚಹಾ ತರಿಸಿ ಕುಡಿದರು. ಅನಂತರ ವಾಸುದೇವನೂ ಶಶಿಕಾಂತನೂ ಕನ್ನಡದಲ್ಲಿ ಕೊರತೆಯಾಗಿರುವ ವಿಡಂಬನ ಸಾಹಿತ್ಯದ ವಿಷಯವನ್ನು ಮಾತನಾಡತೊಡಗಿದರು.

ಶಂಕರನೂ ಆಗಾಗ ಏನಾದರೂ ಒಂದೊಂದು ಮಾತುಗಳನ್ನು ಆಡುತ್ತಿದ್ದ. ತನಗೂ ಏನೋ ಗೊತ್ತಿರುವಂತೆ ಗೊತ್ತಿಲ್ಲದ ವಿಷಯದಲ್ಲಿ ತೀರ್ಮಾನ ಕೊಡುತ್ತಿದ್ದ. ಅವರು ಗೊತ್ತಿಲ್ಲದ ಎಷ್ಟೋ ವಿಷಯಗಳನ್ನು ಮಾತನಾಡುತ್ತಿರುವಾಗ ಇವನೇಕೆ ಮಾತನಾಡಬಾರದು ?

ಐದೂವರೆ ಗಂಟೆಯಲ್ಲಿ ಪುನಃ ಚಹಾ ತರಿಸಿ ಕುಡಿದು ವಾಸುದೇವ ಹೇಳಿದ.

"ಶಶಿ. ನೀನೆದ್ದು ಸ್ನಾನ ಮಾಡಿಬಿಡು. ನೀನು ಸಿದ್ಧವಾಗುವುದು ಎಷ್ಟಾದರೂ ನಿದಾನ ತಾನೇ. ಅಷ್ಟು ಹೊತ್ತಿಗೆ ನಮ್ಮ ಸ್ನಾನಗಳೂ ಮುಗಿಯುತ್ತವೆ"

"ಇಲ್ಲ, ಇಲ್ಲ. ನೀವು ಸ್ನಾನ ಮಾಡಿಬಿಡಿ. ನಿನ್ನೆಯಿಂದ ಟೈಂನಲ್ಲಿ ಒಂದು ಆರ್ಟಿಕಲ್ ಓದಬೇಕೆಂದುಕೊಳ್ಳುತ್ತಿದ್ದೇನೆ ಪುರಸತ್ತೇ ಆಗಿಲ್ಲ. ನೀವು ಸ್ನಾನ ಮಾಡುವುದರಲ್ಲಿ ಓದಿ ಮುಗಿಸಿಬಿಡುತ್ತೇನೆ"

ಶಂಕರ ಸ್ನಾನಕ್ಕೆ ಹೋದ. ವಾಸುದೇವ ಕುಳಿತಿದ್ದುದರಿಂದ ಶಶಿಗೆ ಓದಲಾಗಲಿಲ್ಲವೆಂದು ತೋರುತ್ತದೆ. ಮಾತನಾಡುತ್ತಲೇ ಇದ್ದ. ವಾಸುದೇವನ ಸರದಿಯು ಬಂದು ಅವನು ಸ್ನಾನ ಮುಗಿಸಿಕೊಂಡು ಬರುವ ವೇಳೆಗೆ ಶಶಿ ಮಲಗಿ ಅವನಿಗೆ ನಿದ್ದೆ ಬಂದಿತ್ತು.

ಶಂಕರ ವಾಸುದೇವ ಹೊರಡಲು ಸಿದ್ಧವಾದರೂ ಶಶಿಗೆ ಎಚ್ಚರವಾಗ ಲಿಲ್ಲ. ಈಗ ಹೇಗೆಂದು ಶಂಕರ ಯೋಚಿಸುತ್ತಾ ನಿಂತ. ಆಗ ವಾಸುದೇವ ಹೇಳಿದ.

"ಅದಕ್ಕೇನೂ ಯೋಚನೆ ಮಾಡಬೇಕಾಗಿಲ್ಲ. ನಾವು ಹಾಗೇ ಒಂದು ರೌಂಡ್ ಹೋಗಿ ಬಂದುಬಿಡೋಣ ಬಾ"

"ಅವರೇನೂ ತಪ್ಪು ತಿಳಿದುಕೊಳ್ಳುವುದಿಲ್ಲವೇ ?"

"ಇಲ್ಲ. ಅವನು ತಪ್ಪು ತಿಳಿದುಕೊಳ್ಳುವಂತಹ ಪ್ರಾಣಿಯೇ ಅಲ್ಲ."

ದಾರಿಯಲ್ಲಿ ಹೋಗುತ್ತಾ ಅವನ ವಿಷಯವನ್ನು ಶಂಕರನಿಗೆ ವಿವರಿ ಸುತ್ತಾ ವಾಸುದೇವ ಹೇಳಿದ.

ನೋಡು. ನಮ್ಮ ಶಶಿ ಇದ್ದಾನೆಯಲ್ಲಾ, ಅವನು ಸ್ಥಿತಪ್ರಜ್ಞ. "ಯಾನಿಷಾಂ ಸರ್ವ ಭೂತಾನಾಂ ತಸ್ಯಾಂ ಜಾಗೃತ ಸಂಯಮಿ" ಎಂದು ಕೃಷ್ಣ ಹೇಳಿರುವಂತೆ ಅವನ ವ್ಯವಹಾರ. ಎಲ್ಲರೂ ಎಚ್ಚರವಾಗಿರುವಾಗ ನಿದ್ದೆಮಾಡುತ್ತಾನೆ. ಎಲ್ಲರೂ ನಿದ್ದೆಮಾಡುವಾಗ ಎಚ್ಚರವಾಗಿರುತ್ತಾನೆ. ಅವನಲ್ಲಿ ಬರುವ ಕಷ್ಟವೆಂದರೆ ತನ್ನೊಡನಿರುವವರನ್ನೂ ತನ್ನಂತೆಯೇ ಸ್ಥಿತ ಪ್ರಜ್ಞರಾಗಿ ಮಾಡಲು ಪ್ರಯತ್ನ ಪಡುತ್ತಾನೆ."

ಒಂದು ವಿಧವಾಗಿ ಶಶಿ ಜೊತೆಯಲ್ಲಿ ಬರದುದು ಶಂಕರನಿಗೆ ಆನಂದವೇ ಆಗಿತ್ತು. ತನ್ನ ವಿಷಯಗಳನ್ನೆಲ್ಲಾ ಅವನೊಡನೆ ಬಿಚ್ಚಿ ಮಾತನಾಡು ವಷ್ಟು ಇನ್ನೂ ಸ್ನೇಹವಾಗಿರಲಿಲ್ಲ.

"ನನ್ನ ವಿಷಯವನ್ನೆಲ್ಲಾ ನೀವು ಪೂರಾ ಕೇಳಲಿಲ್ಲವಲ್ಲ"

ಪೂರಾ ಕೇಳದಿದ್ದರೂ ವ್ಯವಹಾರ ಪೂರ್ಣಗೊಂಡಿದೆ ಎಂಬುದಷ್ಟು ವಾಸುದೇವನಿಗೆ ಗೊತ್ತಿತ್ತು. ಅಷ್ಟರಿಂದಲೇ ತೃಪ್ತನಾಗಿದ್ದ ಗೆಳೆಯನಿಗೆ ನಿರಾಶೆಯುಂಟು ಮಾಡದೇ ಅಂದ.

"ಹೌದು. ಕೇಳಲು ಅವಕಾಶವಾಗಲಿಲ್ಲ. ಹೇಳು"

ಶಂಕರ ವಿವರವಾಗಿ ವಿಷಯವೆಲ್ಲವನ್ನೂ ಹೇಳಿದ. ತಾನು ವಾಸುದೇವನ ಮಾತು ಕೇಳದೇ ಕನಕಾಂಗಿಯ ಮನೆಗೆ ಹೋದುದು, ಅಲ್ಲವಳು ಅನ್ಯಥಾ ನಡೆದುಕೊಂಡಿದ್ದುದೂ ಎಲ್ಲವನ್ನೂ ವಿವರಿಸಿದ. ಕಡೆಯಲ್ಲಿ ಅಂದ.

"ನಿಮ್ಮ ಅನುಭವದ ಮಾತುಗಳನ್ನು ನಾನು ಕೇಳಿದ್ದರೆ ಬಹಳ ಚೆನ್ನಾಗಿತ್ತು"

"ಚೆನ್ನಾಗಿತ್ತು, ಮಗು. ಆದರೆ ಪ್ರಪಂಚದ ರೀತಿ ಅದಲ್ಲ. ಪೆಟ್ಟು ತಿಂದವರ ಅನುಭವವನ್ನು ಎಲ್ಲರೂ ತಿಳಿದುಕೊಂಡು ಬುದ್ಧಿ ಕಲಿಯುತ್ತ ಬಂದರೆ ಈ ಜಗತ್ತಿನಲ್ಲಿ ಕಷ್ಟವೆಂಬುದು ಎಲ್ಲಿರುತ್ತದೆ? ಪ್ರತಿಯೊಬ್ಬ ವ್ಯಕ್ತಿಯೂ ಸ್ವಯಂ ಅನುಭವವನ್ನು ಪಡೆಯಲು ಪ್ರಯತ್ನ ಮಾಡುತ್ತದೆ. ಅದೇ ಪ್ರಪಂಚದ ರೀತಿ"

ಲೋಟಸ್ ಕೆಫೆಟೇರಿಯಾಗೆ ಹೋಗಿ ಕಾಫಿ ತೆಗೆದುಕೊಂಡರು. ಎರಡು ಸಿಗರೇಟು ಪ್ಯಾಕುಗಳನ್ನು ತೆಗೆದುಕೊಂಡು, ಸಿಗರೇಟು ಸೇದುತ್ತಾ ನಡೆದು ಬಂದರು. ಅಲ್ಲಲ್ಲಿ ನಿಂತು ಕಾಯುತ್ತಿದ್ದ ಕಾಮಿನಿ(?)ಯರು ಕಣ್ಣಿಗೆ ಬೀಳುತ್ತಿದ್ದರು. ವಾಸುದೇವ ಆಗಾಗ ಅವರ ವಿಷಯವಾಗಿ ಏನಾದರೊಂದು ಮಾತಿನ ಕಿಡಿ ಹಾರಿಸುತ್ತಿದ್ದ.

ಶಂಕರನಿಗೆ ಆ ವಾತಾವರಣವೇ ಕಹಿಯಾಗಿತ್ತು. ಹತ್ತಿರದಲ್ಲಿಯೇ ನಿಂತಿದ್ದ ಅವರುಗಳಲ್ಲಿಯೂ ಅವರ ಸಂಬಂಧನಾದ ಮಾತುಗಳಲ್ಲಿಯೂ ದ್ವೇಶ ಉಂಟಾಗಿತ್ತು.

ಇಬ್ಬರೂ ಹೋಟಲಿಗೆ ವಾಪ್ಸು ಬಂದಾಗಲೂ ಶಶಿ ಮಲಗಿ ನಿದ್ದೆ ಮಾಡುತ್ತಲೇ ಇದ್ದ. ವಿಧಿಯಿಲ್ಲದೇ ಅವನನ್ನು ಎಬ್ಬಿಸುತ್ತಾ ವಾಸುದೇವ ಅಂದ.

"ಎಷ್ಟು ಹೊತ್ತು ಮಲಗಿ ನಿದ್ದೆ ಮಾಡುತ್ತೀಯೋ, ಏಳು

ಏಳುತ್ತಾ ಶಶಿ ಉತ್ತರ ಹೇಳಿದ.

"ಆಗಲೇ ಎದ್ದು ನೋಡಿದೆ. ನೀವ್ಯಾರೂ ಇರಲಿಲ್ಲ. ಇನ್ನು ಎದ್ದೇನು ಕೆಲಸ ಎಂದು ಮಲಗಿ ಬಿಟ್ಟೆ. ಈಗ ಬಂದಿದ್ದೀರಲ್ಲಾ. ಎದ್ದು ಬಿಟ್ಟೆ. ಕುಳಿತುಕೊಳ್ಳಿ. ಸ್ನಾನ ಮುಗಿಸಿ ಬಂದುಬಿಡುತ್ತೇನೆ"

ಎಂಟೂವರೆಯ ವೇಳೆಗೆ ಸ್ನಾನ ಮುಗಿಸಿಕೊಂಡು ಬಂದು, ಬಟ್ಟೆ ಹಾಕಿಕೊಳ್ಳುತ್ತಾ ಶಶಿ ಅಂದ.

"ಲೋ, ವಾಸು. ಬಹಳ ದಿನವಾಯಿತು. ಹಳೇ ಸ್ನೇಹಿತರು ಸೇರಿದ್ದೇವೆ. ಏನೂ ಗತಿ ಇಲ್ಲದಿದ್ದರೆ ಸ್ವಲ್ಪ ಆಸವವನ್ನಾದರೂ ಹಾಕಬೇಕಯ್ಯಾ"

"ಆಸವವೇಕೆ ? ಬಿಸ್ಕ್‌ವಿಟ್ ಬ್ರಾಂದಿಯೇ ಅರ್ಧ ಬಾಟಲು ಉಳಿದಿರಬೇಕು. ಅದನ್ನೇ ಹಾಕು"

"ಅರೆರೆ ! ನೀನಿದ್ದೂ ಅರ್ಧ ಬಾಟಲು ಉಳಿದಿದೆಯೆ ? ಹಾಗಾದರೆ ನನ್ನ ಪೂರ್ವಾರ್ಜಿತ ಪುಣ್ಯ ಫಲ ಅಂತ ಕಾಣುತ್ತದೆ"

"ನಿನ್ನ ಪೂರ್ವಾರ್ಜಿತವಲ್ಲ. ನನ್ನ ಕಷ್ಟಾರ್ಜಿತ ಕರ್ಮಫಲ"

"ನಿನ್ನ ಮಾತಿನ ಸರ್ಕಸ್ ಆಮೇಲಾಗಲಿ. ಎಲ್ಲಿದೆ ಹೇಳು, ಒಂದು ಬಾರಿ ಕಣ್ಣಲ್ಲಿ ನೋಡುತ್ತೇನೆ."

ಶಂಕರ ಎದ್ದು ಪೆಟ್ಟಿಗೆಯಲ್ಲಿದ್ದ ಬಾಟಲ್ ತೆಗೆದು ಮೇಜಿನ ಮೇಲಿಟ್ಟ. ಅರ್ಧಕ್ಕಿಂತ ಸ್ವಲ್ಪ ಹೆಚ್ಚಾಗಿಯೇ ಉಳಿದಿತ್ತು.

ವಾಸ್ತವವಾಗಿ ಅದನ್ನು ನೋಡಿ ಶಶಿಗೆ ಬಹಳ ಸಂತೋಷವಾಯಿತು. ತುಟಿಗಳಲ್ಲಿದ್ದ ಸಿಗರೇಟು ಬೆರಳುಗಳಲ್ಲಿ ಹಿಡಿದುಕೊಂಡು, ಬಾಟಲ್ ಎತ್ತಿ ಮುತ್ತಿಟ್ಟು, ಅಪ್ಪಿಕೊಂಡು, ಚಳಿಯಲ್ಲಿ ನಡುಗುವ ಮಗುವಿಗೆ ಬಟ್ಟೆ ಹೊದ್ದಿಸಿದಂತೆ ಅದನ್ನು ಟವಲ್‌ನಲ್ಲಿ ಸುತ್ತಿ ಮಂಚದ ಮೇಲಿದ್ದ ರಗ್ಗಿನಲ್ಲಿ ಅವಿಸಿಟ್ಟ.

ತಲೆಗೆ ಬ್ರಿಲಿಯಂಟೈನ್ ಹಾಕಿ, ಬಾಚಿ, ಮುಖಕ್ಕೆ ಸ್ನೋ ಬಳಿದು, ಹೊಸ ಸಿಗರೇಟ್ ಹಚ್ಚಿ ಕುಳಿತುಕೊಂಡು ಶಶಿ ತನ್ನ ಅಭಿಪ್ರಾಯ ಸೂಚಿಸಿದ.

"ಶುಭಸ್ಯ ಶೀಘ್ರಂ ಮೊದಲು ಮಾಡಿಬಿಡೋಣ"

ಯಾರೂ ಅಡ್ಡಿ ಹೇಳಲಿಲ್ಲ. ಸೋಡಾಗಳನ್ನು ತರಿಸಿ ಮೊದಲು ಮಾಡಿಬಿಟ್ಟರು.

ಒಂಬತ್ತು ಗಂಟೆಯ ವೇಳೆಗೆ ಕೃಷ್ಣ ಮೂರು ತಟ್ಟೆಗಳಲ್ಲಿ ಊಟವನ್ನು ತಂದ. ಮೂರರ ಮೇಲೂ ತಟ್ಟೆಗಳನ್ನು ಮುಚ್ಚಿ ಒಂದು ಬದಿಯಲಿಟ್ಟು ಹೋದ.

ಬಾಟಲು ಖಾಲಿಯಾದನಂತರ ಶಶಿ ಹೇಳಿದ.

"ಹೀಗೇ ಒಂದು ರೌಂಡ್ ಹೋಗಿಬರೋಣ ಬನ್ನಿ."

"ಊಟ ಮುಗಿಸಿಕೊಂಡು ಹೋಗಿ ಬರೋಣ."

ವಾಸುದೇವನಂದ ಮಾತು ಶಂಕರನಿಗೆ ಸರಿಯಾಗಿ ಕಾಣಲಿಲ್ಲ. ಅವನು ಹೇಳಿದ.

"ಬಂದೇ ಊಟ ಮಾಡೋಣ."

"ಅಯ್ಯೋ! ಮಗು. ಶಶಿಯ ಜೊತೆ ವಾಕಿಂಗ್ ಹೋಗುವುದೆಂದರೆ ನಿನಗೆ ಅನುಭವವಿಲ್ಲ. ಹೊರಟರೆ ಇನ್ನು ಬರುವುದು ಎಷ್ಟು ಹೊತ್ತೋ? ಅದಕ್ಕೇ ಊಟಮಾಡಿ ಹೋಗೋಣವೆಂದಿದ್ದು."

"ಹಾಗಾದರೆ ಊಟ ಮುಗಿಸಿಕೊಂಡೇ ಹೋಗೋಣ."

ಬಹುಮತ ಊಟದ ಕಡೆಯೇ ಇತ್ತು. ವಾಕಿಂಗ್ ಮುಗಿಸಿ ಬರುವ ವರೆವಿಗೆ ಊಟಮಾಡುವುದು ಶಶಿಗೆ ಇಷ್ಟವಿರಲಿಲ್ಲ. ಅವನು ಹೇಳಿದ.

"ಇಷ್ಟು ಸೊಗಸಾದ ಬ್ರಾಂದಿ ಕುಡಿದ ನಂತರ ಈಗಲೇ ಊಟ ಮಾಡಿ ಸುಖ ಕೆಡಿಸಿಕೊಳ್ಳುತ್ತಾರಯೇ? ನಿಮಗೆ ಗೊತ್ತಿಲ್ಲ, ಏಳಿ. ವಾಪ್ಸು ಬಂದೇ ಊಟ"

ಬ್ರಾಂದೀ ಕುಡಿದ ಸುಖ ಅಷ್ಟು ಬೇಗ ಕೆಡಿಸಿಕೊಳ್ಳಲು ವಾಸುದೇವ ನಿಗೂ ಇಷ್ಟವಿರಲಿಲ್ಲ.

ಮೂವರೂ ವಾಕಿಂಗ್ ಹೊರಟರು.

ಕುಡಿದು ಜನಸಮೂಹದಲ್ಲಿ ಓಡಿಯಾಡಲು ಹೆದರಿ ನಿರ್ಜನವಾದ ಹುಬ್ಬಳ್ಳಿ ರಸ್ತೆಗೆ ಬಂದರು.

ಅನುಭವಸ್ಥನಂತೆ ಶಶಿ ಹೇಳಿದ.

"ಕುಡಿದ ನಂತರ ಅನೇಕರು ಮಲಗಿಬಿಡುತ್ತಾರೆ. ಅದಕ್ಕಿಂತ ಕುಡಿಯದೇ ಮಲಗಿಬಿಡುವುದೀ ಒಳ್ಳೆಯದು. ಹಣವೂ ಮಿಗುತ್ತದೆ. ಕೋಣೆಯಲ್ಲಿ ಕುಳಿತಿರುವುದು ಸೊಗಸಲ್ಲ. ಸ್ನೇಹಿತರೊಂದಿಗೆ ಬೀದಿ ಸುತ್ತುವುದೇ ಚೆಂದ"

ಬೆಳಗಾಂ ಒಂದು ವಿಧವಾಗಿ ಬಯಲು ಸೀಮೆಯೂ ಅಲ್ಲ. ಮಲೆನಾಡೂ ಅಲ್ಲ. ಅದರಲ್ಲಿ ಮಲೆ ಬಯಲುಗಳೆರಡರ ಸಮ್ಮಿಳನವೂ ಇದೆ.

ಉತ್ತರ ಕನ್ನಡ ಜಿಲ್ಲೆಯ ಕಾನನ ಗಿರಿಗಳಿಗೆ ಹತ್ತಿಹೋಗುವ ಹಂತಗಳ ಮೇಲಿದೆ ಬೆಳಗಾಂ.

ಅಲ್ಲಲ್ಲಿ ಗುಡ್ಡಗಳು. ಸಣ್ಣ ಪುಟ್ಟ ತೋಪುಗಳಂತೆ ಕಂಡುಬರುವ ವೃಕ್ಷ ರಾಶಿ. ಬೀಸುವ ತಂಗಾಳಿ. ಒಮ್ಮೊಮ್ಮೆ ಆಗಾಗ ಕಾರ್ಮೋಡಗಳ ಸೆರೆ ಯಿಂದ ತಪ್ಪಿಸಿಕೊಂಡು ಬಂದು ನಗುವ ಅರೆಚಂದ್ರ.

ಊರು ಕಳೆದು ಅರ್ಧ ಮೈಲು ಬರಲು ಹತ್ತಿರದಲ್ಲಿ ಮುಸ್ಲಿಮರ ದೊಂದು ಚಹಾ ಅಂಗಡಿಯಿತ್ತು. ಶಶಿ ಅಲ್ಲಿ ಚಹಾ ಕುಡಿದು ಮುಂದೆ ಹೋಗಬೇಕೆಂದು ಹೇಳಿದ. ಚಹಾಗೆ ಹೋದರು.

ಕಾಕಾ ಹುಡುಗ ಸ್ಪೆಷಲ್ ಚಹಾ ತಂದಿಡುವ ಹೊತ್ತಿಗೆ ರೇಡಿಯೋ ದಲ್ಲಿ ಸೈಗಾಲ್‌ನ ಹಾಡು ಕೇಳಿ ಬಂತು.

ಅದೇ ಕಡೆಯ ರಿಕಾರ್ಡು.

ರೇಡಿಯೋದಲ್ಲಿ ಗುಡ್‌ನೈಟ್ ಕೇಳಿಕೊಂಡು ಹೊರಬರುತ್ತಾ ಶಶಿ ಹೇಳಿದ.

"ಜನಗಳಿಗೆ ಬೇಡದ್ದು ಎಷ್ಟು ಅಮೋಘವಾಗಿದ್ದರೇನು ? ಜನಪ್ರಿಯ ವಾದ ಕಾರ್ಯಕ್ರಮಗಳನ್ನು ಹಾಕಿಕೊಂಡೇ ಸಿಲೋನ್ ರೇಡಿಯೋ ಯಶಸ್ಸು ಗಳಿಸಿದೆ"

"ಹಾಗೆ ಮಾಡುತ್ತಾ ಬಂದರೆ ಸ್ಟಾಂಡರ್ಡ್ ಹೋಗುತ್ತದೆ. ಜನರಿಗೆ ಬೇಕಾದ್ದು ಎಂದುಕೊಂಡು ಏನೇನೋ ಕೊಡುವುದಕ್ಕಿಂತಲೂ ಒಳ್ಳೆಯದ ರಲ್ಲಿ ಅವರಿಗೆ ಅಭಿರುಚಿಯುಂಟಾಗುವಂತೆ ಮಾಡಬೇಕು"

ಶಶಿ ವಾದಗ್ರಸ್ತ ವಿಷಯ ಆರಂಭಿಸಿದ್ದರೂ ಅವನ ಮನಸ್ಸು ಸೈಗಾಲ್‌ನ ಸಂಗೀತದ ಘಮಲಿನಲ್ಲಿಯೇ ಇದ್ದ.

"ಆ ಗೀತದ ಅರ್ಥವಾಯಿತೇ, ಮಿ|| ಶಂಕರ್"

"ನನಗೆ ಸಂಗೀತದಲ್ಲಿ ಹೆಚ್ಚು ಅಭಿರುಚಿಯಿಲ್ಲ. ಆದರೆ ಆ ಸಂಗೀತ ಕೇಳುವುದಕ್ಕೆ ಹಿತವಾಗಿತ್ತು. ಅದರ ಅರ್ಥವಂತೂ ಗೊತ್ತಾಗಲಿಲ್ಲ''

ಶಶಿ ಅರ್ಥ ಹೇಳಿದ.

ಅರ್ಧ ರಾತ್ರಿಯ ವೇಳೆ. ನದೀ ತಟ. ಮಾಮೂಲಾಗಿ ಇರಬೇಕಾದ

ಚಂದ್ರ, ತಂಗಾಳಿಗಳು ಇದ್ದೇ ಇವೆ. ವಿರಹಿಯೊಬ್ಬನು ಮನದನ್ನೆ ಬರಲಿಲ್ಲ ವೆಂದು ಕಾಯುತ್ತಾ ಕುಳಿತಿದ್ದಾನೆ. ಬರಲಿಲ್ಲವೆಂದು ವಿಲಪಿಸುತ್ತಿದ್ದಾನೆ. ಹತ್ತಿರ ಹತ್ತಿರಕ್ಕೆ ಬರುತ್ತಿರುವ ನದಿಯ ಅಲೆಗಳಂತೆಯೇ ಮೇಲೆ ಮೇಲೆ ವೇದನೆಯುಂಟಾಗಿ ಸೊರಗಿದ್ದಾನೆ.

ಕಡೆಗೂ ಅವಳು ಬರಲಿಲ್ಲ.

ವಿರಹಿ ತನ್ನ ಹೃದಯಕ್ಕೆ ಹೇಳಿಕೊಳ್ಳುತ್ತಾನೆ. "ಬಿರಿದು ಹೋಗು ತ್ತಿರುವ ಹೃದಯವೇ, ಸ್ವಲ್ಪ ತಡೆದುಕೋ. ನಾಳೆಯಾದರೂ ಅವಳಿಗೆ ಕರುಣೆ ಬರಬಹುದು"

ವಾಸುದೇವ ನಗುತ್ತಾ ಅಂದ.

"ಮಾಮೂಲು ಕತೆ. ಈ ಹಾಳು ಕಂದಾಚಾರದ ವರ್ಣನೆ, ಪ್ರಣಯಿ ಗಳು, ವಿರಹ ಇವುಗಳಿಂದ ತಪ್ಪಿಸಿಕೊಳ್ಳುವವರೆವಿಗೆ ನಮ್ಮ ಸಾಹಿತ್ಯಕ್ಕೆ ಉಳಿಗಾಲವಿಲ್ಲ"

"ಏನೋ ತಿಳಿದವನಂತೆ ಮಾತನಾಡುತ್ತೀಯೆ, ವಾಸು. ಭಾವನೇ ಇಲ್ಲದ ಹೃದಯವಿಟ್ಟುಕೊಂಡು ಅದೇನು ಬರೆಯುತ್ತೀಯೋ? ನೀನು ಬರೆದು ದನ್ನು ಅದಾರು ಓದುತ್ತಾರೆಯೋ, ದೇವರಿಗೇ ಪ್ರೀತಿ."

ಅನಂತರ ಶಂಕರನ ಕಡೆಗೆ ತಿರುಗಿ ಹೇಳಿದ.

"ನಾನೆಷ್ಟೋ ಓದಿದ್ದೇನೆ, ಶಂಕರ್. ಪದ್ಯಗಳ ವಿಷಯ ತೆಗೆದುಕೊಂ ಡರೆ ಉರ್ದು ಬಿಟ್ಟರಿಲ್ಲ."

ಶಶಿ ಶಂಕರನಿಗೆ ಮಧ್ಯ ಹಾಗೂ ಆಧುನಿಕ ಕಾಲದ ಉರ್ದು ಸಾಹಿತ್ಯದ ವಿಷಯವಾಗಿ ದೊಡ್ಡದೊಂದು ಭಾಷಣವನ್ನೇ ಮಾಡಿದ.

ವಾಪ್ಸು ಬರುತ್ತಾ ವಾಸುದೇವನೆಂದ.

"ಈ ಶಶಿ ವಿರಹದ ಮಾತನ್ನೇ ಯಾಕೆ ಇಷ್ಟು ದೊಡ್ಡದಾಗಿ ಮಾಡಿ ಹೇಳುತ್ತಾನೆ, ಗೊತ್ತೇ ಶಂಕ್ರು."

"ಯಾಕೆ?"

"ಇವನು ತನ್ನ ಸೋದರಮಾವನ ಮಗಳು ರಮೆಯನ್ನು ಪ್ರೇಮಿ ಸಿದ್ದ. ಅವಳಿಗೆ ಬೇರೇ ಮದುವೆಯಾಯಿತು. ಭಗ್ನಮನೋರಥನಾಗಿ ಊರಿನಿಂದ ಓಡಿಬಂದಿದ್ದಾನೆ. ಇನ್ನೂ ಇವನಿಗೆ ವಿರಹಜ್ವರ ಬಿಟ್ಟಿಲ್ಲ. ಅದ

ರಿಂದ ಇವನಿಗೆ ಪ್ರಪಂಚದಲ್ಲಿ ಎಲ್ಲದಕ್ಕಿಂತಲೂ ವಿರಹವೇ ದೊಡ್ಡದಾಗಿ ಕಾಣುತ್ತದೆ."

"ವಿರಹದಿಂದ ಪರಿತಪ್ತರಾದಾಗ ಬರೆದು ಅನೇಕರು ಮಹಾಕವಿಗಳಾಗಿದ್ದಾರೆಂದು ಕೇಳಿದ್ದೇನೆ. ಇವರೂ ಏನಾಗುತ್ತಾರೆಯೋ?"

"ಈಗಲೇ ಆಗಿಬಿಟ್ಟಿದ್ದಾರೆ. ಒಂದಿಷ್ಟು ವಿರಹಗೀತೆಗಳನ್ನು ರಚಿಸಿದ್ದಾನೆ. ಅದನ್ನು ನಿನಗೆ ಪಂಪ್ ಮಾಡುತ್ತಾನೆ."

"ವಾಸುದೇವ್ ನಿಮ್ಮನ್ನು ಆಕ್ಷೇಪಿಸಿದರೂ ನನಗೊಂದು ಸಮಾಚಾರ ತಿಳಿಯಿತು, ಮಿ॥ ಶಶಿಕಾಂತ್. ನಾನು ನಿಮ್ಮ ಪ್ರೇಮಗೀತೆಗಳನ್ನು ಕೇಳಬೇಕು."

"ಅದಕ್ಕೇನು ಆಗಲಿ, ಸುಮ್ಮನಿರಿ. ಯಾವಾಗಲಾದರೊಮ್ಮೆ ವಾಸುವನ್ನು ಹೊರಗೋಡಿಸಿ ನಿಮಗವುಗಳನ್ನು ಓದುತ್ತೇನೆ."

ಖಡೇ ಬಜಾರಿನಲ್ಲಿ ಒಂದು ಚಹಾ ಅಂಗಡಿ ತೆಗೆದಿತ್ತು.

ಶಶಿಕಾಂತ ಒಂದು ಚಹಾ ಹಾಕಿ, ಸಿಗರೇಟು ಹಚ್ಚಿಕೊಂಡು ಹೋಗೋಣವೆಂದ.

"ಇನ್ನೇನು, ಹೋಟಲಿಗೇ ಹೋಗುತ್ತೇವಲ್ಲಾ."

"ಹಾಗಲ್ಲ, ಶಂಕರ್, ಬನ್ನಿ. ಇನ್ನೊಂದು ನೀವು ರಾತ್ರಿ ಎರಡು ಗಂಟೆಗೆ ಚಹಾ ಕುಡಿಯುತ್ತೀರಿ. ಈ ದಿನವಾದರೂ ಕುಡಿದುಬಿಡಿ."

ಚಹಾ ಕುಡಿದುಕೊಂಡು ಹೋಟಲಿಗೆ ಸೇರಿದಾಗ ಎರಡೂವರೆಯಾಗಿತ್ತು.

ಮಾತು, ಮಾತು. ಹಾಳು ಮಾತಿನಿಂದಲೇ ಚಹಾದ ಅಂಗಡಿಯನ್ನು ಬಿಟ್ಟುಬರಲು ಅರ್ಧಗಂಟೆಯಾಗಿತ್ತು.

ಹೋಟಲಿಗೆ ವಾಪ್ಸು ಬಂದ ನಂತರವೂ ಶಶಿಕಾಂತನ ಮಾತು ಮುಗಿದಿರಲಿಲ್ಲ. ಮಾತನಾಡುತ್ತಲೇ ಇದ್ದ.

ಅವನ ಮಾತಿನ ನಡುವೆ ಶಂಕರ ಹೇಳಿದ.

"ನಮ್ಮ ಜೊತೆ ಬಹಳ ಚೆನ್ನಾಗಿದೆ. ನಾವು ಮೂರು ಮಂದಿಯೂ ಭಗ್ನಪ್ರಣಯಿಗಳು."

"ನನ್ನದಂತೂ ಸರಿ. ನೀವಿಬ್ಬರೂ ನನ್ನ ಜೊತೆ ಸೇರುವುದು ಹೇಗೆ ನ್ನುವುದು ಅರ್ಥವಾಗಲಿಲ್ಲ."

ಶಂಕರನ ವಿಷಯುವನ್ನು ವಾಸುದೇವನೂ, ವಾಸುದೇವನ ವಿಷಯು ವನ್ನು ಶಂಕರನೂ ಸೂಕ್ಷ್ಮವಾಗಿ ತಿಳಿಸಿದರು.

ರಾತ್ರಿ ಊಟವನ್ನು ಮುಗಿಸಿ ಮಲಗುವ ವೇಳೆಗೆ ಮೂರೂವರೆಯ ಗಂಟೆಯಾಗಿದ್ದಿತು.

# ೯

ಮಾರನೆಯ ದಿನ ಸಾಯಂಕಾಲ, ಅಲ್ಲ ರಾತ್ರಿ ಶಶಿಕಾಂತ ವಾರ್ಕಿಂಗ್ ಹೊರಡುವ ಸಮಯದಲ್ಲಿ ವಾಸುದೇವ ಹೇಳಿದ.

"ನನಗಿನ್ನು ಬೆಳಗಾಂನಲ್ಲಿ ಕೆಲಸವಿಲ್ಲ, ನಾನು ಹೊರಡಬೇಕೆಂದಿದ್ದೇನೆ."

"ನಿನಗೆ ಕೆಲಸ ಎಂಬುದೊಂದು ಉಂಟೇನು? ಏನು ಕೆಲಸವಿದೆ ಎಂದು ಬಂದೆ. ಯಾವ ಕೆಲಸ ಮುಗಿಯಿತೆಂದು ಹೊರಟುಹೋಗುತ್ತಿದ್ದೀಯೋ?"

''ಅದೇ. ನಿನಗೆ ಹೇಳಲಿಲ್ಲವೇ? ನಮ್ಮ ಶಂಕರ ನನಗೆ ಪರಿಚಯವಾದುದು ರೈಲಿನಲ್ಲಿ. ಪರಿಚಯು ಬಹಳ ಬೇಗ ಸ್ನೇಹವಾಗಿಬಿಟ್ಟಿತು. ಹುಡುಗ. ವಯಸ್ಸಾಗಿದೆ. ಲೋಕಾನುಭವಿಲ್ಲ. ಸ್ವಲ್ಪ ಅನುಭೋಗ ಮಾಡಿಸೋಣವೆಂದು ಬಂದೆ. ಈಗ ಅನುಭೋಗ, ಅನುಭವಗಳೆರಡೂ ಆಗಿವೆ. ಇನ್ನೇನು ಕೆಲಸ? ಹೊರಡೋಣವೆಂದು."

ಏನೋ ಮುಳುಗಿಹೋದರೆ ಹೇಗೋ ಹಾಗೋ ಶಂಕರ ಕೂಗಿ ಹೇಳಿದ.

''ಇವರು ನನಗಾಗಿ ಬರಲಿಲ್ಲ. ಶಶಿಕಾಂತ್. ಅವರ ಪ್ರೇಯಸಿ ಸರೋಜಿನಿಯನ್ನು ನೋಡಲು ಬಂದರು, ನನ್ನ ನೆವ ಅಷ್ಟೆ."

"ಆ ಹಾಳು ಸರೋಜಿನಿಯ ವಿಷಯ ಎತ್ತಬೇಡಯ್ಯಾ.''

ಜಗಳವಾಗಿರುವಂತೆಯೂ, ಪರಿಹರಿಸುವಂತೆಯೂ ಶಶಿಕಾಂತ ಅಂದ.

"ಅದು ಸರಿಯಪ್ಪ, ಹೊರಡುವುದು ಎಂದೆಯಲ್ಲಾ. ಯಾವಾಗ ಹೊರಡಬೇಕೆಂದಿದ್ದೀಯೆ?"

"ನಾಳೆ— — —"

"ಸರಿ. ನಾಳೆ ಹೋಗುವುದಾದರೆ ಹೋಗುತ್ತೀಯ? ಅದಕ್ಕಿನ್ನೂ ಇಪ್ಪತ್ತುನಾಲ್ಕು ಗಂಟೆಗಳಿವೆಯಲ್ಲಾ, ಈಗಲೇ ಏನು ಅವಸರ?"

"ಹೊರಡುವುದು ಎಂದರೆ ಸುಮ್ಮನಾಗುತ್ತದೆಯೆ ? ಅದಕ್ಕೆ ಎಷ್ಟೋ ಏರ್ಪಾಟುಗಳಾಗಬೇಕು. ಮೊದಲನೆಯದಾಗಿ ಅಪರೂಪವಾಗಿ ನೀನೂ ಹುಡುಕಿಕೊಂಡು ಬಂದಿದ್ದೀಯ ? ನಮ್ಮ ಹುಡುಗನೂ ವಂಚಿತ ಪ್ರೇಮಿಯಾಗಿದ್ದಾನೆ. ಶಂಕರು ಹೇಳಿದಂತೆ ಮೂರು ಮಂದಿ ಭಗ್ನ ಪ್ರಣಯಿಗಳು ಕೂಡಿದ್ದೇವೆ. ತ್ರಿವೇಣೀ ಸಂಗಮದಂತೆ ಇದು ಅಪರೂಪ ಘಟನೆ. ಈ ದಿನ ಮೂರು ಮಂದಿ ಹುಡುಗಿಯರನ್ನು ಕರೆಸಿ, ಕಾಮದಹನ ಮಾಡಿಬಿಟ್ಟು, ನಾಳೆ ಮೂರು ಮಂದಿಯೂ ಮೂರು ದಾರಿ ಹಿಡಿದುಕೊಂಡು ಹೋಗೋಣವೆಂದು ನನ್ನ ಆಲೋಚನೆ."

ವಾಸುದೇವ ಹೇಳಿದ ಬಗೆಯನ್ನು ಕೇಳಿ, ಶಂಕರನಿಗೆ ನಗು ಬಂದಿತು. ನಕ್ಕು, ಹೇಳಿದ.

"ನೀವು ಬೇಕಾದ್ದು ಮಾಡಿಕೊಳ್ಳಿರಿ. ಒಬ್ಬ ಹುಡುಗಿಯ ಸಹವಾಸ ಮಾಡಿ ನನ್ನ ಗತಿ ಈ ರೀತಿಯಾಗಿದೆ. ಇನ್ನು ಒಬ್ಬರಾದ ನಂತರ ಒಬ್ಬರ ಸಹವಾಸ ಮಾಡುತ್ತಾ ಹೋದರೆ ನಾನು ಉಳಿಯಬೇಕೋ ಬೇಡವೋ ?"

"ಅದೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳಬೇಡವೆಂದು ನಾನು ಹೇಳಲಿಲ್ಲವೇ, ಮಗು."

"ಆದರೂ ಆ ಕನಕ ಮಾಡಿದ್ದು ನೆನೆಸಿಕೊಂಡರೆ ನನ್ನ ಮೈಯೆಲ್ಲಾ ಉರಿಯುತ್ತದೆ"

ಅವನೊಂದಿಗೆ ಮಾತನಾಡುವುದು ಪ್ರಯೋಜನವಿಲ್ಲವೆಂದು ವಾಸುದೇವ ಶಶಿಕಾಂತನನ್ನು ಕುರಿತು ಹೇಳಿದ.

"ನಿನ್ನ ವಿಷಯವೇನಯ್ಯ?"

"ನನ್ನ ವಿಷಯ! ನನ್ನ ವಿಷಯ ನಿನಗೆ ಗೊತ್ತಿಲ್ಲವೇ ?"

"ಗೊತ್ತು. ಇನ್ನೂ ಹಾಗೆಯೇ ಇದೀಯೇನು ?"

"ಹಾಗೆಯೇ. ಯಥಾವತ್"

ಒಳ್ಳೇ ಬ್ರಹ್ಮಚಾರಿಗಳ ಮಠದಲ್ಲಿ ಬಂದು ಸೇರಿಕೊಂಡಂತಾಯಿತಲ್ಲಯ್ಯಾ, ನನ್ನ ಗತಿ."

"ಯಾಕೆ ? ಯಾಕೆ ? ನಾವಿಲ್ಲದಿದ್ದರೆ ಇಲ್ಲ. ನೀನೊಬ್ಬನೇ ಕಾವು ದಹನ ನಡೆಸಿಕೋ."

ಕೋಪದಿಂದ ವಾಸುದೇವ ಹೇಳಿದ.

"ನೀವು ಮೂಗು ಹಿಡಿದು ಕುಳಿತಿರುತ್ತೀರೆಂದು ನಾನು ಹಾಗೆಯೇ ಮಾಡುತ್ತೇನೆ–ಎಂದುಕೊಂಡೆಯಾ ? ಇಲ್ಲ. ನಾನೇ ಒಂದಿಬ್ಬರನ್ನು ಕರೆಸಿಕೊಂಡ ಹಾಯಾಗಿ ಕಾಲ ಕಳೆಯುತ್ತೇನೆ.".

"ಭೇಷ್. ಅದು ಸರಿಯಾದ ಆಲೋಚನೆ. ಆದರೆ ನನ್ನದೊಂದು ಅಮೆಂಡ್‌ಮೆಂಟ್ ಇದೆ"

ಏನು ಎಂಬಂತೆ ವಾಸುದೇವ ನೋಡಿದ.

"ಇಲ್ಲೀಕೆ ಕರೆಸಬೇಕು–ಅಂತ"

"ಓಹೋ ! ಅವರು ಬಂದರೆ ಬ್ರಹ್ಮಚಾರಿಗಳ ಮಠ ಕಲ್ಮಶವಾಗುತ್ತದೇನೋ ? ಈ ಹಾಳು ಕೋಣೆಯೇ ಬೇಡ. ಕೃಷ್ಣನಿಗೆ ಹೇಳಿ ಮತ್ತೊಂದು ಕೋಣೆ ಬೇಗ ತೆಗೆಸಿಕೊಳ್ಳುತ್ತೇನೆ"

"ಹಾಗಲ್ಲ, ಮಿತ್ರ. ನನ್ನ ಮಾತು ಕೇಳು. ಇಲ್ಲೆಲ್ಲಾ ಆ ಹುಡುಗಿಯರು ಬರುವುದು, ಮಾಡುವುದೂ ಬೇಡ. ಅಲ್ಲಿಗೇ ಹೋಗೋಣ. ನಾನೂ ನಿನ್ನ ಜೊತೆಯಲ್ಲಿ ಬರುತ್ತೇನೆ"

ವಾಸುದೇವ ಅಣಕಿಸುತ್ತಾ ಕೇಳಿದ.

"ಅಲ್ಲಿ ಬಂದೇನು ಮಾಡುತ್ತೀಯೆ ?"

"ಅಲ್ಲೇನು ಮಾಡುತ್ತೇನೆ. ಸರಿಯಾದ ಹುಡುಗಿಯೊಬ್ಬಳನ್ನು ಆರಿಸಿ ನಿನ್ನೊಂದಿಗೆ ಒಳಗೆ ಕಳಿಸುತ್ತೇನೆ. ಹೊರಗೆ ಯಾವಳೊಂದಿಗಾದರೂ ಮಾತನಾಡುತ್ತಾ ಕುಳಿತಿರುತ್ತೇನೆ"

"ಯಾವಳಪ್ಪಾ. ನಿನ್ನೊಂದಿಗೆ ಬಿಟ್ಟೀ ಮಾತನಾಡುತ್ತಾ ಕುಳಿತುಕೊಳ್ಳುವವಳು"

"ಬಿಟ್ಟೀ ಯಾಕೆ ? ಎರಡು ಪ್ಯಾಕ್ ಬರ್‌ಕ್ಲೀ ಸಿಗರೇಟ್ ತೆಗೆದು

ಗೋಲ್ಡ್‌ಫ್ಲೇಕ್ ಪ್ಯಾಕ್‌ಗಳಲ್ಲಿ ಹಾಕಿ ಕುಳಿತುಕೊಳ್ಳುತ್ತೇನೆ. ಸಿಗರೇಟ್ ಮುಗಿಯುವವರೆವಿಗೆ ಹುಡುಗಿಯರೆಲ್ಲಿ ಎದ್ದು ಹೋಗುತ್ತಾರೆ. ಎರಡು ಪ್ಯಾಕ್ ಮುಗಿಯುವುದರೊಳಗಾಗಿ ನೀನು ಹೊರಗೆದ್ದು ಬಂದೇ ಬರುತ್ತೀ. ಆಮೇಲೆ ವಾಕಿಂಗ್ ಹೋಗೋಣ"

ಬೇಕೆಂದೇ ವಾಸುದೇವ ಅಂದ.

"ಬೇಡ. ವಾಕಿಂಗ್ ಮುಗಿಸಿಕೊಂಡು ಬರುತ್ತಾ ಹೋಗೋಣ"

"ನೋಡಿದೆಯೋ? ಅದು ಮಾತ್ರ ಆಗುವುದಿಲ್ಲ, ಮೊದಲೇ ವಾಕಿಂಗ್ ಹೋದರೆ "ಹುಡುಗಿಯರು-ಹುಡುಗಿಯರು" ಎಂದು ಪರಿತಪಿಸುತ್ತಾ ಅವಸರ ಮಾಡುತ್ತೀಯೆ''

ಗೆಳೆಯರಿಬ್ಬರನ್ನೂ ಸುಮ್ಮನೆ ಕೂರಿಸಿ ತಾನು ಮಾತ್ರ ಹುಡುಗಿಯರೊಂದಿಗೆ ಚಕ್ಕಂದವಾಗಿ ಕಾಲ ಕಳೆಯುವುದು ವಾಸುದೇವನಿಗೆ ಸರಿಬೀಳಲಿಲ್ಲ.

"ಆಗಲಿ, ಹೊರಗಡೆಯೇ ಹೋಗೋಣ"

ವಾಸುದೇವನೂ, ಶಶಿಕಾಂತನೂ ಹೊರಡಲು ಅನುವಾದರು. ಶಂಕರ ಹೊರಡುವಂತೆ ಕಂಡುಬರಲಿಲ್ಲ. ಅದನ್ನು ಗಮನಿಸಿದ ಶಶಿ ಹೇಳಿದ.

"ಏಳಿ, ಶಂಕರ್. ಇಲ್ಲಿ ಕುಳಿತೇನು ಮಾಡುತ್ತೀರಿ ?"

''ಇಲ್ಲ. ನಾನಿಲ್ಲಿಯೇ ಇರುತ್ತೇನೆ. ನೀವುಗಳು ಹೋಗಿ ಬನ್ನಿ''

"ಯಾಕೆ ? ಅಲ್ಲಿ ಹೋದ ನಂತರ ವಾಸು ಬಲಾತ್ಕಾರ ಮಾಡುತ್ತಾನೆಂದೇನು ?"

"ಅಂತಹದೇನೂ ಅಲ್ಲ. ಬೇಜಾರು. ಇಲ್ಲಿಯೇ ಇರುತ್ತೇನೆ"

"ಬೇಜಾರು. ಬೇಜಾರು ಕಳೆಯುವುದಕ್ಕಾಗಿಯೇ ನಾನೂ ಹೇಳಿದ್ದು. ನಾವು ಹೊರಗಡೆ ಕುಳಿತು ಹುಡುಗಿಯರೊಂದಿಗೆ ಮಾತನಾಡುತ್ತಾ ಮಜಾ ಉಡಾಯಿಸೋಣ"

"ಹೊರಗಡೆ ಕುಳಿತು ಮಹಾ ಮಜಾ ಉಡಾಯಿಸುತ್ತಾನೆ"

"ಜೆಪ್ಪೆ. ಹೊರಗೆ ಕುಳಿತು ಮಾತನಾಡುತ್ತಾ ಇರುವಷ್ಟು ಮಜಾ ಒಳಗೇನಿದೆಯೋ ? ಕಾಸೂ ಖರ್ಚಿಲ್ಲ. ಸುಖವೂ ಸಿಗುತ್ತದೆ"

ಎಷ್ಟು ಹೇಳಿದರೂ ಶಂಕರ ಹೊರಡಲಿಲ್ಲ. ಶಶಿ, ವಾಸು ಇಬ್ಬರೂ ಹೊರಟರು.

ಅವರು ಹೊರಟ ಹತ್ತು ನಿಮಿಷಗಳಲ್ಲಿ— — —ಬಾಗಿಲು ಸರಿಸಿಕೊಂಡು ಕನಕ ಬಳಿಗೆ ಬಂದಳು. ಪೀಡೆ ಹರಿಯಿತೆಂದು ಹಾಯಾಗಿರುವಾಗ ಪುನಃ ಹಿಂಬಾಲಿಸಿ ಬಂದಂತಾಯಿತು ಶಂಕರನಿಗೆ.

"ಏನು ಬಂದೆ" ಎಂಬಂತೆ ಶಂಕರ ತಿರುಗಿನೋಡಿದ.

ಅವಳ ಕೈಯಲ್ಲಿ ದೊಡ್ಡದೊಂದು ಕಾಗದದ ಪಟ್ಟಣವಿತ್ತು. ಅದನ್ನು ಬಿಚ್ಚುತ್ತಾ ಹೇಳಿದಳು.

"ನೀವು ಬರುವಾಗ ನಿಮ್ಮ ಕೋಟು ಮರೆತು ಬಂದಿದ್ದಿರಿ. ಅದನ್ನು ತಂದುಕೊಡೋಣವೆಂದು ಬಂದೆ."

ಅವನೇನೂ ಮಾತನಾಡಲಿಲ್ಲ. ಕನಕ ಕ್ಲಾತ್ ಸ್ಟ್ಯಾಂಡಿನ ಬಳಿ ಹೋಗಿ ಕೋಟು ನೇತುಹಾಕಿ ಬಂದು ಪುನಃ ಕುಳಿತುಕೊಂಡಳು.

"ನಿಮ್ಮ ಸ್ನೇಹಿತರಾರೂ ಕಂಡುಬರುವುದಿಲ್ಲವಲ್ಲ"

"ಇಲ್ಲ. ಅವರುಗಳೆಲ್ಲೋ ಹೊರಗೆ ಹೋಗಿದ್ದಾರೆ"

ಶಂಕರ ಮಾತಿಗಷ್ಟೇ ಉತ್ತರ ಹೇಳಿದ. ಅವನ ಮುಖದಲ್ಲಿ, ನಡತೆಯಲ್ಲಿ ಯಾವ ಪ್ರತಿಕ್ರಿಯೆಯೂ ಕಂಡುಬರಲಿಲ್ಲ. ಭಾವರಹಿತವಾದ ಶಿಲಾ ವಿಗ್ರಹದಂತೆ ಕುಳಿತಿದ್ದ.

ಅವಳು ಮೇಲೆದ್ದಳು. ಅವನ ಕಡೆ ನೋಡಿ ಹೇಳಿದಳು.

"ಸರಿ. ನಾನು ನಿಮ್ಮ ಕೋಟು ಕೊಟ್ಟುಹೋಗುವುದಕ್ಕಾಗಿ ಬಂದೆ. ಬಂದ ಕೆಲಸವಾಯಿತು. ಹೊರಡುತ್ತೇನೆ."

"ಹೂಂ"

ಕನಕ ಆ ಉತ್ತರವನ್ನು ನಿರೀಕ್ಷಿಸಿರಲಿಲ್ಲ. ಅದೇನು ಕಲ್ಲಿನಿಂದಲೇ ಮಾಡಿದ್ದೋ ರಕ್ತಮಾಂಸಗಳೇನಾದರೂ ಬೆರೆತಿವೆಯೋ ನೋಡೋಣವೆಂದು ಅವನ ಕಡೆಗೆ ನೋಡಿದಳು. ಅವನು ಅವಳ ಕಡೆಯೇ ನೋಡುತ್ತಿದ್ದ ದೃಷ್ಟಿಗಳು ಕೂಡಿದುವು. ಕೂಡಿದ್ದವು. ಆದರೆ ಅಲ್ಲಿ ನಿಲ್ಲಲು ಅವಳಿಗೆ ಅವಕಾಶವೇ ಇರಲಿಲ್ಲ. ಬಹಳ ಕಷ್ಟದಿಂದ ದೃಷ್ಟಿಯನ್ನು ಕಿತ್ತು ಹಿಂತಿರುಗಿದಳು.

ಬಾಗಿಲವರೆವಿಗೆ ಹೋದಳು.

[೧೬]

"ಕನಕ. ಸ್ವಲ್ಪ ನಿಂತುಕೋ."

ಕನಕ ನಿಂತುಕೊಂಡಳು. ಅಷ್ಟೇ ಅಲ್ಲ. ಬಾಗಿಲು ಸೇರಿಸಿ ಚಿಲುಕ ಹಾಕಿದಳು. ಬಂದು ಎದುರು ಹಾಸಿಗೆಯ ಮೇಲೆ ಕುಳಿತುಕೊಂಡಳು. ಶಂಕರ ನೋಡಿದ. ಅವಳು ಮುಖಕ್ಕೆ ಪೌಡರ್ ಆಗಲಿ, ತುಟಿಗಳಿಗೆ ಬಣ್ಣ ವಾಗಲೀ ಹಾಕಿಕೊಂಡಿರಲಿಲ್ಲ. ಮುಖ ಮಂಕಾಗಿತ್ತು. ಪ್ರಕಾಶರಹಿತ ವಾಗಿತ್ತು.

ಆದರೂ ಬಂದು ಕುಳಿತುಕೊಂಡಾಗ ಅವಳ ಮುಖವು ಕಳೆಗೊಂಡಿತು.

"ಆ ದಿನ ಏನೋ ಆಗಿಹೋಯಿತು. ನನಗೆ ಜ್ಞಾನವೇ ಸರಿಯಾಗಿರಲಿಲ್ಲ. ನಾನೇನು ಹೇಳಿದೆನೋ ಅವೊಂದನ್ನೂ ಹೇಳಬೇಕೆಂದಿರಲಿಲ್ಲ. ವಿಷಘಳಿಗೆ ಅಂತಾರಲ್ಲ, ಅಂತಹ ಘಳಿಗೆ."

"ಪರವಾಯಿಲ್ಲ, ಬಿಡು."

"ನೀವೆಷ್ಟೋ ಉದಾರಮತಿಗಳು. ಆದರಿಂದಲೇ ಹಾಗೆ ಹೇಳು ತ್ತೀರಿ. ಒಟ್ಟಿನಲ್ಲಿ "ಕ್ಷಮಿಸಿದ್ದೇನೆ" ಎಂಬ ಮಾತು ಕೇಳಿದರೆ ನನ್ನ ಮನ ಸ್ಸಿಗೆಷ್ಟೋ ಸಂತೋಷವಾಗುತ್ತದೆ."

ಶಂಕರ ನಗುತ್ತಾ ಹೇಳಿದ.

"ಕ್ಷಮಿಸಿದ್ದೇನೆ, ಕನಕ"

"ನಾನು ನಿಮ್ಮೊಂದಿಗೆ ಮಾತನಾಡಬೇಕೆಂದೇ ಬಂದೆ. ಯಾರೂ ಇಲ್ಲ ದಾಗ ಬಂದು ಹೇಳಬೇಕೆಂದು ಕೃಷ್ಣನಿಗೆ ಹೇಳಿದ್ದೆ. ಅವನು ತಿಳಿಸಿದ ಕೂಡಲೇ ಬಂದೆ."

ಆಸಕ್ತಿಯಿಂದ ಶಂಕರ ಕೇಳಿದ.

"ಏನು ಮಾತು ?"

"ಇರಲಿ. ಹೇಳುತ್ತೇನೆ. ಅದಕ್ಕಿಂತ ಮೊದಲು ನನ್ನದೊಂದು ಪ್ರಾರ್ಥನೆ ಇದೆ."

"ಏನು ?"

"ಇಲ್ಲಿ ಬಂದು ನನ್ನ ಪಕ್ಕದಲ್ಲಿ ಕುಳಿತುಕೊಳ್ಳಿ."

ಅವನು ಕುಳಿತಲ್ಲಿಯೇ ಕುಳಿತಿದ್ದ.

"ಯಾಕೆ ಸಂಕೋಚಪಡುತ್ತೀರಿ ? ನಾನು ಸ್ಪರ್ಶ ಸಹ ಮಾಡುವುದಿಲ್ಲ. ಬಂದು ಪಕ್ಕದಲ್ಲಿ ಕುಳಿತುಕೊಳ್ಳಿ."

ವಿಧಿಯಿಲ್ಲದೇ ಬಂದು ಅವಳ ಪಕ್ಕದಲ್ಲಿ ಕುಳಿತುಕೊಂಡ. ಅವಳ ಶರೀರವು ಕಂಪಿಸುತ್ತಿರುವುದನ್ನು, ಅವಳ ಕೈಗಳು ನಡಗುತ್ತಿರುವುವನ್ನು ಗಮನಿಸಿದ.

"ನಾನೇನೋ ಮಾತನಾಡಲು ಬಂದುದಾಗಿ ಹೇಳಿದೆನಲ್ಲಾ. ಹೇಳುತ್ತೇನೆ, ಕೇಳಿ. ನಾನು ಹೇಳುವ ಪ್ರತಿ ಮಾತು, ಪ್ರತಿ ಶಬ್ದವನ್ನೂ ನಂಬಿ."

ಅವಳ ಮಾತಿಗೇನಾದರೂ ಉತ್ತರ ಹೇಳಬೇಕೆಂದು ಅವನಿಗಿತ್ತು. ಆದರೆ ಮಾತನಾಡಲಾಗಲಿಲ್ಲ. ಅವಳ ಮಾತಿನಿಂದ ಮನಸ್ಸಿನಲ್ಲಿ ಉದ್ಭವಿಸಿದಂತಹ ಭಾವಗಳನ್ನು ಹೊರಗೆಡಹಲು ತಕ್ಕ ಶಬ್ದಗಳು ಅವನಿಗೆ ತೋರಲಿಲ್ಲ.

"ನಾನು ನಿಮ್ಮಲ್ಲಿ ಮಾತನಾಡಬೇಕಾದ ವಿಷಯ ಬಹಳ ಮುಖ್ಯವಾದುದು.''

ಅಲ್ಲಿಗೂ ಅವನು ಮಾತನಾಡಲಿಲ್ಲ.

"ಹೂಂ-ಎನ್ನಿ"

"ಹೂಂ"

"ಮೊದಲು ನಾನು ನಿಮ್ಮನ್ನು ಅಪೇಕ್ಷಿಸಿದ್ದು ನಿಮ್ಮ ಮೇಲಿನ ಪ್ರೀತಿಗಾಗಿ ಅಲ್ಲ. ಮನಸ್ಸಿನಲ್ಲಿರುವುದನ್ನು ಇದ್ದಂತೆ ಹೇಳಿಬಿಡುತ್ತೇನೆ. ನೀವು ಏನು ಬೇಕಾದರೂ ತಿಳಿದುಕೊಳ್ಳಿ. ನಾನು ನಿಮ್ಮನ್ನು ಅಪೇಕ್ಷಿಸಿದ್ದು ಹಣಕ್ಕಾಗಿ. ನಾನು ಮೊದಲಿನಿಂದಲೂ ಹಾಗೆಯೇ ಮಾಡುತ್ತಿದ್ದೆನು. ಈಗಲೂ ಹಾಗೆಯೇ ಮಾಡಿದೆ. ನೀವು ಹೋಗುತ್ತಿದ್ದಾಗ ನಿಮ್ಮ ಮೇಲೆ ರೇಗಿ ಮಾತನಾಡಿದೆನಷ್ಟೆ. ಆ ಮೇಲೆ ಅದು ನನ್ನ ಮೇಲೆ ನನಗೇ ಬಂದ ಕೋಪನೆಂದೂ ನಿಮ್ಮ ಮೇಲಿನ ಕೋಪವಲ್ಲನೆಂದೂ ಗೊತ್ತಾಯಿತು. ನೀವು ನನ್ನೊಡನೆ ಇದ್ದಾಗ ನಿಮ್ಮನ್ನು ನಾನು ಪ್ರೀತಿಸುತ್ತಲೇ ಇದ್ದೆ. ಆದರೆ ಹಾಗೆ ಪ್ರೀತಿಸುತ್ತಿದ್ದುದು ನನಗೆ ಗೊತ್ತಾಗಿರಲಿಲ್ಲ. ನೀವು ಹೋದ ನಂತರ ಗೊತ್ತಾಯಿತು ಬೀದಿಯ ಹೆಣ್ಣು ಯಾವನನ್ನಾದರೂ ಪ್ರೀತಿಸುವುವೆಂದರೇನು-ಎಂದು ನನಗೆ. ನಾನೇ ನಕ್ಕೆ. ಆದರೆ ನಗುವುದರಿಂದ ಏನೂ ಹೆಚ್ಚು ಕಡಿಮೆಯಾಗಲಿಲ್ಲ. ನನ್ನ ಮನೆಗೆ ಯಾರೋ ಗಿರಾಕಿಯು ಬಂದಿತು. ನಿಮ್ಮನ್ನು ಮರೆತು

ನನ್ನ ವೃತ್ತಿಯನ್ನು ಮುಂದುವರಿಸಲು ಅದರಿಂದ ಅನುಕೂಲವಾಗುತ್ತ ದೆಂದುಕೊಂಡೆ. ಅದೂ ಆಗಲಿಲ್ಲ. ಇವೆಲ್ಲಾ ನಂಬುವುದಕ್ಕಾಗದಂತಹ ವಿಚಿತ್ರವಾದ ಅನುಭವಗಳು. ಆದರೆ ಅಷ್ಟೂ ನಿಜ"

ಅವನು ಸುಮ್ಮನಿದ್ದ. ಅವಳು ಮುಂದುವರಿಸಿದಳು.

"ಗಿರಾಕಿ ಮನೆಗೆ ಬಂದರೆ ನನಗೆ ಭಾಗ್ಯಲಕ್ಷ್ಮಿ ಬಂದಂತೆ ಆಗುತ್ತಿತ್ತು. ಆದರೆ ಈ ಬಾರಿಯಂತೂ ಪಶುವೊಂದು ನನ್ನನ್ನು ಬಲಾತ್ಕಾರದಿಂದ ಉಪ ಭೋಗಿಸುವುದಕ್ಕಾಗಿ ಬಂದಂತೆ ಭಾಸವಾಯಿತು. ಹಣ. ಗಿರಾಕಿ ಕೊಡುವ ಹಣ. ನಾನು ಕೂಗಿಕೊಳ್ಳದಂತೆ ಬಾಯಿಗೆ ತುರುಕುವ ಬಟ್ಟೆಯಂತೆ ಭಾಸ ವಾಯಿತು. ನನ್ನ ಅನುಭವವನ್ನೇ ಹೇಳುತ್ತೇನೆ. ನೀವು ನನ್ನೊಂದಿ ಗಿದ್ದ ಹದಿನಾಲ್ಕು, ಹದಿನಾರು ಗಂಟೆಗಳು ನನ್ನ ಜೀವನವನ್ನೇ ಪರಿವರ್ತಿ ಸಿದ ಗಂಟೆಗಳಾದುವು"

"————————"

"ಇದೆಲ್ಲದರ ಅರ್ಥವೇನು, ಬಲ್ಲಿರಾ ?"

"ಏನು ?"

"ನಾನು ನಿಮ್ಮನ್ನು ಪ್ರೀತಿಸುತ್ತಿದ್ದೇನೆ"

"ಆ—ನನ್ನನ್ನು ಪ್ರೀತಿಸುತ್ತೀಯಾ ?"

"ಹೌದು"

"ಮೊದಲೂ ನೀನು ಅದೇ ರೀತಿಯಾಗಿ ಹೇಳಿದ್ದೆ, ಕನಕ"

"ಹೇಳಿದ್ದೆ. ಆದರೆ ಆಗ ಅರ್ಥವಾಗದೇ ಹೇಳಿದ್ದೆ. ಈಗ ಚೆನ್ನಾಗಿ ಅರ್ಥ ಮಾಡಿಕೊಂಡು ಹೇಳುತ್ತಿದ್ದೇನೆ"

"ಈಗ ಅರ್ಥ ಮಾಡಿಕೊಂಡು ಹೇಳುತ್ತಿದ್ದೇನೆ !"

ಆ ಮಾತನ್ನವನು ನಂಬಬೇಕೆಂದುಕೊಂಡ. ಆದರೆ ನಂಬುವುದಕ್ಕೆ ಕಷ್ಟವಾಗುತ್ತಿತ್ತು. ಅವನ ಮನೋಭಿಲಾಷೆಗಳನ್ನೆಲ್ಲಾ ಈಡೇರಿಸುವಂ ತಹ ಆ ಮಾತುಗಳನ್ನು ನಂಬಲು ಕಷ್ಟವಾಗುತ್ತಿತ್ತು.

"ಹೌದು. ಈಗ ಸರಿಯಾಗಿ ಅರ್ಥ ಮಾಡಿಕೊಂಡು ಹೇಳುತ್ತಿ ದ್ದೇನೆ. ಮೊದಲಿನಿಂದಲೂ ನಿಮ್ಮ ಮೇಲೆ ನನಗೆ ಪ್ರೇಮವಿದ್ದೇ ಇದ್ದಿತು. ಆದರೆ ಅದನ್ನು ತಿಳಿದುಕೊಳ್ಳಲಾರದೇ ಹೋಗಿದ್ದೆ. ಒಂದು ಬಾರಿ ಒಂದು

ಬಾರಿ, ನೀವೂ ನನ್ನನ್ನು ಪ್ರೀತಿಸುತ್ತಿರುವುದಾಗಿ ಹೇಳಿ. ಅದರಿಂದ ನನ್ನ ಮನಸ್ಸಿಗೆ ಎಷ್ಟೋ ಸಂತೋಷವಾಗುತ್ತದೆ."

ಸ್ವಲ್ಪ ಹೊತ್ತು ತಡೆದು ನಿದಾನವಾಗಿ ಅವನು ಹೇಳಿದ.

"ನಾನು ನಿನ್ನನ್ನು ಪ್ರೀತಿಸುತ್ತಲೇ ಇದ್ದೇನೆ, ಕನಕ. ನಿನ್ನ ಮೇಲಿನ ಪ್ರೇಮವನ್ನು ನಾನು ಕಡಿದುಹಾಕಲಾರದವನಾಗಿದ್ದೇನೆ."

ಆ ಮಾತು ಕೇಳಿ ಕನಕ ಹರ್ಷೋದ್ಗಾರ ಮಾಡಿದಳು. ಅವಳ ದೇಹವೇ ಅವನ ಕಡೆಗೆ ಸರಿಯತೊಡಗಿತು. ಆದರೆ ಅಷ್ಟರಲ್ಲಿ ಶಂಕರ ಮಾತನಾಡತೊಡಗಿದ. ಮಾತಿನ ಅರ್ಥವು ಅವಳನ್ನು ತಡೆಯಿತು.

"ನಾನು ನಿನ್ನನ್ನು ಪ್ರೀತಿಸುತ್ತೇನೆ, ಕನಕ. ಆದರೆ ನೀನು ಮಾಡುತ್ತಿದ್ದ ಜೀವನವನ್ನು ನಾನು ಮರೆಯಲಾರೆ. ನಿನ್ನ ಹಾಗೆ ಬದುಕಿದ್ದವಳು ಎಂದಾದರೂ ಯಾರನ್ನಾದರೂ ಪ್ರೀತಿಸಬಲ್ಲಳೇ ಎಂದು ನನಗೆ— — —"

ಸ್ಪಷ್ಟವಾಗಿ ಹೇಳಿ. ಅಂತ ನಿಮಗೆ ಸಂದೇಹ, ಅಲ್ಲವೇ? ಪ್ರೇಮವೇ ಈ ಗತಿಗೆ ತಂದಿತು. ಇಲ್ಲದಿದ್ದರೆ ನಾನೂ ಎಲ್ಲರಂತೆಯೇ ಮದುವೆ ಮಾಡಿಕೊಂಡು ಗಂಡನೊಡನೆ ಸಂಸಾರ ಮಾಡಿಕೊಂಡು ಇರುತ್ತಿದ್ದೆ. ನೀವು ಆ ದಿನ ನನ್ನ ಕತೆಯೇನು, ನಾನು ಈ ವೃತ್ತಿಗೆ ಇಳಿದುದು ಹೇಗೆ ಎಂದು ಕೇಳಿದಿರಿ. ಆ ಹೊತ್ತು ನಾನು ಹೇಳಲಿಲ್ಲ. ಈ ದಿನವೇಕೋ ಮನಸ್ಸಿನಲ್ಲಿರುವುದನ್ನೆಲ್ಲಾ ತೋಡಿಕೊಳ್ಳಬೇಕು ಎನ್ನಿಸುತ್ತದೆ. ಇದುವರೆವಿಗೆ ನನ್ನ ವಾಸ್ತವವಾದ ಕತೆಯನ್ನು ಯಾರಿಗೂ ಹೇಳಿಲ್ಲ"

ಕನಕಳಾಡಿದ ಪ್ರತಿ ಶಬ್ದವೂ ಹೃದಯದಿಂದ ನೇರವಾಗಿ ಹೊರಗೆ ಬರುತ್ತಿರುವಂತೆ ಭಾಸವಾಗುತ್ತಿತ್ತು. ಶಂಕರ ಮೈಯೆಲ್ಲಾ ಕಿವಿಯಾಗಿ ಅವಳು ಹೇಳುವುದನ್ನೇ ಕೇಳತೊಡಗಿದ.

"ನನ್ನದು ಮೈಸೂರಿನ ಹತ್ತಿರ ಒಂದು ಹಳ್ಳಿ. ಹಳ್ಳಿಯೇನು ಮೈಸೂರೇ ಅನ್ನಿ. ಈಗ ಅವೆಲ್ಲಾ ಊರಿಗೆ ಸೇರಿಹೋಗಿವೆ. ನಾನಾವ ಜಾತಿ, ನನ್ನ ತಾಯಿತಂದೆಗಳಾರು ಎಂಬುದನ್ನು ಕೇಳಬೇಡಿ. ಅದನ್ನು ಹೇಳಿ ಅವರನ್ನು ಅವಮಾನ ಪಡಿಸಲು ನನಗೆ ಇಷ್ಟವಿಲ್ಲ. ಅಂತೂ ಬಡತನದಿಂದ ಕೂಡಿದ್ದರೂ ಗೌರವವಾಗಿ ಬದುಕಿದ್ದ ಒಂದು ಕುಟುಂಬಕ್ಕೆ ಸೇರಿದ

ವಳು ನಾನು. ನಮ್ಮ ತಂದೆ ಪ್ರೈಮರಿಸ್ಕೂಲು ಮೇಷ್ಟರು. ಬರುವ ಸಂಬಳ ಸಾಲದೆಂದು ಮನೆಯಲ್ಲಿ ಒಂದೆರಡು ಎಮ್ಮೆಗಳನ್ನು ಕಟ್ಟಿದ್ದೆವು.

"ಸಾಧಾರಣವಾಗಿ ನಾನೇ ಹಾಲು ತೆಗೆದುಕೊಂಡು ಹೋಗಿ ಕೊಟ್ಟುಬರುತ್ತಿದ್ದೆ. ಮೂರು ನಾಲ್ಕು ಮನೆಗಳಿಗೆ ಹಾಲುಕೊಟ್ಟು ಬಂದರೆ ನನ್ನ ಕೆಲಸ ತೀರಿತು. ಅದರಲ್ಲಿ ಒಂದು ಮನೆ. ಮೊದಲು ಆ ಮನೆಯಲ್ಲಿ ಬೇಕಾದಷ್ಟು ಮಂದಿ ಹೆಂಗಸರು ಮಕ್ಕಳಿರುತ್ತಿದ್ದರು. ಅವರೆಲ್ಲಾ ಬಿಟ್ಟುಹೋಗಿ ಕಡೆಯಲ್ಲಿ ಒಬ್ಬನೇ ಒಬ್ಬ ಅಲ್ಲಿ ಉಳಿದ. ಇವನು ಯಾವುದೋ ಕೋಣೆಯಲ್ಲಿ ಬಾಡಿಗೆಗೆ ಇದ್ದು ಅವರು ಮನೆ ಬಿಟ್ಟು ಹೋಗಿ ಇವನು ಉಳಿದಿರಬೇಕು, ಅಥವಾ ಯಾವುದೋ ಕಾರಣದಿಂದ ಮನೆಯವರೆಲ್ಲಾ ಹೊರಟುಹೋಗಿ ಇವನು ಒಬ್ಬ ಮಾತ್ರ ಇದ್ದನೋ? ಅದು ನನಗೆ ಸರಿಯಾಗಿ ನೆನಪಿಲ್ಲ. ಮನುಷ್ಯ ತನಗಾವುದು ಪ್ರಿಯವಾದುದೋ, ತನಗಾವುದು ಬೇಕಾಗಿರುತ್ತದೆಯೋ ಅಂತಹ ವಿಷಯವನ್ನು ಕುರಿತು ಹೆಚ್ಚಾಗಿ ಆಲೋಚಿಸುವುದಿಲ್ಲ.

"ಒಂಟಿಯಾಗಿ ಆ ಮನೆಯಲ್ಲಿದ್ದವನ ಹೆಸರು ಶ್ರೀನಿವಾಸರಾವ್ ಅಂತ. ಮೊದಲು ಮೂರುನಾಲ್ಕು ದಿನ ಹಾಲು ತೆಗೆದುಕೊಂಡು ಹೋದವಳು ಕೂಗಿ, ಅವನನ್ನು ಎಬ್ಬಿಸಿ ಹಾಲು ಕೊಟ್ಟು ಬರಬೇಕಾಗಿತ್ತು. ಅದರಿಂದ ಮಿಕ್ಕ ಮನೆಗಳೆಲ್ಲಕ್ಕೂ ಹಾಲು ಕೊಟ್ಟು ಅನಂತರ ಈ ಮನೆಗೆ ಬರುತ್ತಿದ್ದೆ.

"ಒಬ್ಬನೆ ಇದ್ದರೂ ಮುಕ್ಕಾಲು ಸೇರು ಹಾಲು ತೆಗೆದುಕೊಳ್ಳುತ್ತಿದ್ದ. ಕಡೆಯ ಮನೆಯಾದುದರಿಂದ ಹೊರಟು ಹೋಗಲು ನನಗೂ ಹೆಚ್ಚು ಅವಸರವಿರುತ್ತಿರಲಿಲ್ಲ. ಅವನು ಏನಾದರೂ ಸಣ್ಣ ಪುಟ್ಟ ಕೆಲಸ ಹೇಳುತ್ತಿದ್ದ. ಮಾಡಿಕೊಡುತ್ತಿದ್ದೆ. "ಏನಾದರೂ ಕೊಡುತ್ತೇನೆ. ಸ್ವಲ್ಪ ಮನೆ ಗುಡಿಸಿಕೊಡುತ್ತೀಯಾ?" ಎಂದು ಒಂದು ದಿನ ಬೇಡಿಕೊಂಡಂತೆ ಕೇಳಿದ. ಒಪ್ಪಿಕೊಂಡೆ. ಕೊಡುತ್ತೇನೆ, ಅನ್ನದಿದ್ದರೂ ಒಪ್ಪಿಕೊಳ್ಳುತ್ತಿದ್ದೆ. ಮನೆ ಗುಡಿಸಿ ಕೊಟ್ಟರೆ ಏನು ಹೋಗುತ್ತದೆ?

"ಮನೆಯೆಲ್ಲಾ ಕಸ. ಅಡಿಗೆ ಮನೆಯಲ್ಲೆಲ್ಲಾ ಬಹಳ ದಿನ ತೊಳೆಯದೇ ಹಾಕಿದ್ದ ಪಾತ್ರೆಗಳು. ಮನೆಯೆಲ್ಲಾ ಗುಡಿಸಿ, ಪಾತ್ರೆಗಳನ್ನು ಬೆಳಗಿ ಹೋಗಬೇಕಾದರೆ ಆ ದಿನ ಹತ್ತು ಗಂಟೆಯಯಿತು. ಯಾರ ಮನೆಯಲ್ಲಿಯೋ ಕೆಲಸ ಹೇಳಿದರೆಂದು ಹೇಳಿದೆ. ಮನೆಯಲ್ಲಿ ನಮ್ಮಮ್ಮ ಏನೂ ಅನ್ನಲಿಲ್ಲ.

"ಆ ದಿನದಿಂದ ನನಗೂ ಶ್ರೀನಿವಾಸರಾಯನಿಗೂ ಹೆಚ್ಚು ಪರಿಚಯ ವಾಯಿತು. ದಿನವೂ ನಾನು ಬೆಳಗಾಗ ಹೋಗುತ್ತಲೂ ಹೆಚ್ಚಾಗಿ ಮಾತ ನಾಡಿಸುತ್ತಿದ್ದ. ಏನಾದರೂ ಒಂದು ಕೆಲಸ ಹೇಳುತ್ತಿದ್ದ. ಕಾಫೀ ಕಾಸು ವುದಕ್ಕೆ ಹೇಳಿ ಪಕ್ಕದಲ್ಲಿ ಕುಳಿತು ಮಾತನಾಡುತ್ತಿದ್ದುದೂ ಉಂಟು. ಆತನೇ ನನಗೆ ಕಾಫೀ ಮಾಡಲು ಹೇಳಿಕೊಟ್ಟವನು.

"ಒಂದೆರಡು ದಿನಗಳು ಕಳೆಯುವುದರೊಳಗಾಗಿ ನನಗೂ ಅವನಲ್ಲಿ ಸಲಿಗೆ ಉಂಟಾಯಿತು. ಸದಾ ಅವನನ್ನು ನೋಡುತ್ತಿರಬೇಕು. ಅವನೊ ಡನೆ ಮಾತನಾಡುತ್ತಿರಬೇಕು—ಎಂದೆನಿಸುತ್ತಿತ್ತು. ಒಮ್ಮೆ ಅವನೊಂದಿಗೆ ಈ ವಿಷಯ ಹೇಳಿದೆ. ಅದಕ್ಕವನು "ಅದೇ ಪ್ರೇಮ. ನಾನು ನಿನ್ನನ್ನು ಪ್ರೀತಿಸುತ್ತಿರುವಂತೆಯೇ ನೀನೂ ನನ್ನನ್ನು ಪ್ರೀತಿಸುತ್ತಿದ್ದೀಯೆ" ಎಂದು ಹೇಳಿದ.

"ಆ ದಿನವೇ ಅವನು ನನಗೆ ಪ್ರೇಮದ ಪರಿಚಯ ಮಾಡಿಕೊಟ್ಟ. ಮನೆಗೆ ಹೋಗುತ್ತಾ ಏನೋ ತಪ್ಪು ಮಾಡಿದೆನೆಂದು ತೋರುತ್ತಿತ್ತು. ಮಾರನೆಯ ದಿನ ಅವನ ಮನೆಗೇ ಹೋಗಬಾರದೆಂದುಕೊಂಡೆ. ಆದರೆ ಹಾಗೆ ಹೋಗದೇ ಇರಲು ಆಗಲೇ ಇಲ್ಲ. ದಿನವೂ ತಪ್ಪೇ ಮಾಡುತ್ತಿದ್ದೆ. ಮನಸ್ಸಿಗೆ ಪ್ರಿಯವಾದ ತಪ್ಪು ಮಾಡುತ್ತಿದ್ದೆ.

"ಎಂಟು ದಿನಗಳಲ್ಲಿ ರಗಳೆಗಿಟ್ಟುಕೊಂಡಿತು, ನಾನು ಆ ಮನೆಗೆ ಹಾಲು ತೆಗೆದುಕೊಂಡು ಹೋಗುವಾಗ, ವಾಪ್ಸು ಮನೆಗೆ ಹೋಗುವಾಗ ಅಕ್ಕಪಕ್ಕದ ಮನೆಗಳವರು ನಿಂತು ನೋಡತೊಡಗಿದರು. ಬೀದಿ ತಿರುಗು ವಾಗ ಯಾರೋ ಕೆಲವರು ಯುವಕರು ನಿಂತು ನೋಡುತ್ತಾ ನಕ್ಕರು.

"ನಾನು ವಿಷಯ ಶ್ರೀನಿವಾಸರಾಯನಿಗೆ ಹೇಳಿದೆ. ಅವನೂ ಅವೆಲ್ಲ ವನ್ನೂ ಗಮನಿಸಿದ್ದ. "ನಮ್ಮ ಗುಟ್ಟು ರಟ್ಟಾಗಿ ಹೋಯಿತು" ಎಂದು ಹೇಳಿದ. ಮೊದಲು ಆ ಮನೆಗೆ ಹಾಲು ಕೊಡುವುದನ್ನು ನಿಲ್ಲಿಸಿಬಿಡೋಣವೇ ಎಂದು ತೋರಿತು. ಒಂದು ವೇಳೆ ಹಾಗೆ ಮಾಡಿದರೆ ನಮ್ಮಪ್ಪನೋ ಅಮ್ಮನೋ ಯಾಕೆ ಆ ಮನೆಗೆ ಹಾಲು ನಿಂತುಹೋಯಿತು ಎಂದು ನೋಡು ವುದಕ್ಕೆ ಬರುತ್ತಾರೆ. ಅಕ್ಕಪಕ್ಕದ ಮನೆಯವರು ಏನಾದರೂ ಹೇಳಿ ಅವರಿಗೆ ಗೊತ್ತಾಯಿತೋ ಬಲಿ ಹೊಡೆಯುತ್ತಾರೆ. ಅದು ಹೇಗಾದರೂ ಇರಲಿ,

ಆ ಮನೆಗೆ ಹೋಗದೇ ಇರುವುದು, ಶ್ರೀನಿವಾಸರಾಯನನ್ನು ನೋಡದೇ ಇರುವುದು ಎಂದರೆ ನನಗೆ ಸಾಧ್ಯವೇ ಇರಲಿಲ್ಲ.

"ಈ ಸಂದರ್ಭದಲ್ಲಿ ಅವನೊಂದು ಸಲಹೆ ಮಾಡಿದ. ನಾನೊಪ್ಪುವುದಾದರೆ ಬೇರೇ ಊರಿಗೆ ಕರೆದುಕೊಂಡು ಹೋಗುವುದಾಗಿ ಹೇಳಿದ. ಅಲ್ಲಿ ಯಾರ ಭಯವೂ ಇಲ್ಲದೇ ಸುಖವಾಗಿ ಬದುಕಬಹುದೆಂದು ಹೇಳಿದ. ನನಗೂ ಒಪ್ಪಿಗೆಯಾಯಿತು. ಆ ಊರಿನಿಂದ ಹೊರಟು ಬಂದೆವು.

"ನಾವು ಬಂದುದು ಬೆಂಗಳೂರಿಗೆ. ಅಲ್ಲಿ ಹೋಟಲೊಂದರಲ್ಲಿ ಇಳಿದುಕೊಂಡೆವು, ಎಂಟು ಹತ್ತು ದಿನ ಸ್ವರ್ಗವೇ ಭೂಮಿಗಿಳಿದು ಬಂದಿದೆಯೋ ಎಂಬಂತೆ ಇದ್ದುವು. ಮೈಸೂರಿನಿಂದ ಹೊರಡುವಾಗಲೇ ನನಗೊಂದು ವಾಯಲ್ ಸೀರೆಯನ್ನು ತಂದುಕೊಟ್ಟಿದ್ದ. ಬೆಂಗಳೂರಿನಲ್ಲಿ ಇನ್ನೂ ಮೂರು ನಾಲ್ಕು ಸೀರೆಗಳನ್ನೂ, ಜಾಡಿಗಳನ್ನೂ, ಪೆಟ್ಟೀಕೋಟುಗಳನ್ನೂ ತೆಗೆದು ಕೊಟ್ಟ. ಸ್ನೋ, ಪೌಡರ್‌ಗಳನ್ನು ತಂದುಕೊಟ್ಟ. ಹೋಟಲಿನಲ್ಲಿ ಬೇಕಾದಾಗ ತಿಂಡೀ, ಊಟಗಳು ಬರುತ್ತಿದ್ದುವು. ಅಲ್ಲಿ ಬೇಜಾರಾದಾಗ ಹೊರಗಡೆ ಹೋಗಿ ತೆಗೆದುಕೊಳ್ಳುತ್ತಿದ್ದೆವು. ತೋರಿದಾಗ ತಿರುಗಾಡಲು ಹೋಗುತ್ತಿದ್ದೆವು. ಸಿನಿಮಾಗಳಿಗೆ ಹೋಗುತ್ತಿದ್ದೆವು.

"ಎಲ್ಲದಕ್ಕಿಂತಲೂ ಹೆಚ್ಚಾಗಿ ಯಾರ ಭಯ ಹೆದರಿಕೆಗಳೂ ಇಲ್ಲದೇ ದಿನವೆಲ್ಲಾ ಅವನ ಪಕ್ಕದಲ್ಲಿ ಮಲಗಿಕೊಂಡು ಮಾತನಾಡುತ್ತಾ ಇರಬಹುದಾಗಿತ್ತು.

"ಎಂಟು ಹತ್ತು ದಿನಗಳ ನಂತರ ಒಂದು ದಿನ ತನ್ನ ಹತ್ತಿರ ದುಡ್ಡು ತೀರಿದೆ ಎಂದೂ ಊರಿಗೆ ಹೋಗಿ ತರುವುದಾಗಿಯೂ ಒಂದೇ ದಿನದಲ್ಲಿ ವಾಪ್ಸು ಬರುವುದಾಗಿಯೂ ಹೇಳಿ ಹೋದ. ಹೋದವನು-ಒಂದಾಯಿತು, ಎರಡಾಯಿತು, ಎಂಟು ದಿನವಾಯಿತು-ವಾಪ್ಸು ಬರಲೇ ಇಲ್ಲ. ವಾಪ್ಸು ಬರುವುದಿಲ್ಲವೆಂದು ನನ್ನ ಮನಸ್ಸಿಗೆ ತೋರಲು ಮೊದಲಾಯಿತು.

"ನನ್ನ ಕೈಯಲ್ಲಿದ್ದ ಚಿಲ್ಲರೆ ಹಣ ಮುಗಿಯಿತು. ಹೋಟಲಿನವನು ರೂಂ ಬಾಡಿಗೆ ಮತ್ತು ಊಟ ತಿಂಡಿಗಳ ಹಣವನ್ನು ಕೇಳತೊಡಗಿದ. ನನಗೆ ದಿಕ್ಕೇ ತೋರದಂತೆ ಆಯಿತು.

ಆ ಹೋಟಲಿನಲ್ಲಿ ಐದಾರು ಮಂದಿ ಹುಡುಗಿಯರು ರೂಂಗಳನ್ನು

ಮಾಡಿಕೊಂಡಿದ್ದರು. ಅವರೆಲ್ಲಾ ನನಗೆ ಪರಿಚಯವಾದರೂ ಒಬ್ಬಳಂತೂ ಬಹಳ ಸ್ನೇಹಿತಳಾದಳು. ನನ್ನ ಕಷ್ಟ ನೋಡಿ ಕೊರಗಿದಳು. ಅವಳೇ ನನ್ನನ್ನು ಈ ವೃತ್ತಿಗೆ ಎಳೆದಳು. ಇಷ್ಟವಿಲ್ಲದಿದ್ದರೂ, ಅಸಹ್ಯವಾದರೂ ನಾನು ಇದನ್ನು ಅವಲಂಬಿಸ ಬೇಕಾಯಿತು. ಆದರೆ ಒಂದು ಒಂದೂವರೆ ತಿಂಗಳಲ್ಲಿ ಖರ್ಚು ಕಳೆದು ನನ್ನ ಕೈಯಲ್ಲಿ ಮುನ್ನೂರು, ನಾನೂರು ರೂಪಾಯಿಗಳು ಸೇರಿದುವು.

"ಒಂದು ದಿನ ಮಧ್ಯಾಹ್ನ ಮೂರು ಗಂಟೆಯಲ್ಲಿ ಕಾಫಿ ಕುಡಿದೆ. ಬೇಜಾರಾಗಿ ಹೊರಗಡೆ ಬಂದು ಹೋಟಲಿನ ವರಾಂಡದಲ್ಲಿ ನಿಂತುಕೊಂಡೆ. ಕೆಳಗೆ ಬೀದಿಯಲ್ಲಿ ನಮ್ಮ ತಂದೆ ಹೋಗುತ್ತಿರುವುದನ್ನು ನೋಡಿದೆ. ಆತ ಯಾಕೆ ಬಂದಿದ್ದರೋ ಕಾಣೆ. ನನ್ನನ್ನೇ ಹುಡುಕಿಕೊಂಡು ಬಂದು ತಿರುಗುತ್ತಿದ್ದರೋ ಏನೋ. ಅವನ್ನು ನೋಡಿದೊಡನೆಯೇ ಒಂದು ಗಳಿಗೆ ಸಹ ಅಲ್ಲಿರಲು ನನಗೆ ಸಾಧ್ಯವಿಲ್ಲ. ಎಲ್ಲಿಯಾದರೂ ದೂರ ಹೋಗಬೇಕೆಂದು ತೋರಿತು. ಅದೇ ದಿನ ಅಲ್ಲಿಂದ ಹೊರಟುಬಿಟ್ಟೆ.

"ನಾನು ಬೆಂಗಳೂರಿನಿಂದ ಬೆಳಗಾಂವರೆಗೆ ಬಂದದ್ದು ದೊಡ್ಡ ಕತೆ. ಅಂತೂ ಒಟ್ಟಿನಲ್ಲಿ ಒಂದು ಮಾತು. ನನ್ನನ್ನು ಈ ಗತಿಗೆ ತಂದುದು ಪ್ರೇಮವೇ"

ಕತೆಯನ್ನು ಮುಗಿಸುತ್ತಿದ್ದಂತೆ ಕನಕಳಿಗೆ ಆಯಾಸವಾದಂತಾಯಿತು. ಅವಳು ಹಾಸಿಗೆಯ ದಿಂಬನ್ನು ಸ್ವಲ್ಪ ಮೇಲೆ ಎಳೆದುಕೊಂಡು, ಒರಗಿ ಕುಳಿತಳು.

ಶಂಕರನನ್ನು ಮಾತ್ರವಲ್ಲ. ಅವನನ್ನೂ ಅವನು ಕುಳಿತುಕೊಂಡಿದ್ದ ಕೋಣೆಯ ವಾತಾವರಣವನ್ನೂ ಅವಳ ಕತೆ ಪ್ರಭಾವಿತವಾಗಿ ಮಾಡಿತು. ಅಲ್ಲೆಲ್ಲಾ ವಿದ್ಯುತ್ ಸಂಚಾರವಾದಂತಾಯಿತು. ಆ ಪ್ರವಾಹಕ್ಕೆ ಸಿಕ್ಕಿ ಏನು ಮಾಡುವುದಕ್ಕೂ ತೋರದವನಾಗಿ ಶಂಕರ ಸುಮ್ಮನೆ ಕುಳಿತ.

ಅವನು ಮಾತನಾಡದೇ ಇದ್ದುದನ್ನು ಗಮನಿಸಿದ ಕನಕ ಹೇಳಿದಳು.

"ನಾನು ಬಲ್ಲೆ. ನೀವು ಇನ್ನೂ ನನ್ನನ್ನು ನಂಬುತ್ತಿಲ್ಲವೆಂಬುದನ್ನು

ಬಲ್ಲೆ. ನನಗೆ ಹಣವೇ ಬಹಳ ಮುಖ್ಯವೆಂದುಕೊಂಡಿದ್ದೀರಿ. ಈಗಲೂ ನಾನು ಹಣಕ್ಕಾಗಿಯೇ ನಿಮ್ಮ ಬಳಿಗೆ ಬಂದಿದ್ದೇನೆ ಎಂದುಕೊಂಡಿದ್ದೀರಿ. ಹಾಗೆ ನೀವು ತಿಳಿದುಕೊಂಡಿದ್ದರೆ ಅದು ಶುದ್ಧ ತಪ್ಪು."

"ಹಾಗಲ್ಲ — — ಕನಕ"

"ಹಾಗೂ ಅಲ್ಲ. ಹೇಗೂ ಅಲ್ಲ. ಹಾಗೆಯೇ, ನಾನು ಬಲ್ಲೆ. ನೀವು ಕೊಟ್ಟ ಇನ್ನೂರು ರೂಪಾಯಿಗಳಲ್ಲಿ ಸ್ವಲ್ಪ ಉಳಿದಿದೆ. ಅದನ್ನು ನಿಮಗೆ ವಾಪ್ಸು ಕೊಟ್ಟು ಬಿಡುತ್ತೇನೆ. ಉಳಿದುದನ್ನು–ನಾಲ್ಕು ದಿನಗಳಲ್ಲಿ ಸಂಪಾದನೆಮಾಡಿ ವಾಪ್ಸು ಮಾಡುತ್ತೇನೆ."

"ಹಾಗೆಲ್ಲಾ ಮಾತನಾಡಬೇಡ, ಕನಕ. ಅಂತಹ ಮಾತುಗಳನ್ನು ನಾನು ಕೇಳಲಾರೆ. ನಾನು ಆ ವಿಷಯವನ್ನು ಯೋಚಿಸುತ್ತಿಲ್ಲ."

ಅರ್ಥವಾಗದೇ ಕನಕ ಪ್ರಶ್ನೆ ಮಾಡಿದಳು.

"ನಾನು ಹೇಳಿದುದರಲ್ಲಿ ನಿಮಗೆ ನಂಬಿಕೆಯುಂಟಾಗಲಿಲ್ಲವೇ ?"

"ಅದಲ್ಲ–ಕನಕ. ಬೇರೊಂದು ಮುಖ್ಯವಾದ ವಿಷಯವಿದೆ.

ಆಸಕ್ತಿಯಿಂದ ಕನಕ ನೋಡಿದಳು.

"ಅದೇನು?"

"ನಾನು ನಿನ್ನ ಮನೆಯನ್ನು ಬಿಟ್ಟು ಹೋದಾಗ ನೀನು ಅವನೊಂದಿಗೆ— — —"

ಸ್ಪಷ್ಟವಾಗಿ ಆ ಮಾತು ಕೇಳಲು ಶಂಕರನಿಂದಾಗಲಿಲ್ಲ. ಅದರೇನು? ಪ್ರಶ್ನೆಯಂತೂ ಸ್ಪಷ್ಟವಾಗಿಯೇ ಇದ್ದಿತು.

ಆ ಪ್ರಶ್ನೆಯಿಂದ ಕನಕ ಚಕಿತಳಾದಳು. ಶಂಕರನಿಗೆ ನಿಜ ಹೇಳಿಬಿಡಬೇಕೆಂದು ಅವಳಿಗೆ ಅಪೇಕ್ಷೆ ಉಂಟಾಯಿತು. ಆದರೆ ನಿಜವನ್ನು ಹೇಳಿದರೆ ಇಷ್ಟು ಹೊತ್ತೂ ಕಷ್ಟದಿಂದ ಸಾಧನೆ ಮಾಡಿದುದು ನಿಷ್ಫಲವಾಗುವುದೇನೋ ಎಂದು ಹೆದರಿಕೆಯಾಯಿತು.

ತಾನು ಶಿವಣ್ಣನೊಂದಿಗೆ ಮಲಗಿಕೊಂಡಿದ್ದುದು ಆಕಸ್ಮಿಕ. ಶಂಕರ ಆದೇ ಮನೆಯಲ್ಲಿದಿದ್ದರೆ, ಅಥವಾ ವಾಪ್ಸು ಬಂದೇಬರುತ್ತಾನೆಂದು ಭರವಸೆ ಇದ್ದಿದ್ದರೆ ಖಂಡಿತ ಹದಿನೈದು ರೂಪಾಯಿಗಾಗಿ ಅವನೊಂದಿಗೆ ಇರುತ್ತಿರಲಿಲ್ಲ. ಅವಳು ಶಂಕರನಿಗೇನಾದರೂ ಮೋಸ ಮಾಡಿದ್ದರೆ ಅದರಲ್ಲಿ ಅವಳ

ದೆಷ್ಟು ತಪ್ಪಿದೆಯೋ, ಶಂಕರನದೂ ಅಷ್ಟೇ ತಪ್ಪಿದೆ.

ಎಲ್ಲದಕ್ಕಿಂತಲೂ ಹೆಚ್ಚಾಗಿ ತನ್ನನ್ನು ತಾನು ಉಳಿಸಿಕೊಳ್ಳಬೇಕಾಗಿದ್ದಿತವಳು.

ಆತ್ಮಾರ್ಥೇ ಪೃಥಿವೀಂ ತ್ಯಜೇತ್!

"ಇಲ್ಲ. ಹಾಗೇನೂ ಇಲ್ಲ."

"ನೀನು ಹೇಳುತ್ತಿರುವುದು ನಿಜವೇ, ಕನಕ."

ಅವಳ ದೃಷ್ಟಿಯು ಅವನ ದೃಷ್ಟಿಯನ್ನು ಕೂಡಿಯೇ ಇತ್ತು. ವಶೀಕರಣ ಮಾಡುವವರು ತಮ್ಮ ದೃಷ್ಟಿಯನ್ನು ಬದಲಾಯಿಸದಿರುವಂತೆ ಅವಳೂ ಬದಲಾಯಿಸಲಿಲ್ಲ.

"ನಿಜ. ನಾನು ಹೇಳಿದುದೆಲ್ಲವೂ ನಿಜ."

ಅವನು ತನ್ನ ಕಣ್ಣುಗಳನ್ನು ಅವಳ ಕಣ್ಣುಗಳಿಂದ ಕಿತ್ತ. ಅದು ಒಂದು ಕ್ಷಣ ಮಾತ್ರ. ಆ ಸುಂದರ ಮೂರ್ತಿಯಿಂದ ದೃಷ್ಟಿಯನ್ನು ಕಿತ್ತುಕೊಳ್ಳುವುದು ಅವನಿಂದ ದುಸಾಧ್ಯವಾಗಿತ್ತು. ಅವನು ಮಾತನಾಡುವುದರಲ್ಲಿ ಅವಳ ತೋಳ್ಸೆರೆಯಲ್ಲಿ ಬಂಧಿತನಾಗಿದ್ದ.

"ನಾನು ನಿನ್ನನ್ನು ಪ್ರೀತಿಸುತ್ತೇನೆ."

ತೋಳ್ಸೆರೆಯಲ್ಲಿದ್ದವನನ್ನು ಮುದ್ದಿಸ ತೊಡಗಿದಳು. ನಡುವೆ ಅಸ್ಪಷ್ಟವಾದ ಧ್ವನಿಯಲ್ಲಿ ಹೇಳಿದಳು.

"ನೀವು ಹಾಗೆ ಹೇಳುತ್ತೀರೆಂದು ನನಗೆ ಗೊತ್ತಿತ್ತು.

"ಹಿಂದಿನದೆಲ್ಲವನ್ನೂ ಮರೆತುಬಿಡೋಣ, ಕನಕ,

"ಈ ಪ್ರಪಂಚದಲ್ಲಿ ಯಾವುದೂ ನಮ್ಮನ್ನು ಬೇರ್ಪಡಿಸಲಾರದು."

ಚುಂಬನಾಸಕ್ತಳಾಗಿದ್ದ ಅವಳು ಯಾವುದೊಂದು ಉತ್ತರವನ್ನೂ ಕೊಡಲಿಲ್ಲ. ಆದರೆ ಆ ಸಮಯದಲ್ಲಿ ಅವಳು ಮಾಡುತ್ತಿದ್ದ ಹರ್ಷೋದ್ಗಾರದಲ್ಲಿ "ಹೌದು, ಹೌದು." ಎಂಬ ಅರ್ಥವಿತ್ತು.

## ೧೧

ಮೂರನೆಯ ದಿನ ಬೆಳಗಾಗ ಮಾತನಾಡುತ್ತಾ ಶಂಕರ ತನ್ನ ಗೆಳೆಯ ರೊಡನೆ ಹೇಳಿದ.

"ನಾನು ಕಳಕನ್ನು ಮದುವೆ ಮಾಡಿಕೊಳ್ಳುತ್ತೇನೆ."

ವಾಸುದೇವ ಹೌಹಾರಿ ಬಿದ್ದವನಂತೆ ಕೇಳಿದ.

"ಆ ಕನಕಳಿಗೂ ನಿನಗೂ ಕಡಿದು ಹೋಗಿದ್ದಿತಲ್ಲ. ಪುನಃ ಅವಳು ನಿನಗೆ ಹೇಗೆ ಗಂಟು ಬಿದ್ದಳು."

"ನೀವು ಆ ಧ್ವನಿಯಲ್ಲಿ ಕೇಳಿದರೆ ನಾನು ಹೇಳುವುದು ಹೇಗೆ? ಸಮಾಧಾನವಾಗಿ ಕೇಳಿ. ಎಲ್ಲವನ್ನೂ ಹೇಳುತ್ತೇನೆ."

"ಹೇಳಪ್ಪ. ಸಮಾಧಾನವಾಗಿಯೇ ಕೇಳುತ್ತೇನೆ. ಅವಳು ನಿನಗೆ ಪುನಃ ಗಂಟು ಬಿದ್ದದ್ದು ಹೇಗೆ?"

ವಾಸುದೇವನ ಧ್ವನಿಯು ಅಣಕಿಸಿದಂತೆ ಇದ್ದಿತು. ಅದು ಶಂಕರ ನಿಗೆ ಗೊತ್ತಾಯಿತು. ಆದರೂ ಅವನು ಅವರಿಗೆ ವಿಷಯವನ್ನು ಹೇಳಿ ಮುಗಿಯ ಬೇಕಾಗಿತ್ತು. ಅವನ ಮತ್ತು ಕನಕಳ ಪ್ರೇಮ ವ್ಯವಹಾರವು ವಾಸುದೇವನಿಗೂ ಶಶಿಕಾಂತನಿಗೂ ಗೊತ್ತಿದೆ. ಏನಾದರೂ ಮಾಡಿ ಅವ ರನ್ನು ಒಪ್ಪಿಸಿಬಿಟ್ಟರೆ ಅವರ ಬಾಯಿ ಮುಚ್ಚಿಸಿದಂತಾಗುತ್ತದೆ.

ಅವರಿಗೆ ವಿರೋಧವಾಗಿ ನಡೆದುಕೊಂಡರೆ ಊರಿನಲ್ಲೆಲ್ಲಾ ಆ ವಿಷಯ ವನ್ನು ಹೇಳಿಕೊಂಡು ತಿರುಗುತ್ತಾರೆಂದು ಶಂಕರನಿಗೆ ಭಯ.

ಶಂಕರ ವಿಷಯವನ್ನೆಲ್ಲಾ ವಿವಳವಾಗಿ ತನ್ನ ಗೆಳೆಯರಿಗೆ ಹೇಳಿದ.

ಶಶಿಕಾಂತನೆದುರಿಗೆ ವಿಷಯ ಹೇಳಲು ಅವನಿಗೆ ಸಂಕೋಚವಿರಲಿಲ್ಲ. ಅಷ್ಟು ವೇಳೆಗಾಗಲೇ ಅವರಿಬ್ಬರಿಗೂ ಸ್ನೇಹವಾಗಿತ್ತು.

"ನಾನು ನಿನ್ನನ್ನು ಮಗು ಅಂತ ಕರೆಯುವುದೇಕೆಂದು ಬಲ್ಲೆಯಾ, ಶಂಕರ. ವಾಸ್ತವವಾಗಿ ನೀನು ಮಗು. ನಿನಗೆ ಸ್ವಲ್ಪವೂ ಲೋಕಾನುಭವ ವಿಲ್ಲ. ಪೆಟ್ಟು ತಿಂದರೂ ಬುದ್ಧಿ ಬರಲಿಲ್ಲ.

ಹೇಳಿದುದನ್ನು ಅರ್ಥ ಮಾಡಿಕೊಳ್ಳಲು ಇಷ್ಟವಿಲ್ಲದುದರಿಂದ ಶಂಕರ ಅದನ್ನು ಅರ್ಥ ಮಾಡಿಕೊಳ್ಳಲಿಲ್ಲ. ಅರ್ಥವಾಗದವನಂತೆ ನೋಡಿದ.

"ಅವಳು ಪುನಃ ನಿನ್ನ ಬಳಿಗೇಕೆ ಬಂದಳೆಂಬುದನ್ನು ಬಲ್ಲೆಯಾ, ಶಂಕರ. ನಿನ್ನ ಹತ್ತಿರ ಬಹಳ ದುಡ್ಡಿದೆ ಎಂದುಕೊಂಡು ಬಂದಿದ್ದಾಳೆ."

"ಅಲ್ಲ, ಹಾಗಲ್ಲ."

"ಮತ್ತೇನು?"

"ಅವಳು ನನ್ನನ್ನು ಪ್ರೀತಿಸುತ್ತಿದ್ದಾಳೆ."

"ಅದು ಕೇವಲ ನಿನ್ನ ಭ್ರಾಂತಿ."

"ನೀವು ಹೇಳಿದುದಕ್ಕೆ ವ್ಯತಿರೇಕವಾದುದೆಲ್ಲವೂ ಸುಳ್ಳು. ಸರಿಯಾ ದ್ದಲ್ಲ ಎಂದುಕೊಳ್ಳಬೇಡಿ. ನಾನು ಹೇಳುವುದನ್ನು ಸ್ವಲ್ಪ ಕೇಳಿ. ಅವಳ ಮಾತುಕತೆ ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸಿದ್ದೇನೆ. ಅವಳು ನನ್ನನ್ನು ಪ್ರೀತಿಸುತ್ತಾಳೆ. ಅದು ಸ್ಪಷ್ಟವಾಗಿ ನನ್ನ ಕಣ್ಣಿಗೆ ಕಂಡುಬರುತ್ತಿದೆ."

"ಅದಕ್ಕೇ ನಿನಗೆ ಲೋಕಾನುಭವವಿಲ್ಲವೆಂದು ಹೇಳುವುದು. ಅಕ ಸ್ಮಾತ್ ಇಂತಹ ಕೆಲವರು ಹೆಂಗಸರು ತಮಗೆ ಪ್ರೇಮ ಉಂಟಾಗಿದೆ ಎಂದು ಕೊಳ್ಳುತ್ತಾರೆ. ಹಾಗೆ ಅವಳಿಗೆ ಈಗ ನಿನ್ನ ಮೇಲೆ ಪ್ರೀತಿ ಬಂದಿರ ಬಹುದು. ಆದರೆ ಅದು ಅತ್ಯಲ್ಪ ಕಾಲದಲ್ಲಿಯೇ ಮಾಯವಾಗುತ್ತದೆ."

"ಪ್ರೇಮವು ಯಾವಾಗಲೂ ಅಶಾಶ್ವತವಲ್ಲ. ಪ್ರೇಮವು ಅಮರ. ನಿರಂತರ."

ಶಂಕರನ ಮುಗ್ಧತೆಯನ್ನೂ, ಅವನ ಮರುಳುತನವನ್ನೂ ನೋಡಿ, ನಕ್ಕು ವಾಸುದೇವ ಹೇಳಿದ.

"ಅವಳಾರು ಎಂಬುದು ನಿನಗೆ ಗೊತ್ತೇನು? ಅವಳು ಸೂಳೆ. ಮೈಮಾರಿಕೊಂಡು ಜೀವನ ಮಾಡುವವಳು."

"ಹೌದು. ನನಗೆ ಗೊತ್ತು."

"ನಿಮಗೆ ಗೊತ್ತ ? ಸರಿ. ಅದರಿಂದ ಏನೂ ವ್ಯತ್ಯಾಸವಾಗುವುದಿಲ್ಲವೆನ್ನುತ್ತೀಯೇನು ?"

"ಆಗುವುದಿಲ್ಲ"

"ಇಂದು ಆಗದಿರಬಹುದು, ಶಂಕರ. ಮುಂದೆ ಆಗುತ್ತದೆ."

"ಆಗುವುದಕ್ಕೆ ನಾನು ಬಿಡುವುದಿಲ್ಲ."

"ಅಯ್ಯೋ ಹುಚ್ಚ. ಬಿಡುವುದಕ್ಕೆ ಬಿಡದಿರುವುದಕ್ಕೆ ನೀನಾರು ? ಏನಾಗಬೇಕೋ ಅವೆಲ್ಲವೂ ಆಗಿಯೇ ಆಗುತ್ತವೆ."

ಶಂಕರ ಏನು ಹೇಳುವುದಕ್ಕೂ ತಿಳಿಯದೇ ಸುಮ್ಮನಿದ್ದ.

"ನೀನೂ ಆ ಪ್ರವಾಹದಲ್ಲಿ ತೇಲಿಹೋಗುತ್ತೀಯೆ. ಹುಲ್ಲು ಕಡ್ಡಿಯಂತೆ ತೇಲಿಹೋಗುತ್ತೀಯೆ. ಅವಳೊಂದಿಗೆ ನೀನು ಕೂಡುವಾಗಲೆಲ್ಲಾ "ಇವಳು ಅವನೊಡನಿದ್ದವಳು—ಇವನೊಡನಿದ್ದವಳು" ಎಂದು ನಿನಗೆ ಜ್ಞಾಪಕ ಬರುತ್ತಿದ್ದರೆ ನಿನ್ನ ಮನಸ್ಸಿಗೆಷ್ಟು ಯಾತನೆಯಾಗುತ್ತದೆ—ಎಂಬುದನ್ನು ಬಲ್ಲೆಯ ?"

"ಅದನ್ನು ನಾನು ಒಪ್ಪುವುದಿಲ್ಲ. ಅವಳು ಹಿಂದೆ ಮಾಡಿದುದೆಲ್ಲವನ್ನೂ ನಾನು ಕ್ಷಮಿಸಿಬಿಟ್ಟಿದ್ದೇನೆ. ಅದರಿಂದಲೇ, ಅವಳು ಹಿಂದೇನು ಮಾಡಿದಳೆಂಬುದು ನನ್ನ ನೆನಪಿಗೆ ಬರುವುದಿಲ್ಲ."

"ಅವಳನ್ನು ಕ್ಷಮಿಸುವುದಕ್ಕೆ ನೀನಾರು ? ಅವಳನ್ನು ಕ್ಷಮಿಸಿರುವುದರಿಂದ ನಿನ್ನ ಮನಸ್ಸಿಗೆ ಬರುವುದಿಲ್ಲ ! ಇನ್ನೂ ನೀನು ಅವಳನ್ನು ನಿನ್ನವಳೆಂದುಕೊಂಡಿಲ್ಲ. ಅದರಿಂದ ಬರುವುದಿಲ್ಲ. ಯಾವ ಗಳಿಗೆಯಲ್ಲಿ ಅವಳನ್ನು ನಿನ್ನವಳೆಂದುಕೊಳ್ಳುತ್ತೀಯೋ ಆ ಗಳಿಗೆಯಿಂದ ಅವಳ ಹಿಂದಿನ ಬದುಕು ನಿನ್ನ ಬೆನ್ನು ಹತ್ತುತ್ತದೆ."

"ಹಾಗಾದರೆ ಪತಿತರಾದವರನ್ನು ಯಾರೂ ಕೈ ಹಿಡಿದು ಮೇಲೆತ್ತಬಾರದೇನು? ಯಾವಳಾದರೂ ಪತಿತೆಯು ತಾನು ಉದ್ಧಾರವಾಗಬೇಕೆಂದುಕೊಂಡರೂ ವಿಫಲಳೇ ಆಗಬೇಕೇನು?

ವಾಸುದೇವ ನಕ್ಕು ಹೇಳಿದ.

"ಯಾರು ಉದ್ಧಾರವಾಗಬೇಕೆಂದು ಕೊಂಡಿದ್ದಾರೆ, ಶಂಕರು. ನಿನ್ನ ಕನಕಾಂಗಿ ಉದ್ಧಾರವಾಗಬೇಕೆಂದುಕೊಂಡಿದ್ದಾಳೆ ಎಂದುಕೊಂಡಿದ್ದೀಯಾ? ಖಂಡಿತವಾಗಿ ಇಲ್ಲ. ಈ ಸೂಳೆಯರು ಎಂದೆಂದಿಗೂ ಉದ್ಧಾರವಾಗಬೇಕೆಂದುಕೊಳ್ಳುವುದೇ ಇಲ್ಲ."

"ಇರಬಹುದು. ಆದರೆ ಕನಕಳ ವಿಷಯ ಬೇರೇ"

"ಎಲ್ಲರ ವಿಷಯವೂ ಒಂದೇ. ಅವಳು ಬೀದಿಯ ಹೆಣ್ಣು. ಬೀದಿಗೆ ಹೋಗುತ್ತಾಳೆ."

"ಇಲ್ಲ. ಅವಳು ಹಾಗಲ್ಲ"

"ನಿನಗೆ ಗೊತ್ತಿಲ್ಲ, ಶಂಕರ. ಉಸಿರು ತೆಗೆದುಕೊಳ್ಳುವಷ್ಟು ಸಲೀಸಾಗಿ ಅವಳು ಮತ್ತೊಬ್ಬನೊಡನೆ ಮಲಗಿಕೊಳ್ಳುತ್ತಾಳೆ."

"ಇಲ್ಲ. ಕನಕಾಂಗಿ ಹಾಗೆ ಮಾಡುವುದೇ ಇಲ್ಲ."

ಇಷ್ಟು ಹೊತ್ತೂ ವಾಗ್ವಾದಗಳನ್ನು ಕೇಳುತ್ತಾ ಸುಮ್ಮನೆ ಕುಳಿತಿದ್ದ ಶಶಿಕಾಂತನ ಕಡೆಗೆ ತಿರುಗಿ ವಾಸುದೇವ ಹೇಳಿದ.

"ನೀನಾದರೂ ಇವನಿಗೆ ಬುದ್ಧಿ ಹೇಳು, ಶಶಿ. ಅನ್ಯಾಯವಾಗಿ ಕೆಟ್ಟು ಹೋಗುತ್ತಾನೆ".

"ನಾನೇಕೆ ಬುದ್ಧಿ ಹೇಳಬೇಕು? ಜಗತ್ತು ಹುಟ್ಟಿದಂದಲೂ ಹೀಗೆಯೇ ನಡೆಯುತ್ತಿದೆ. ನಾಶವಾಗುವವರೆವಿಗೆ ಹೀಗೆಯೇ ನಡೆಯುತ್ತಿರುತ್ತದೆ. ಉರಿಯುತ್ತಿರುವ ದೀಪದ ಬಳಿಗೆ ಹೋಗಿ ಬೀಳುವ ಹುಳುವನ್ನು "ಬೇಡ. ನೀನು ಸುಟ್ಟುಹೋಗುತ್ತೀಯೆ ಆ ದೀಪದ ಬಳಿ ಹೋಗಬೇಡ" ಎಂದರೆ ಅದು ಕೇಳುತ್ತದೆಯೆ?"

"ನೀವು ದೊಡ್ಡ ಕವಿಗಳಾಗಿರಬಹುದು, ಶಶಿಕಾಂತ್. ಆದರೆ ನಿಮ್ಮ ಸಾದೃಶ ಇಲ್ಲಿ ಸರಿಹೋಗುವುದಿಲ್ಲ. ನೀವು ಹೇಳುವ ದೀಪ–ಹುಳುಗಳು

ಬುದ್ಧಿ ಇಲ್ಲದವುಗಳು. ಗಂಡುಹೆಣ್ಣುಗಳೆರಡೂ ಬುದ್ಧಿ ಇರುವಂತಹವುಗಳು. ದಯೆಯೇ ಮೂರ್ತಿಮಂತ ಸ್ವರೂಪವಾಗಿರುವ ಹೆಂಗಸನ್ನು ಬಳಿಗೆ ಬಂದುದನ್ನೆಲ್ಲಾ ಸುಟ್ಟು ಭಸ್ಮ ಮಾಡುವಂತಹ ದೀಪಕ್ಕೆ ಹೋಲಿಸುವುದು ಕೇವಲ ಪಕ್ಷಪಾತ ಮನೋಭಾವ."

"ಹೌದು, ಹೌದು. ಪ್ರೇಮಿಗಳೆಲ್ಲರೂ ಹೀಗೆಯೇ ಹೇಳುವುದು."

ವಾಗ್ವಾದಗಳಿಂದ ಯಾವಾಗಲೂ ಏನೂ ಬಗೆಹರಿಯುವುದಿಲ್ಲ. ಹಾಗೆಯೇ ಈ ವಿಷಯವೂ ಬಗೆಹರಿಯಲಿಲ್ಲ.

ಶಂಕರ ಬೆಳಗಾಂನಲ್ಲಿಯೇ ಇರಬೇಕಾಗಿತ್ತು. ಅವನು ಒಂದು ವರ್ಷ ಲಾ ಓದಿ ಮುಗಿಸಿದ್ದ. ಮತ್ತೊಂದು ವರ್ಷ ಓದಿ ಮುಗಿಸಬೇಕಾಗಿತ್ತು. ಅದಕ್ಕಾಗಿಯೇ ಬಂದಿದ್ದ. ಅದರಿಂದ ಅವನು ಅಲ್ಲಿಂದ ಹೊರಡುವ ಪ್ರಶ್ನೆಯೇ ಇರಲಿಲ್ಲ.

ವಾಸುದೇವ, ಶಶಿಕಾಂತರ ವಿಷಯ ಹಾಗಿರಲಿಲ್ಲ. ಶಶಿಕಾಂತ ಬಂದು ಆಗಲೇ ಮೂರು ದಿನವಾಗಿತ್ತು. ಅವನು ಪತ್ರಿಕಾ ಕಚೇರಿಯ ಬರಡು ಕೆಲಸಕ್ಕೆ ಹಿಂತಿರುಗಬೇಕಾಗಿತ್ತು. ಗೊತ್ತಾದ ಕೆಲಸವಿಲ್ಲದಿದ್ದರೂ ವಾಸುದೇವ ಅಲ್ಲಿಂದ ಹೊರಟುಹೋಗಲು ತೀರ್ಮಾನ ಮಾಡಿದ್ದ. ಬೆಳಗಾಂ ಅವನಿಗೆ ಬೇಜಾರುಂಟು ಮಾಡಿತ್ತು.

ಕನಕಳೊಡನೆ ಸಂಸಾರ ಮಾಡಿಕೊಂಡಿರಲು ಶಂಕರ ನಿರ್ಧರಿಸಿಬಿಟ್ಟಿದ್ದ. ಮೊದಲು ಮದುವೆ ಮಾಡಿಕೊಳ್ಳುತ್ತೇನೆಂದುಕೊಂಡ. ಸೂಳೆಯೊಂದಿಗೆ ಹೇಗೆ ಮದುವೆ ಮಾಡಿಕೊಳ್ಳುವುದು? ರಿಜಿಸ್ಟರ್ ಮ್ಯಾರೇಜ್ ಮಾಡಿಕೊಳ್ಳುವುದೆಂದುಕೊಂಡ. ಆರ್ಯ ಸಮಾಜದ ರೀತ್ಯಾ ಮದುವೆಯಾಗುವುದೆಂದು ಆಲೋಚಿಸಿದ.

ಅವನೆಲ್ಲ ಆಲೋಚನೆಗಳನ್ನೂ ಕೇಳಿ ಶಶಿಕಾಂತ ಸಲಹೆ ಮಾಡುತ್ತಾ ಹೇಳಿದ.

"ಮಿ॥ ಶಂಕರ್. ನೀವಿನ್ನೂ ಓದುತ್ತಿರುವ ವಿದ್ಯಾರ್ಥಿಗಳು. ಊರಿನಲ್ಲಿ ಅಪ್ಪ ಅಮ್ಮ ಎಲ್ಲರೂ ಇದ್ದಾರೆಂದು ಹೇಳುತ್ತೀರಿ. ಹಾಗಿರುವಾಗ ಮದುವೆ ಎಂಬುದೊಂದು ಫರ್ಕ್ಷ ಇಟ್ಟುಕೊಳ್ಳಬೇಡಿ. ಒಂದು ಮನೆ

ಮಾಡಿ ಕನಕಳನ್ನು ಇಟ್ಟುಕೊಂಡು ಸಂಸಾರ ಮಾಡಿ. ವ್ಯಾಸಂಗ ಮುಗಿದು ನೀವು ಸ್ವತಂತ್ರರಾದ ನಂತರ ಅದೇನಾದರೂ ಆಲೋಚನೆ ಮಾಡುವಿರಂತೆ."

ಶಂಕರನಿಗೆ ಅದು ಸರಿಯಾಗಿ ತೋರಿತು. ತನ್ನ ಮದುವೆ ಕಾಲೇಜಿನಲ್ಲಿ ಸಹಾಧ್ಯಾಯಿಗಳಿಗೂ, ಪ್ರೊಫೆಸರುಗಳಿಗೂ ತಿಳಿದು ಗುಲ್ಲಾಗುವುದಿಲ್ಲ. ತಾಯಿ ತಂದೆಗಳಿಗೆ ತಿಳಿಯುವುದಿಲ್ಲ. ಸದ್ಯದಲ್ಲಿ ಮದುವೆಯಾಗದೇ ಕನಕಳೊಂದಿಗೆ ಸಂಸಾರ ಮಾಡುವುದೇ ಸರಿಯಾದ ಆಲೋಚನೆ ಎಂದು ಅವನಿಗೂ ಕಂಡಿತು.

ವಾಸುದೇವನೂ ಅದನ್ನು ಒಪ್ಪಿದ. ಕನಕ ಶಂಕರರ ಸಂಬಂಧವು ಕೇವಲ ತಾತ್ಕಾಲಿಕವೆಂದು ಅವನ ಅಭಿಪ್ರಾಯವಾಗಿತ್ತು. ಶಂಕರ ಅವಳೊಡನೆ ಯಾವ ಬಗೆಯಾದ ಶಾಶ್ವತ ಸಂಬಂಧವನ್ನು ಬೆಳಸುವುದೂ ಅವನಿಗೆ ಇಷ್ಟವಿರಲಿಲ್ಲ.

ತನಗೊಂದು ಮನೆ ಮಾಡಿ ಕೊಟ್ಟು, ಹೊಸ ಮನೆಯಲ್ಲಿ ಊಟ ಮಾಡಿಕೊಂಡು ಹೋಗಬೇಕೆಂದು ಶಂಕರ ತನ್ನ ಗೆಳೆಯರೊಂದಿಗೆ ಹಟ ಹಿಡಿದ. ಅವರು ಒಪ್ಪಿಕೊಂಡರು.

ತಲಕವಾಡಿಯಲ್ಲಿ ನಲವತ್ತು ರೂಪಾಯಿಗೆ ದೊಡ್ಡದೊಂದು ಮನೆ ಮಾಡಿದನು. ರೂಂನಲ್ಲಿದ್ದ ಶಂಕರನ ಸಾಮಾನುಗಳನ್ನೂ ಮನೆಯಲ್ಲಿದ್ದ ಕನಕಳ ಸಾಮಾನುಗಳನ್ನೂ ಆ ಮನೆಗೆ ಸಾಗಿಸಲಾಯಿತು. ಮಾರನೆಯ ದಿನ ಊಟದ ಏರ್ಪಾಡುಗಳನ್ನು ಮಾಡಿದರು.

ಕನಕ ತಾನೇ ಅಡಿಗೆ ಮಾಡುತ್ತೇನೆಂದಳು. ಅಷ್ಟೊಂದು ಅಡಿಗೆ ಮಾಡಿದರೆ ಅವಳಿಗೆ ಆಯಾಸವಾಗುತ್ತದೆಯೆಂದು ಶಂಕರ ಅಡಿಗೆಯವನನ್ನು ಕರಿಸಿದ. ಮಧ್ಯಾಹ್ನ ಎರಡು ಭಕ್ಷ್ಯಗಳನ್ನು ಮಾಡಿ ಒಳ್ಳೆಯ ಊಟ ಮಾಡಿದರು.

ಊಟಕ್ಕಿದ್ದವರು ನಾಲ್ಕೇ ಮಂದಿಯಾದರೂ ನಲವತ್ತು ಜನಗಳಿದ್ದಷ್ಟು ಗದ್ದಲವಾಗಿತ್ತು.

ಆ ದಿನ ರಾತ್ರಿ ವಾಸುದೇವ ಲೊಂಡಾಗೂ, ಶಶಿಕಾಂತ ಹುಬ್ಬಳ್ಳಿಗೂ ಹೊರಡಲು ಸಿದ್ಧವಾದರು. ಅವರುಗಳನ್ನು ರೈಲಿಗೆ ಬಿಟ್ಟು ಬರಲು ಕನಕಳೂ

ಶಂಕರನೂ ಇಬ್ಬರೂ ಹೋದರು. ಸ್ಟೇಷನ್ನಿಗೆ ಹೋದ ಕೂಡಲೇ ವಾಸುದೇವ ಮನಸ್ಸು ಬದಲು ಮಾಡಿ ಹುಬ್ಬಳ್ಳಿಗೆ ಹೋಗುವುದಾಗಿ ಹೇಳಿದ.

ರೈಲು ಬರುವುದಕ್ಕಿಂತ ಮುಂಚೆ ನೂತನ ದಂಪತಿಗಳು ಗೆಳೆಯರಿಗೆ ಮೂರು ನಾಲ್ಕು ಬಾರಿ ಹೇಳಿದರು. ಬೆಳಗಾವಿಗೆ ಬಂದರೆ ತಮ್ಮ ಮನೆಯಲ್ಲಿಯೇ ಬಂದಿಳಿಯಬೇಕೆಂದು ಹೇಳಿದರು. ರೈಲಿನಲ್ಲಿ ಕುಳಿತ ಮೇಲೆ ರೈಲು ಹೊರಡುವಾಗ ಸಹ ತಮ್ಮಲ್ಲಿಗೆ ಬರಬೇಕೆಂದು ಜ್ಞಾಪಿಸಿದರು.

ಗಾಡಿಯು ಹೋದ ಮೇಲೆ, ಹೋಗುತ್ತಿದ್ದ ಗಾಡಿಯನ್ನು ಗಳಿಗೆಯ ಹೊತ್ತು ನೋಡುತ್ತಾ ನಿಂತಿದ್ದು ವಾಪ್ಸು ಹೊರಟರು.

ಶಂಕರ ನಡೆದುಕೊಂಡೇ ಮನೆಗೆ ಹೋಗೋಣವೆಂದ. ಕನಕ ಅದಕ್ಕೇನೂ ಪ್ರತಿ ಹೇಳಲಿಲ್ಲ.

ಬೆಳಗಾವಿಯಲ್ಲಿ ಹುಬ್ಬಳ್ಳಿ–ಪೂನಾ ಗಾಡಿ ರಾತ್ರಿ ಬಂದು ಹೋಗುವುದು ಅರ್ಧ ರಾತ್ರಿಯ ಮೇಲೆ. ಸ್ಟೇಷನ್ನು ಬಿಟ್ಟು ಹೊರಗೆ ಹತ್ತು ಹೆಜ್ಜೆ ನಡೆದು ಬಂದರೆ ಊರಿನ ಬೀದಿಗಳು ನಿರ್ಜನವಾಗಿರುತ್ತವೆ. ನಿರ್ಜನವಾದ ಬೀದಿಗಳಲ್ಲಿ ನಡೆದುಹೋಗಬೇಕೆಂದೇ ಶಂಕರ ಗಾಡಿ ಬೇಡವೆಂದು ಹೇಳಿದ್ದ.

ಕನಕಳ ಪರಿಚಯವಾದ ಮೇಲೆ ಅವಳೊಂದಿಗೆ ಬೀದಿಯಲ್ಲಿ ನಡೆದು ಹೋದುದು ಶಂಕರನಿಗೆ ಅದೇ ಮೊದಲು.

ಸ್ಟೇಷನ್ನಿನಿಂದ ಹೊರಡುವಾಗ ಕನಕ ಅವನ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡಿದ್ದಳು.

ಆ ದಿನ ಮಧ್ಯಾನ್ಹ ಮನೆಯಲ್ಲಿ ಓಡಿಯಾಡುವಾಗ ಶಂಕರ ಎರಡು ಮೂರು ಬಾರಿ ಅವಳ ಕೈ ಹಿಡಿಕೊಂಡಿದ್ದ. ಅಕಸ್ಮಾತ್ ಗೆಳೆಯರ ಮಾತನ್ನು ಕೇಳಿಯೋ, ಅವರು ಬಂದುದನ್ನು ನೋಡಿಯೋ ಬಿಸಿಯ ಮಡಕೆಯನ್ನು ಬಿಟ್ಟಂತೆ ಅವಳ ಕೈ ಬಿಟ್ಟು ಬಿಟ್ಟಿದ್ದ.

ಶಂಕರನಿಗೆ ತನ್ನ ಕೈ ಹಿಡಿದುಕೊಳ್ಳಲು ಆಸೆಯೆಂದೂ, ಹಿಡಿದುಕೊಳ್ಳಲು ಸಂಕೋಚವೆಂದೂ ಗ್ರಹಿಸಿದ ಕನಕ ಅವಳ ಕೈಹಿಡಿದುಕೊಂಡಿದ್ದಳು.

ಅದೊಂದು ಬಗೆಯಾಗಿ ಅವನಿಗೆ ಸುಖವಾಗಿತ್ತು.

ನಿರ್ಜನವಾದ ಬೀದಿಗಳಲ್ಲಿ ಬರುತ್ತಲೇ ಶಂಕರನ ಮನಸ್ಸಿನಲ್ಲಿ ಹೊಸದೊಂದು ಆಲೋಚನೆ ಬಂದಿತು.

ಕನಕಳ ಕೃಶವಾದ ಸೊಂಟದ ಸುತ್ತಲೂ ಕೈ ಹಾಕಿ ಅವಳನ್ನು ಹತ್ತಿರವಾಗಿ ಹಿಡಿದುಕೊಂಡು ನಡೆಯಬೇಕೆಂದು ಆಸೆಯಾಯಿತು.

ಬೆಂಗಳೂರಿನಲ್ಲಿ ಎಷ್ಟೋ ಮಂದಿ ಆಂಗ್ಲೋಇಂಡಿಯನ್ ಯುವಕ ಯುವತಿಯರು ಹಾಗೆ ಹೋಗುವುದನ್ನು ಅವನು ನೋಡಿದ್ದ. ಆಗೆಲ್ಲಾ ತಾನೂ ಹಾಗೆ ಮಾಡಬೇಕೆಂದು ಆಸೆಯಾಗಿತ್ತು. ಹಾಗೆ ಹೋಗಲು ಅವನಿಗೆಲ್ಲಿ ಹುಡುಗಿ ಸಿಕ್ಕಬೇಕು? ಮದುವೆಯಾದ ಮೇಲೆ ತಾನೂ ತನ್ನ ಹೆಂಡತಿಯೊಡನೆ ಹಾಗೆ ಹೋಗಬೇಕೆಂದು ಕೊಳ್ಳುತ್ತಿದ್ದ. ಆಗಲೂ ಮನಸ್ಸಿನಲ್ಲಿ ಬಗೆಬಗೆಯ ತರ್ಕವಿತರ್ಕಗಳು ಬರುತ್ತಿದ್ದವು. •ಆ ಜನಕ್ಕಂತೂ ನಾಚಿಕೆ ಹೇಸಿಕೆಗಳಿಲ್ಲ. ನಾಲ್ಕು ಮಂದಿ ನೋಡುವಾಗ ತಾನು ತನ್ನ ಹೆಂಡತಿಯನ್ನೇ ಆದರೂ ಆ ರೀತಿ ಹಿಡಿದುಕೊಂಡು ಹೋಗುವುದು ಹೇಗೆ?

ಆದರೂ ಮನಸ್ಸಿನಲ್ಲಿ ಆ ಆಸೆಯು ಇದ್ದೇ ಇತ್ತು.

ಈಗ ತನಗೆ ಹೆಂಡತಿ ಇದ್ದಾಳೆ. ಹೋಗುತ್ತಿರುವ ರಸ್ತೆ ನಿರ್ಜನವಾಗಿದೆ. ರಾತ್ರಿ. ಯಾರು ತಾನೇ ನೋಡುತ್ತಾರೆ?

ಈಗ ಆ ಆಸೆ ಪುನಃ ಬೇರೂರಿ ನಿಂತಿತು.

ತಾನು ಕನಕಳ ಸೊಂಟದ ಸುತ್ತಲೂ ಕೈ ಹಾಕಿ ಹಿಡಿದುಕೊಂಡು ನಡೆದರೆ ಅವಳೇನೆಂದು ಕೊಳ್ಳುತ್ತಾಳೆ? ಬೀದಿಯಲ್ಲಿಯೂ ತನ್ನನ್ನು ಬಿಟ್ಟು ನಡೆಯಲು ಇಷ್ಟವಿಲ್ಲವೆಂದುಕೊಳ್ಳುವುದಿಲ್ಲವೇ? ಬೇಡವೆಂದು ತೋರಿತು. ಆದರೆ ಸಿಕ್ಕಿರುವ ಅವಕಾಶವನ್ನು ಉಪಯೋಗಿಸಿಕೊಳ್ಳದಿರಲು ಮನಸ್ಸು ಒಪ್ಪಲಿಲ್ಲ.

ನಡೆದು ಹೋಗುತ್ತಿದ್ದ ಶಂಕರ ಕನಕಳ ಕೈಯಿಂದ ತನ್ನ ಕೈ ಬಿಡಿಸಿಕೊಂಡ.

"ಯಾಕೆ, ನನ್ನ ಕೈ ಹಿಡಿದುಕೊಂಡು ಬರಲು ನಿಮಗೆ ಸಂಕೋಚವಾಗುತ್ತದೆಯೇ?"

"ಇಲ್ಲ."

"ಹಾಗಾದರೆ ಯಾಕೆ ಕೈ ಬಿಟ್ಟಿರಿ?"

ಅವಳ ಪ್ರಶ್ನೆಗಳು ಸಂಕೋಚವನ್ನು ಉಂಟುಮಾಡಿದುವು.

ಹಾಗೆಯೇ ಸಂಕೋಚವಿಲ್ಲವೆಂದು ತೋರಿಸಬೇಕೆನ್ನಿಸಿತು. ಪ್ರಚೋದನೆಯನ್ನೂ ಉಂಟುಮಾಡಿದುವು.

ಮಾಡೋಣವೇ ಬೇಡವೇ—ಎಂಬ ಆಲೋಚನೆಯಲ್ಲಿಯೇ ಶಂಕರ ಅವಳ ಸೊಂಟದ ಸುತ್ತಲೂ ಕೈ ಹಾಕಿದ.

ನಡೆದು ಹೋಗುತ್ತಿದ್ದ ಕನಕ ನಕ್ಕಳು.

ತಟ್ಟನೆ ಅವನ ತೋಳು ಕೆಳಗೆ ಬಿದ್ದುಹೋಯಿತು. ಖಿನ್ನನಾಗಿ ಕೇಳಿದ.

"ಯಾಕೆ, ನಗುತ್ತೀಯೇ?"

"ಏನೂ ಇಲ್ಲ. ಸುಮ್ಮನೆ ನಗು ಬಂದಿತು."

"ಅಲ್ಲ. ನಾನು ಹಾಗೆ ಕೈ ಹಾಕಿದೆನೆಂದು ನೀನು ನಕ್ಕೆ."

"ಅಯ್ಯೋ! ದೇವರಾಣೆಗೂ ಅದಕ್ಕಲ್ಲ. ಸುಮ್ಮನೆ ನಗು ಬಂದಿತು, ಅಷ್ಟೇ."

ಕನಕ ಅವನ ಕೈಯನ್ನು ತೆಗೆದುಕೊಂಡು ತನ್ನ ಸೊಂಟದ ಸುತ್ತಲೂ ಅದನ್ನು ಎಳೆದುಕೊಂಡು, ಹಿಡಿದುಕೊಂಡಳು. ಅವಳು ಕೈ ತೆಗೆದನಂತರವೂ ಅವನ ಕೈ ಅಲ್ಲಿಯೇ ಇತ್ತು.

ಹಾಗೆಯೇ ಆ ಪ್ರೇಮಿಗಳು ನಡೆದುಕೊಂಡು ಹೋದರು.

"ನಮ್ಮ ಮದುವೆ ನಿಮಗೇನೆನ್ನಿಸುತ್ತದೆ?"

"ಏನೆನ್ನಿಸುತ್ತದೆ? ನಿನ್ನ ಮೇಲೆ ನನಗೆ ಆಸೆಯಿತ್ತು. ನೀನು ನನಗೆ ಸಿಕ್ಕಿದೆ."

"ನನ್ನನ್ನು ತಿದ್ದಲು ನಿಮಗೆ ಕಷ್ಟವಾಗಬಹುದು."

"ಅದೇನೂ ಇಲ್ಲ. ನಿನ್ನನ್ನು ತಿದ್ದಲೇ ಬೇಕಾಗಿಲ್ಲ. ನೀನೇ ನಿನ್ನನ್ನು ತಿದ್ದುಕೊಂಡಿದ್ದೀಯೆ?"

"ನೀವು ಹಾಗೆನ್ನುವುದು ನಿಮ್ಮ ದೊಡ್ಡತನ."

ಕನಕ ಅವನ ಪಾಲಿಗೆ ಸರ್ವಸ್ವವಾಗಿದ್ದಳು. ಅವಳನ್ನು ಹಿಡಿದುಕೊಂಡು ಹೋಗುತ್ತಿದ್ದುದು ಸರ್ವವೂ ತನಗೆ ಅಧೀನವಾಗಿದೆ ಎಂಬ ಭಾವನೆಯನ್ನು ಉಂಟುಮಾಡಿತ್ತು. ಅದು ಅವನಿಗೆ ಹೆಮ್ಮೆಯಾಗಿತ್ತು.

ಅಂತಹ ಸುಂದರಿ, ಅಂತಹ ಪರೇಂಗಿತಜ್ಞೆ ವಶವಾಗಿರುವುದು ಯಾರಿಗೆ ತಾನೇ ಹೆಮ್ಮೆಯನ್ನು ಉಂಟುಮಾಡುವುದಿಲ್ಲ?

ಇಬ್ಬರೂ ನೂತನ ಗೃಹಾಭಿಮುಖರಾಗಿದ್ದರು.

ಮಾತನಾಡುವುದೇನೂ ಇರಲಿಲ್ಲ. ಆದರೂ ಮಾತನಾಡಬೇಕೆಂದು ಅವನಿಗಾಸೆ ಇದ್ದಿತು. ಏನಾದರೂ ಆಡಬೇಕಲ್ಲ–ಎಂದು ಆಡಿದ.

"ಕನಕ! ಈಗೆಲ್ಲಿ ಹೋಗೋಣ?"

"ಇನ್ನೆಲ್ಲಿ ಹೋಗುವುದು? ಮನೆಗೆ ಹೋಗುವುದು."

ಇನ್ನೆಲ್ಲಿ ಹೋಗುವುದು, ಮನೆಗೆ ಹೋಗುವುದು–ಎಂಬ ಮಾತಿನಲ್ಲಿ ಅಷ್ಟೇ ಅರ್ಥವಲ್ಲದೇ ಇನ್ನೂ ಷ್ಟು ಅರ್ಥವಿರುವಂತೆ ಅವನಿಗೆ ಭಾಸವಾಯಿತು.

ಆ ಇನ್ನಷ್ಟು ಅರ್ಥ ಅವನನ್ನು ಆನಂದ ಪರವಶನನ್ನಾಗಿ ಮಾಡಿತು.

ಮನೆಗೆ ಹೋಗಿ, ಅವರಿಬ್ಬರೂ ಮಲಗಿಕೊಂಡರು.

ಮಂಚದ ಮೇಲೆ ಅವರು ಮಲಗಿದ್ದಾಗ ಕೋಣೆಯೆಲ್ಲವೂ ಕತ್ತಲಾಗಿತ್ತು. ಆದರೂ ಆ ಪ್ರೇಮಿಗಳ ಪಾಲಿಗೆ ಬೆಳಕಿರುವಂತೆಯೇ ಇದ್ದಿತು.

ಕತ್ತಲಿನಲ್ಲಿಯೂ ಕನಕಳ ಮುಖವನ್ನು ನೋಡುತ್ತಾ ಶಂಕರ ಅಂದ.

"ಕನಕ, ನೀನು ನನ್ನನ್ನು ಪ್ರೀತಿಸುತ್ತೀಯಾ?"

ಪ್ರಶ್ನೆ ಅನಾವಶ್ಯಕವಾಗಿತ್ತು.

"ಇದೇನೂಂದ್ರೆ, ಹೀಗೆ ಕೇಳುತ್ತೀರಿ. ಪ್ರೀತಿಸದೇ ನಾನು ನಿಮ್ಮೊಡನೆ ಹೊರಟುಬಂದೆನೇ?"

ಉತ್ತರ ಸರಿಯಾಗಿಯೇ ಇದ್ದಿತು. ಆದರೆ ಶಂಕರ ಅದನ್ನು ಬೇರೊಂದು ವಿಧವಾಗಿ ನಿರೀಕ್ಷಿಸಿದ್ದ. ಅವನಿಗೆ ನಿರಾಶೆಯುಂಟಾಯಿತು.

ಕನಕ ಚತುರೆ. ಇತರ ವಿಷಯಗಳಲ್ಲಿ ಚತುರೆ ಹೌದೋ ಇಲ್ಲವೋ ? ತನ್ನೊಂದಿಗೆ ಇರುವ ಗಂಡಸರ ಮನೋಗತವನ್ನು ತಿಳಿದುಕೊಳ್ಳುವುದರಲ್ಲಿಯಂತೂ ಚತುರೆ. ಅವಳು ಶಂಕರನಿಗಾದ ನಿರಾಶೆಯನ್ನು ಕಂಡುಕೊಂಡಳು. ಆಡಿದ ಮಾತನ್ನು ಪುನಃ ತಿದ್ದುವುದು ಸಾಧ್ಯವಿರಲಿಲ್ಲ.

ಆದರಿಂದ ತನ್ನ ಕಟ್ಟಕಡೆಯ ಅಸ್ತ್ರವನ್ನು ಪ್ರಯೋಗಿಸಿದಳು. ಅವನನ್ನು ಬಾಚಿ ತಬ್ಬಿಕೊಂಡು ಮುತ್ತಿಟ್ಟಳು. ಅದು ಅವನ ಮೇಲೆ ಬ್ರಹ್ಮಾಸ್ತ್ರ

ದಂತೆ ಕೆಲಸ ಮಾಡುತ್ತಿತ್ತು. ಆಲೋಚನೆ, ಮಾತುಗಳೆಲ್ಲವನ್ನೂ ಮುಚ್ಚಿ ಬಿಡುತ್ತಿತ್ತು.

ಅದು ಅವನನ್ನು ಪ್ರಚೋದಿಸಿ ಪ್ರೇರೇಪಿಸುತ್ತಿತ್ತು.

ಆದರೆ ಈ ದಿನದ ರತಿಕ್ರಿಯೆಯು ಶಂಕರನಿಗೆ ಸಮರ್ಪಕವಾಗಿ ತೋರ ಲಿಲ್ಲ.

ಕನಕ ಕೋಟು ಕೊಡಲು ಬಂದಾಗಿನಿಂದ ಅವನೊಡನೆಯೇ ಇದ್ದಳು. ಹೋಟಲಿನಲ್ಲಿದ್ದಳು. ಆಗ ಬಂದವಳು ಪುನಃ ತನ್ನ ಮನೆಗೆ ಹೋಗಿರಲಿಲ್ಲ. ಹೋಟಲಿನಿಂದ ನೇರವಾಗಿ ನೂತನ ಗೃಹಕ್ಕೆ ಬಂದಿದ್ದಳು.

ಕನಕ ಹೋಟಲಿಗೆ ಬಂದ ರಾತ್ರಿಯೇ ಶಂಕರ ಅವಳನ್ನು ಪರಿಗ್ರಹಿ ಸಿದ್ದ. ಅನಂತರ ಎಷ್ಟೋ ಬಾರಿ ಪರಿಗ್ರಹಿಸಿದ್ದ. ರತಿಯಲ್ಲಿ ಉತ್ಸಾಹ, ಪ್ರತಿಕ್ರಿಯೆಗಳು ಅವಳಲ್ಲಿ ಕಂಡುಬರುತ್ತಿರಲಿಲ್ಲ. ನಿಸ್ತೇಜಳಾಗಿ ಸುಪ್ತಳಾಗಿ ಇರುತ್ತಿದ್ದಳು.

ಅದನ್ನವನು ಅವಳೊಡನೆ ಪ್ರಸ್ತಾಪ ಮಾಡಿದ್ದ. "ಹೋಟಲಿಗೆ ಬಂದು ನಿಮ್ಮನ್ನು ನೋಡಿದಾಗಿನಿಂದ ನನ್ನಲ್ಲಿ ದೊಡ್ಡ ಪರಿವರ್ತನೆಯಾಗಿದೆ. ನಾನು ಗೃಹಿಣಿಯಂತೆ ಭಾವನೆ ಮಾಡುತ್ತಿದ್ದೇನೆ. ಅಭಿನಯಗಳನ್ನು ಬಿಟ್ಟು ಸ್ವಾಭಾವಿಕವಾಗಿದ್ದೇನೆ" ಎಂದಿದ್ದಳು.

ಈ ರಾತ್ರಿಯ ರತಿಯೂ ಆ ಬಾರಿಗಳಂತೆಯೇ ಇತ್ತು.

ಮೊದಲು ರತಿಕಾಲದಲ್ಲಿ ಅವಳು ಜೋರಾಗಿ ಉಸಿರಾಡುತ್ತಿದ್ದಳು. ಏನೋ ಒಂದು ಬಗೆಯ ಹರ್ಷೋದ್ಗಾರವನ್ನು ಮಾಡುತ್ತಿದ್ದಳು. ಸುಪ್ತಾವಸ್ಥೆಯಲ್ಲಿದರೂ ಚೇತನಾಮಯಿಯಾಗಿರುತ್ತಿದ್ದಳು. ಇತ್ತೀಚೆಗೆ, ಈಗ ಅವೊಂದೂ ಇಲ್ಲ. ಸುಮ್ಮನೆ ಮಲಗಿರುತ್ತಾಳೆ.

"ಯಾಕೆ, ಏನೋ ಒಂದು ಬಗೆಯಾಗಿದ್ದೀಯೆ, ಕನಕ."

"ಏನಾಗಿದ್ದೇನೆ. ಸರಿಯಾಗಿಯೇ ಇದ್ದೇನೆ."

"ಅಲ್ಲ, ಏನೋ ವ್ಯತ್ಯಾಸವು ಕಂಡುಬರುತ್ತಿದೆ."

"ಇಲ್ಲ, ಅಂದರೆ— —"

"ನೀನು ಮುಚ್ಚಿಡುತ್ತಿದ್ದೀಯೆ. ನಾನು ಹೇಳುವುದು ನಿನಗೆ ಅರ್ಥವಾಗುತ್ತಿದೆ."

"ಯಾವಾಗಲೂ ಒಂದೇ ಸಮನಾಗಿರುತ್ತದೆಯೇ?"

ಆ ಉತ್ತರ ಆವನಿಗೆ ಸರಿಬೀಳಲಿಲ್ಲ.

ಹಿಂದೆ "ಸ್ವಾಭಾವಿಕವಾಗಿದ್ದೇನೆ" ಎಂದಿದ್ದಳು. ಈಗ "ಒಂದೇ ಸಮನಾಗಿರುವುದು ಸಾಧ್ಯವಿಲ್ಲ" ಎಂದಳು. ಅವಳು ಹೇಳುವುದು ಸತ್ಯವಾಗಿರಬಹುದು. ಆ ಎರಡೂ ಅಪ್ರಿಯವಾದ ಸತ್ಯಗಳು.

ಮೊದಲ ದಿನ ರಾತ್ರಿ–ಮಾರನೆಯ ದಿನ ಬೆಳಗಾಗ ಅವಳು ಬೇರೊಂದು ವಿಧವಾಗಿದ್ದಳಲ್ಲ, ಅದೇನು? ಅಭಿನಯವಿರಬಹುದು.

ಸ್ವಭಾವಕ್ಕಿಂತಲೂ, ಅಭಿನಯವೇ ಅವನಿಗೆ ಪ್ರಿಯವಾಗಿ ತೋರುತ್ತಿತ್ತು.

# ೧೧

ಶಂಕರ ಸದಾ ಕನಕಳ ಚಿಂತೆಯಲ್ಲಿಯೇ ಇರಲು ಸಾಧ್ಯವಾಗಲಿಲ್ಲ. ಅವನು ಲಾ ಓದಲು ಬೆಳಗಾಂಗೆ ಬಂದಿದ್ದ. ಅದು ಎರಡನೆಯ ವರ್ಷ. ಹೋಗಿ ಕಾಲೇಜಿಗೆ ಸೇರಿದ.

ಕಳದ ವರ್ಷ ಅವನು ಹಾಸ್ಟಲಿನಲ್ಲಿಳಿದುಕೊಂಡಿದ್ದ. ಈ ಬಾರಿ ಹಾಸ್ಟಲಿಗೆ ಸೇರಿದುದು ಅವನ ಕಾಲೇಜು ಸಹಾಧ್ಯಾಯಿಗಳಿಗೆ ಕೌತುಕವಾಗಿದ್ದಿತ [illegible] ರೂಂ ಮಾಡಿಕೊಂಡಿರುವುದಾಗಿ ಸ್ನೇಹಿತರಿಗೆ ಹೇಳಿದ್ದ. ಆದರೆ ಯಾರನ್ನೂ ರೂಂಗೆ ಕರೆದುಕೊಂಡು ಹೋಗುತ್ತಿರಲಿಲ್ಲ. ಯಾರಾದರೂ ಅವನ ಬೆನ್ನು ಹತ್ತಿದರೆ ಏನಾದರೂ ಮಾಡಿ ತಪ್ಪಿಸಿಕೊಂಡು ಹೋಗುತ್ತಿದ್ದ.

ಅವನ ಜೀವನದಲ್ಲಿ ಅರ್ಧ ಭಾಗವು ಎಲ್ಲರಿಗೂ ತಿಳಿದಿತ್ತು. ಮತ್ತರ್ಧ ಭಾಗ ಮುಚ್ಚುಮರೆಯಲ್ಲಿ ನಡೆಯುತ್ತಿತ್ತು. ಕೂಡಲೇ ಆ ಮುಚ್ಚುಮರೆಯನ್ನು ಬೇಧಿಸುವುದು ಅವನ ಸಹಾಧ್ಯಾಯಿಗಳಿಗೆ ಸಾಧ್ಯವಾಗಲಿಲ್ಲ. ಆಸಕ್ತಿ ಇದ್ದರೂ ಸಾಧ್ಯವಾಗಿರಲಿಲ್ಲ.

ಮೊದಲಿನಿಂದಲೂ ಶಂಕರ ಕಾಲೇಜಿನಲ್ಲಿ "ಕ್ವಯಟ್ ಗೋಯಿಂಗ್ ಗುಡ್ ಬಾಯ್." ಅವನು ಹೀಗಾಗಿದ್ದಾನೆಂದು ಯಾರಿಗೂ ಸಂದೇಹವು ಬಂದಿರಲಿಲ್ಲ. ಅಕಸ್ಮಾತ್ ಹಾಗೆ ಸಂದೇಹವು ಬಂದಿದ್ದರೆ ಅವನು ಮುಚ್ಚಿ

ಟ್ಟಿದ್ದ ಜೀವನದ ಮತ್ತೊಂದು ಭಾಗವೇನೆಂಬುದನ್ನು ಅರಿಯಲು ಯಾರಿಗೂ ಅಸಾಧ್ಯವಾಗುತ್ತಿರಲಿಲ್ಲ.

ಈ ಎರಡನೆಯ ವರ್ಷದಲ್ಲಿ ಅವನು ಓದಿ ಮುಗಿಸಬೇಕಾಗಿದ್ದ ಭಾಗಗಳು ವಿಪರೀತವಾಗಿದ್ದವು.

ಬೆಳಗಾಗ ಎದ್ದರೆ ಹತ್ತು ಗಂಟೆಯುವರೆವಿಗೆ ಓದಬೇಕು. ಅನಂತರ ಊಟಮಾಡಿಕೊಂಡು ಕ್ಲಾಲೇಜು. ಕಾಲೇಜು ಐದುಗಂಟೆಯ ವೇಳೆಗೆ ಮುಗಿಯುತ್ತಿತ್ತು. ಮಧ್ಯೆ ಪೀರಿಯಡ್‌ಗಳು ಇಲ್ಲದಿದ್ದಾಗ ಮಾತ್ರ ಮನೆಗೆ ಸ್ವಲ್ಪ ಬೇಗನೆ ವಾಪ್ಸು ಬರಬಹುದಾಗಿತ್ತು. ಒಟ್ಟಿನಲ್ಲಿ ಮನೆಗೆ ಹೊರಡಲು ಅವಕಾಶವಾಗುತ್ತಿದ್ದುದು ಸಂಜೆ ಐದು ಗಂಟೆಗೆ. ಯಾರಾದರೂ ಸ್ನೇಹಿತರು ಬೆನ್ನಿಗೆ ಬಿದ್ದರೆ, ಅವರೊಂದಿಗೆ ಮಾತನಾಡಿ, ಮುಗಿಸಿ, ತಾನೇ ಚಹಾ ಕುಡಿಸಿಯೋ, ಅಥವಾ ಅವರಿಂದಲೇ ಕುಡಿದುಕೊಂಡೋ, ಅವರಿಂದ ಬಿಡಿಸ್ಕೊಂಡು ಮನೆಗೆ ಬರಲು ಒಂದೊಂದು ದಿನ ಏಳೂವರೆ ಎಂಟು ಗಂಟೆಯಾಗಿ ಬಿಡುತ್ತಿತ್ತು.

ಹೇಗೋ ಮಾಡಿ ಶಂಕರ ಆದಷ್ಟುಬೇಗ ಮನೆಗೆ ಬಂದು ಬಿಡುತ್ತಿದ್ದ. ಕನಕ ಚಹಾ ಮಾಡಿಕೊಂಡು ಕಾದಿರುತ್ತಿದ್ದಳು. ಒಂದೊಂದು ದಿನ ತಿಂಡಿಯನ್ನೂ ಮಾಡಿರುತ್ತಿದ್ದಳು. ಅವನು ಮನೆಗೆ ಹೋಗುವ ವೇಳೆಗೆ ಶೃಂಗರಿಸಿಕೊಂಡು ಸಿದ್ಧವಾಗಿರುತ್ತಿದ್ದಳು. ಚಹಾ ಕುಡಿಯುವುದು ಹತ್ತು ನಿಮಿಷದ ಕೆಲಸ.

ಅದಾದ ಮೇಲೆ ಏನು ಮಾಡುವುದು? ಕನಕಳನ್ನು ಕರೆದುಕೊಂಡು ಎಲ್ಲಿಯಾದರೂ ವಾಕಿಂಗ್ ಹೋದರೆ ಚೆನ್ನಾಗಿರುತ್ತದೆಂದು ಅವನ ಮನಸ್ಸಿಗನ್ನಿಸುತ್ತಿತ್ತು. ಅವಳಿಗೂ ಅದೇ ಅಭಿಪ್ರಾಯವೆಂದು ಭಾಸವಾಗುತ್ತಿತ್ತು. ಆದರೆ ಹಾಗೆ ಹೋಗುವಂತಿರಲಿಲ್ಲ. ಅವನು ಕನಕಳೊಂದಿಗೆ ಹೋಗುತ್ತಿರುವುದನ್ನು ಅವನ ಸಹಾಧ್ಯಾಯಿಗಳೋ, ಪ್ರೊಫೆಸರುಗಳೋ ನೋಡಿದರೆ ಪುಕಾರಾಗುತ್ತದೆ.

ಹಾಗೆ ಪುಕಾರಾಗುವುದಕ್ಕೆ ಶಂಕರ ತಯಾರಾಗಿರಲಿಲ್ಲ.

ಒಂದೊಂದು ದಿನ ಧೈರ್ಯವಾಗಿ ರಾತ್ರಿ ಸೆಕೆಂಡ್ ಷೋ ಸಿನಿಮಾಗೆ

ಕನಕಳನ್ನು ಕರೆದುಕೊಂಡು ಹೋಗುತ್ತಿದ್ದ. ಅದೂ ಎದೆಯನ್ನು ಕಲ್ಲು ಮಾಡಿಕೊಂಡು.

ಕನಕ ಸ್ವತಂತ್ರಳಾಗಿದ್ದಾಗ ಹೆಚ್ಚು ಹೊತ್ತು ಮನೆಯಲ್ಲಿಯೇ ಕಳೆಯುತ್ತಿದ್ದಳು. ಆದರೆ ಆಗ ಸ್ವತಂತ್ರಳಾಗಿದ್ದಳು. ಈಗಲಾದರೋ ಅವಳಿಗೆ ಪಂಜರದಲ್ಲಿ ಸಿಕ್ಕಿಬಿದ್ದ ಹಕ್ಕಿಯಂತಾಗಿದ್ದಿತು. ಬೆಳಗಿನಿಂದ ಸಾಯಂಕಾಲದವರೆವಿಗೆ, ಸಾಯಂಕಾಲದಿಂದ ಬೆಳಗಿನವರೆವಿಗೆ ಮನೆಯಲ್ಲಿಯೇ ಇರುವುದು ಅವಳಿಗೆ ಜೈಲಿನಲ್ಲಿರುವಂತಾಗುತ್ತಿತ್ತು. ಸಾಮಾನು ತರುವ ನೆವದಲ್ಲಿ ಅವಳು ಹೊರಗೆ ಹೋಗಿ ಬರುತ್ತಿದ್ದಳು. ಅದು ಶಂಕರನಿಗೆ ಇಷ್ಟವಿರುತ್ತಿರಲಿಲ್ಲ. ಆದರೆ ಅದನ್ನು ತಡೆಯುವುದು ಸಾಧ್ಯವಿರಲಿಲ್ಲ.

ಸಾಯಂಕಾಲ ತನಗೆ ಚಹಾ ಕೊಟ್ಟನಂತರ ಕನಕ ಹೊರಗೆ ಹೋಗುವುದಂತೂ ಅವನಿಗೆ ಸರ್ವಥಾ ಇಷ್ಟವಿರುತ್ತಿರಲಿಲ್ಲ. ಆದರೂ ಅವಳು ಕಾಫೀ ಪುಡೀ ಇಲ್ಲವೆಂದೊ, ಟೈಲರ್ ಬಳಿಗೆ ಹೋಗಬೇಕೆಂದೋ ಹೊರಟುಬಿಡುತ್ತಿದ್ದಳು. ಅಂತಹ ಸಂದರ್ಭದಲ್ಲಿ ಶಂಕರ ಒಳಗೊಳಗೇ ಮುಲುಗುಟ್ಟಿಕೊಳ್ಳುತ್ತಿದ್ದ.

ಹೊಸ ಸಂಸಾರಕ್ಕೆ ಸ್ವಲ್ಪ ಹೆಚ್ಚಾಗಿಯೇ ಖರ್ಚಾಗುತ್ತಿತ್ತು. ಕನಕ ಆದು ಹಿಡಿಯು ಖರ್ಚಾದ ಸ್ವಭಾವವಲ್ಲ. ಮನಸ್ಸಿಗೆ ತೋರಿದಂತೆ ಖರ್ಚು ಮಾಡುತ್ತಿದ್ದಳು. ತನಗೆ ಸೀರೆ ಬೇಕೆಂದರೆ ಹೋಗಿ ತಂದುಬಿಡುತ್ತಿದ್ದಳು. ಯಾವುದಾದರೂ ಬಟ್ಟೆಯಲ್ಲಿ ಬ್ಲೌಸ್ ಹೊಲಿಸಬೇಕೆಂದು ತೋರಿದರೆ ಹೊಲಿಸಿ ತೊಟ್ಟುಕೊಳ್ಳುವವರೆವಿಗೆ ಅವಳಿಗೆ ಸಮಾಧಾನವಾಗುತ್ತಿರಲಿಲ್ಲ. ಮನೆಯಲ್ಲಿ ಊಟ ತಿಂಡಿಗಳ ಖರ್ಚೂ ವಿಪರೀತ ಆಗುತ್ತಿತ್ತು. ಅದರ ವಿಷಯದಲ್ಲಿಯಂತೂ ಶಂಕರ ಮಾತನಾಡುವಂತೆಯೇ ಇರಲಿಲ್ಲ.

ಒಂದುಬಾರಿ ಕನಕ ಕೃತಕ ಚಿನ್ನದ ನಾಲ್ಕು ನಾಲ್ಕು ಬಳೆಗಳನ್ನೂ, ಒಂದು ಸರವನ್ನೂ, ಕಿವಿಗಳಿಗೆ ಲೋಲಾಕುಗಳನ್ನೂ ಕೊಂಡು ಬಂದಳು.

ತೋರಿದಾಗ ಖರ್ಚು ಮಾಡುತ್ತಾಳೆಂದು ಮನಸ್ಸಿನಲ್ಲಿಯೇ ಕುದಿಯುತ್ತಿದ್ದ ಶಂಕರ ತಡೆಯಲಾರದೇ ಅಂದ.

"ಈ ಕಚಡಾ ಸಾಮಾನೆಲ್ಲಾ ಯಾಕೆ ಕೊಂಡು ಬರುತ್ತೀ, ಕನಕ"

"ಚೆನ್ನಾಯಿತು. ಬರೀ ಕೊರಳು, ಬರೀ ಕೈನಲ್ಲಿರುವುದೇ? ಯಾವು

ದಿದೆಯೋ ಅದರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕು. ಚಿನ್ನವೇ ಬೇಕೆಂದರೆ ನಮಗೆಲ್ಲಿ ನಡೆಯುತ್ತದೆ"

ಅವಳ ಉತ್ತರ ಅವನ ಬಾಯಿ ಮುಚ್ಚಿಸಿತ್ತು.

ಆಗಾಗ ಅವಳು ಕುಳಿತು ತನ್ನ ಒಡವೆಗಳಿಗೆ ಪಾಲಿಷ್ ಹಾಕುತ್ತಿದ್ದಳು. ಎಷ್ಟು ಉಜ್ಜಿದರೂ ಸರಿಯಾದ ಬಣ್ಣ ಬರಲಿಲ್ಲವೆಂದೂ ಅತೃಪ್ತಳಾಗುತ್ತಿದ್ದಳು. ಆಗೆಲ್ಲಾ ಶಂಕರನ ಮನಸ್ಸಿಗೆ ಚುಚ್ಚಿದಂತಾಗುತ್ತಿತ್ತು. ಆ ಒಡವೆಗಳನ್ನು ನೋಡಿದಾಗಲೆಲ್ಲಾ ಅಣಕಿಸಿದಂತಾಗುತ್ತಿತ್ತು. ಅವಳು "ನನಗೆ ಚಿನ್ನದ ಒಡವೆಗಳನ್ನೇ ಮಾಡಿಸಿಕೊಡಲಾರೆಯಾ ?" ಎಂದು ಕೇಳಿದಂತೆ ಆಗುತ್ತಿತ್ತು.

ಒಮ್ಮೆ ಅತ್ಯಾವಶ್ಯಕವಾದ ಆ ಒಡವೆಗಳನ್ನು ಮಾಡಿಸಿಕೊಡಬೇಕೆಂದು ಶಂಕರ ನಿರ್ಧರಿಸಿದ. ಮಾಡಿಸಿ ತಂದೂಕೊಟ್ಟ. ಕನಕಳಿಗೆ ಅದರಿಂದ ಪರಮಾನಂದವಾಯಿತು. ಅವಳ ಆನಂದವನ್ನು ನೋಡಿ, ತಾನು ಖರ್ಚುಮಾಡಿದಂತಹ ಹಣ ಅತ್ಯಲ್ಪವೆಂದು ಅವನಿಗೆ ಕಂಡಿತು.

ಹಣ ಅತ್ಯಲ್ಪವೆಂದು ಕಾಣುತ್ತಿದ್ದರೂ ಬೆಂಗಳೂರಿನಲ್ಲಿರುವ ಬ್ಯಾಂಕಿನಲ್ಲಿ ಹಣ ಕರಗುತ್ತಿರುವುದು ಮನಸ್ಸಿಗೆ ಬಂದಾಗ ಸ್ವಲ್ಪ ದಿಗಿಲಾಗುತ್ತಿತ್ತು. ದಿಗಿಲು ಪಡಬೇಕಾಗಿಲ್ಲ. ಒಂದು ವರ್ಷ. ಈ ಒಂದು ವರ್ಷ ಕಳೆದರೆ ವಕೀಲನಾಗುತ್ತಾನೆ. ಸಂಪಾದನೆ ಮಾಡಲು ಆರಂಭ ಮಾಡುತ್ತಾನೆ. ಅನಂತರ ಹೇಗೋ, ಹೇಗೋ ಆಗುತ್ತದೆ.

ಅದೃಷ್ಟವಶಾತ್ ಕ್ರಾಸ್‌ವರ್ಡ್‌ನಲ್ಲಿ ಲಕ್ಷ್ಮಿ ಒಲಿದು ಬಂದಿದ್ದುದರಿಂದ ಹಣದ ತೊಂದರೆ ಇರಲಿಲ್ಲ. ಅದೊಂದು ವೇಳೆ ಬರದೇ ಇದ್ದಿದ್ದರೆ ಕನಕಳ ಜೊತೆಯಲ್ಲಿ ಸಂಸಾರ ಮಾಡುವುದು ಸಾಧ್ಯವೇ ಆಗುತ್ತಿರಲಿಲ್ಲವೋ, ಏನೋ? ಅದು ಬರದೇ ಇದ್ದಿದ್ದರೆ ಏನು ಮಾಡುತ್ತಿದ್ದೆ ಎಂದು ಅವನ ಮನಸ್ಸು ಆಲೋಚನೆ ಮಾಡುತ್ತಿರಲಿಲ್ಲ. ಅದು ಬಂದಿತ್ತು. ಚೆಕ್ ಬರೆದು ಕಳಿಸಿದಂತೆಲ್ಲಾ ಹಣವು ಬರುತ್ತಿತ್ತು. ಹಾಗಾಗಿದ್ದರೆ ಹೀಗಾಗಿದ್ದರೆ ಯಾರಿಗೆ ಬೇಕಾಗಿದೆ?

ಇಂದಿನ ಜೀವನ, ಇಂದಿನ ಆಗುಹೋಗುಗಳು ಮುಖ್ಯ. ಅದರಲ್ಲಿಯೂ ತೊಡಕು ಕಂಡುಬರುತ್ತಿತ್ತು.

ಒಂದು ವಿಧವಾಗಿ ಕಳೆದ ವರ್ಷವೇ ಚೆನ್ನಾಗಿತ್ತು. ವ್ಯಾಸಂಗ ಮಾಡಲು ಬೇಕಾದ ಹಾಗೆ ಬಿಡುವು ಇದ್ದ ಹಾಗೆ ಕಾಣುತ್ತಿತ್ತು. ಓವಲೇ ಬೇಕೆಂಬ ಬಲಾತ್ಕಾರವೂ ಇರಲಿಲ್ಲ. ಒಂದು ವರ್ಷ ಫೇಲಾದರೆ ಏನೂ ಮುಳುಗಿ ಹೋಗುತ್ತಿರಲಿಲ್ಲ.

ಈಗ ಹಾಗಲ್ಲ. ಆದಷ್ಟು ಬೇಗ ಅವನು ಸ್ವತಂತ್ರ ಜೀವನವನ್ನು ಆರಂಭಿಸ ಬೇಕಾಗಿತ್ತು. ಅದಕ್ಕೆ ಬೇಕಾದಷ್ಟು ಓದಬೇಕು. ಹಗಲೂ ರಾತ್ರಿ ಓದಬೇಕು. ಓದಲು ಬಿಡುವೇ ಇಲ್ಲದಂತೆ ಭಾಸವಾಗುತ್ತಿತ್ತು. ಹೀಗೆಯೇ ಆಗಿ ಫೇಲಾಗಿ ಬಿಟ್ಟರೇನು ಗತಿ? ಅದು ಮನಸ್ಸಿಗೆ ಭಯವನ್ನು ಉಂಟು ಮಾಡುತ್ತಿತ್ತು.

ಇವೆಲ್ಲದಕ್ಕಿಂತಲೂ ಮನಸ್ಸಿಗೆ ಮುಜುಗರವನ್ನು ಉಂಟುಮಾಡುತ್ತಿದ್ದ ವಿಷಯವೂ ಒಂದಿತ್ತು. ಯಾರೊಂದಿಗೂ ಹೇಳಿಕೊಳ್ಳುವುದಕ್ಕಿಲ್ಲ ಮಾತನಾಡುವುದಕಿಲ್ಲ. ವಾಸುದೇವ, ಶಶಿಕಾಂತರಿದ್ದರೂ ಅವರಿಗೆ ಹೇಳುವುದಕ್ಕೆ ಆಗುತ್ತಿದ್ದಿತೋ ಇಲ್ಲವೋ ?

ಅದು ಅವನಿಗೂ ಕನಕಳಿಗೂ ಮಾತ್ರ ಸಂಬಂಧಿಸಿದ ವಿಷಯ.

ಒಂದಾನೊಂದು ಕಾಲದಲ್ಲಿ ಕನಕಳ ಸಂಬಂಧ ಅತ್ಯಂತ ಪ್ರಿಯವಾಗಿತ್ತು. ಅವಳು ಅವನಿಗೆ ರತಿಯನ್ನು ಹೇಳಿಕೊಡುತ್ತಿದ್ದಾಗ, ಹರ್ಷೋದ್ಗಾರದಿಂದ ತನ್ನನ್ನು ಸಮರ್ಪಿಸಿ ಕೊಳ್ಳುತ್ತಿದ್ದಾಗ ಎಷ್ಟು ಪ್ರಿಯವಾಗಿರುತ್ತಿತ್ತು ! ಈಗಲೂ ಅಷ್ಟೇ. ಕೆಲವು ದಿನಗಳು ರತಿ ಪ್ರಿಯವಾಗಿಯೇ ಇರುತ್ತದೆ. ಅವಳಿಗೆ ಒಡವೆಗಳನ್ನು ಮಾಡಿಸಿ ತಂದು ಕೊಟ್ಟ ಎರಡು ಮೂರು ದಿನ, ಅಚ್ಚ ಹಸುರಿನ ಮೇಲೆ ಅಚ್ಚಕಪ್ಪಿನ ಚಿತ್ತಾರಗಳನ್ನು ಪ್ರಿಂಟು ಮಾಡಿದ ರೇಷ್ಮೆ ಸೀರೆಯನ್ನು ತಂದು ಕೊಟ್ಟ ರಾತ್ರಿ, ಹೌದು. ಹಾಗೆಯೇ ಇತ್ತು.

ಅವೆಲ್ಲ ಸ್ವಪ್ನದಂತೆ ಕ್ಷಣಿಕ. ಉಳಿದೆಲ್ಲವೂ ಬರಡು ರತಿ.

ಕೆಲವು ಬಾರಿ ಆಲಂಗಿಸಿದಾಗ ಅವಳ ದೇಹದಲ್ಲಿ ವಿದ್ಯುತ್ ಸಂಚಲನವಾದಂತೆ ಭಾಸವಾಗುತ್ತಿತ್ತು. ನೀರಿನಲ್ಲಿರುವ ಪುಟ್ಟ ಮೀನನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡಾಗ ಅದು ಕುಣಿದು ಕುಪ್ಪಳಿಸುತ್ತಿದ್ದಂತೆ ಚೇತನ ಮಯವಾಗಿರುತ್ತಿದ್ದವಳ ಶರೀರ.

ಸೂಕ್ಷ್ಮವಾಗಿ ಹೇಳಿದಾಗ ಅದು ಸ್ವಾಭಾವಿಕವಲ್ಲವೆಂದಿದ್ದಳು. ಸುಳ್ಳು, ಕೃತಕಗಳು ಹಲವಾರು ಬಾರಿ ಮನಸ್ಸಿಗೆ ಆನಂದವನ್ನು ಉಂಟುಮಾಡುತ್ತವೆ. ಶಂಕರನ ಪಾಲಿಗೆ ಆ ಸುಳ್ಳು, ಆ ಕೃತಕಗಳು ಸಹ ಇಲ್ಲವಾಗಿದ್ದವು.

ಅವನು ಸ್ಪರ್ಶಿಸಿದಾಗ ಅವಳಿಗೇನೂ ಆಗುತ್ತಿರಲಿಲ್ಲ. ಅವಳನ್ನು ಚೇತನ ಗೊಳಿಸಲಾಗುತ್ತಿರಲಿಲ್ಲ. ಅವಳಲ್ಲಿ ಯಾವ ಪ್ರತಿಕ್ರಿಯೆಯನ್ನು ಕಾಣಲಾಗುತ್ತಿರಲಿಲ್ಲ. ರತಿ ಕಾಲದಲ್ಲಿ ಕೇವಲ ರಬ್ಬರಿನ ಗೊಂಬೆಯಂತೆ ಅವನ ಪಕ್ಕದಲ್ಲಿ ಬಿದ್ದಿರುತ್ತಿದ್ದಳು. ಹಾಗೆ ಬಿದ್ದಿರುವ ಬದಲು ಸುಳ್ಳು ಅಭಿನಯವನ್ನಾದರೂ ಮಾಡಿದರೆ ?

ಕೆಲವು ಬಾರಿ ಅವಳು ಚೇತನಾಮಯಳಂತೆ ನಡೆದುಕೊಳ್ಳುತ್ತಿದ್ದಳು. ಆದರೆ, ಆದರೆ ಅಗದು ಅಭಿನಯದಂತೆ ಕಂಡುಬರುತ್ತಿತ್ತು. ಆದರಿಂದ ಮನಸ್ಸಿಗೆ ತೃಪ್ತಿಯಾಗುತ್ತಿರಲಿಲ್ಲ.

ಈ ಸ್ಥಿತಿಯು ಶಂಕರನನ್ನು ಉತ್ಸಾಹ ರಹಿತನನ್ನಾಗಿ ಮಾಡುತ್ತಿತ್ತು.

ಗಂಡಸನ್ನು ಪ್ರಚೋದನೆ ಮಾಡುವುದು, ಉತ್ಸಾಹ ಪೂರ್ಣನನ್ನಾಗಿ ಮಾಡುವುದು ಅವಳಿಗೆ ಗೊತ್ತೆಂದು ಅವನು ಅನುಭವದಿಂದ ಕಂಡುಕೊಂಡಿದ್ದ. ವೀಣೆಯನ್ನು ಕೈಗೆತ್ತಿಕೊಂಡು, ಶೃತಿ ಮಾಡಿ, ಬಗೆಬಗೆಯಾಗಿ ರಾಗಾಲಾಪನೆ ಮಾಡಿ, ತಂತಿ ಕಿತ್ತುಹೋಗುವಷ್ಟು ರಭಸದಿಂದ ಬಾರಿಸಬಲ್ಲ ವಿದುಷಿಯಂತೆ ರತಿಯಲ್ಲಿ ಗಂಡು ದೇಹವನ್ನು ಅವಳು ಆಡಿಸಬಲ್ಲವಳಾಗಿದ್ದಳು. ಅದು ಅವನಿಗೆ ಗೊತ್ತಿತ್ತು.

ಈಗ ಹಾಗಲ್ಲ. ಅವಳು ಹಾಸಿಗೆಯ ಮೇಲೆ ಬಿದ್ದಿರುತ್ತಾಳೆ. ಅವಳು ಬಳಿಗೆ ಬಂದಾಗ ಬೇಡವೆನ್ನುವುದಿಲ್ಲ. ಆದರೆ ಅವಳು ಅವನಿಗೆ ಕೊಡುವುದು ಜೀವವಿಲ್ಲದ ಶರೀರವನ್ನು.

ಒಂದು ರಾತ್ರಿ ಅವಳನ್ನು ಆಲಂಗಿಸಿ ಮಲಗಿಕೊಂಡಿದ್ದಾಗ ಶಂಕರ ಕೇಳಿದ.

"ನಿನ್ನಲ್ಲಿ ಬಹಳ ಬದಲಾವಣೆಯಾಗಿದೆ, ಕನಕ."

"ಏನೂ ಇಲ್ಲ. ನಾನು ಮೊದಲಿನಂತೆಯೇ ಇದ್ದೇನೆ."

"ಇಲ್ಲ ಕನಕ. ಮೊದಲು ನಾನು ಈ ರೀತಿ ನಿನ್ನನ್ನು ಆಲಂಗಿಸಿ

ದಾಗ ನೀನು ಹೇಗಿರುತ್ತಿದ್ದೆ ? ಅದನ್ನು ನೆನೆಸಿಕೊಂಡರೆ ಆ ಕನಕಳೇ ಬೇರೆ, ಈ ಕನಕಳೇ ಬೇರೆ ಎಂದು ಕಾಣುವಷ್ಟು ವ್ಯತ್ಯಾಸವಾಗಿದೆ."

"ಅದರ ಕಾರಣ ನೀವು ತಿಳಿದು ಕೊಂಡಿರುವಂತೆ ಅಲ್ಲ. ಅದೇನೆಂಬುದನ್ನು ನಿಮಗೆ ಹೇಳಿದ್ದೇನಲ್ಲಾ."

ಅವಳು ಹೇಳಿದ್ದುದು ಅವನಿಗೆ ಗೊತ್ತಿತ್ತು. ಆದರೂ ಕೇಳಿದ. ಈಗಲಾದರೂ ಉತ್ತರವು ಬೇರೆಯಾಗಿರುತ್ತದೋ ಎಂಬ ಆಸೆಯಿಂದ ಕೇಳಿದ.

"ಹೇಳಿದ್ದೀ. ಆದರದು ನನಗೆ ಸರಿಯಾಗಿ ಅರ್ಥವಾಗಿಲ್ಲ, ಕನಕ."

"ಇನ್ನು ಅರ್ಥವಾಗುವಂತೆ ಹೇಳುವುದು ಹೇಗೆ ? ಈಗ ನಾವಿರುವುದೇ ಸ್ವಾಭಾವಿಕ"

"ಈ ಸ್ವಾಭಾವಿಕತೆಗಿಂತಲೂ ಆ ಕೃತಕವೇ ಪ್ರಿಯವಾಗಿರುತ್ತಿತ್ತು."

ಮುನಿದು ಕೊಂಡ ಹಾಗೆ ಅವಳು ಹೇಳಿದಳು.

"ಯಾವಾಗಲೂ ನಾಟಕವಾಡುತ್ತಿರುವುದಕ್ಕೆ ಆಗುತ್ತದೆಯೇ?"

ಅವಳನ್ನು ದಾರಿಗೆ ತರಲು ಪ್ರಯತ್ನ ಮಾಡಬೇಕಾಗಿತ್ತು.

"ಹಾಗಾದರೆ ಸುಖವೆಂದುವೇ ನನಗೆ ಸರಿಯಾಗಿ ಗೊತ್ತಿಲ್ಲ, ಕನಕ. ಅಂದು ಆ ಜೀವನವನ್ನು ನಾನು ಸುಖವೆಂದು ಕೊಂಡಿದ್ದೆ. ಅದು ಅಭಿನಯವೆನ್ನುವುದಾದರೆ ನೀನು ನನಗೆ ಅದನ್ನು ತೋರಿಸ ಬಾರದಾಗಿತ್ತು."

"ಅಂದು ನಿಮಗೆ ಅದು ಬೇಕಾಗಿತ್ತು. ಆದರಿಂದ ಹಾಗೆ ಮಾಡುತ್ತಿದ್ದೆ"

"ಇಂದು ಅದೇ ನನಗೆ ಬೇಕು-ಎಂದರೆ"

"ಅದಕ್ಕೆ ನಾನು ಹೇಳಿದ್ದು. ಯಾವಾಗಲೂ ನಾಟಕ ಆಡುತ್ತಿರುವುದಕ್ಕೆ ಆಗುವುದಿಲ್ಲವೆಂದು"

"ನಾಟಕ-ಅಭಿನಯಗಳ ಮಾತಲ್ಲ. ಅದೊಂದು ನನಗೆ ಬೇಕಾಗಿಲ್ಲ."

"ಹಾಗಾದರೆ ಈಗ ನಾವಿರುವುದು ಸರಿಯಾಗಿಯೇ ಇದೆಯಲ್ಲಾ"

"ಹಾಗಲ್ಲ, ಕನಕ. ನಾನು ಹೇಳುವುದನ್ನು ಅರ್ಥಮಾಡಿಕೋ."

"ಹೇಳಿ"

"ನೋಡು. ರತಿಯಲ್ಲಿ ಗಂಡು ಹೆಣ್ಣುಗಳಿಬ್ಬರೂ ಸರಿಸಮಾನರು. ಇಬ್ಬರೂ ಉತ್ಸಾಹಪೂರ್ಣರಾಗಿ, ಚೈತನ್ಯ ಮಯರಾಗಿದ್ದರೇನೇ ಅದರಲ್ಲಿ ಸುಖ ವುಂಟಾಗುವುದು."

" ಹೂಂ "

" ಗಂಡಿನಲ್ಲಿ ಉತ್ಸಾಹ ತೃಪ್ತಿಗಳನ್ನು ಕಾಣದಿದ್ದರೆ ಹೆಂಗಸಿಗೆ ಸುಖವಾಗುವುದಿಲ್ಲ. ಹಾಗೆಯೇ ಹೆಣ್ಣಿನಲ್ಲಿ ಉತ್ಸಾಹ ತೃಪ್ತಿಗಳನ್ನು ಕಾಣದಿದ್ದರೆ ಗಂಡಸಿಗೂ ಸುಖವಾಗುವುದಿಲ್ಲ. "

" ಹೂಂ "

" ಗಂಡುಹೆಣ್ಣುಗಳಲ್ಲಿ ಸಮವಾದ ಉತ್ಸಾಹಗಳಿರುವುದೇ ಸ್ವಾಭಾವಿಕ"

"ಹೂಂ"

"ನಾನು ಅರ್ಥ ಮಾಡಿಕೋ ಎಂದು ಹೇಳಿದುದು ಇದನ್ನೇ, ಕನಕ. ಹೆಣ್ಣು ಗಂಡಿಗೆ ಮೈ ಒಪ್ಪಿಸುವಷ್ಟೇ ಸಾಲದು. ರತಿಯಲ್ಲಿ ಅವಳೂ ಉತ್ಸಾಹವನ್ನು ತೋರಬೇಕು."

"ಹೂಂ"

"ಅಂತಹ ಉತ್ಸಾಹ ನಿನ್ನಲ್ಲಿ ಕಾಣುತ್ತಿಲ್ಲ, ಕನಕ."

"ನೀವು ಹೇಳುವ ಉತ್ಸಾಹ ತಂದುಕೊಳ್ಳುವುದು ನನಗೆ ಕಷ್ಟ."

"ಅದೇಕೆ?"

"ಅದೇಕೋ ಗೊತ್ತಿಲ್ಲ. ಎಷ್ಟು ಬೇಕೆಂದುಕೊಂಡರೂ ನನಗೆ ನೀವು ಹೇಳುವ ಉತ್ಸಾಹ ಬರುವುದಿಲ್ಲ."

ಅದೇಕೆ? ಹೇಳಲು ಅವಳಿಂದ ಆಗಲಿಲ್ಲ.

ಬಹಳ ಆಲೋಚನೆ ಮಾಡಿದನಂತರ ಒಂದು ಬಗೆಯಾಗಿ ಶಂಕರನಿಗೆ ಕಾರಣವೇನಿರಬಹುದೆಂಬುದು ಹೊಳೆಯಿತು.

ಎಷ್ಟೋ ದಿನ ಅವಳು ಸೂಳೆಯಾಗಿ ಮೈ ಮಾರಿಕೊಂಡು ಬದುಕಿದ್ದಾಳೆ. ಕಾಸು ಕೊಟ್ಟು ಬಂದವರನ್ನೆಲ್ಲಾ ಆಲಂಗಿಸಿದ್ದಾಳೆ. ಅವರು ಆಲಂಗಿಸುವಾಗ ಸಹಿಸಿಕೊಂಡಿದ್ದಾಳೆ. ಆಲಿಂಗನವು ಅವಳಿಗೆ ಸುಖವಾಗಿದ್ದುದು ಹೋಗಿ ಒಂದು ಕರ್ತವ್ಯ ಕರ್ಮವಾಗಿದೆ. ಗಂಡಸರು ಆಲಂಗಿಸುವುದರಿಂದ ಅವಳಿಗೇನೂ ಆಗುವುದಿಲ್ಲ. ಅವರು ಪ್ರೇಮ ಚೇಷ್ಟೆಗಳನ್ನು ಮಾಡುವುದರಿಂದ, ಸ್ಪರ್ಶ ಮಾಡುವುದರಿಂದ ಅವಳಲ್ಲಿ ಯಾವ ಬಗೆಯ ಪ್ರತಿಕ್ರಿಯೆಯೂ ಆಗುವುದಿಲ್ಲ. ಅವಳು ಸಣ್ಣ ವಯಸ್ಸಿನವಳಾದರೂ,

ಕೆಲವೇ ದಿನ ವೇಶ್ಯಾವೃತ್ತಿಯನ್ನು ಮಾಡಿದ್ದರೂ ಕನಕಳ ದೇಹ ಮನಸ್ಸುಗಳ ಮೇಲೆ ಅಪಾರವಾದ ಪರಿಣಾಮವಾಗಿದೆ.

ಸಣ್ಣ ರಬ್ಬರ್ ಚೆಂಡನ್ನು ಪುಟ ಹೊಡೆದು, ಪುಟ ಹೊಡೆಯುತ್ತಿದ್ದರೆ ಅದು ಒಮ್ಮೆ ಶಿಥಿಲವಾಗುತ್ತದೆ. ಶಿಥಿಲವಾದನಂತರ ಅದೇ ಚೆಂಡನ್ನು ನೆಲದ ಹೊಡೆದರೆ ಅದು ಮೊದಲಿನಂತೆ ಪುಟ ಹಾರುವುದಿಲ್ಲ.

ಕನಕಳ ರತಿ ಜೀವನ ಹಾಗಾಗಿದೆ.

ಈ ಕಾರಣ ತೋರಿದೊಡನೆಯೇ ಕನಕ ತನಗೆ ನಿರುಪಯುಕ್ತಳೇ ಎಂದು ಮನಸ್ಸು ಕೇಳಿತು. ಏನಾದರೇನು ? ಅವನು ಬಹಳ ಮುಂದೆ ಬಂದು ಬಿಟ್ಟಿದ್ದಾನೆ. ಪುನಃ ಹಿಂದೆ ಹೋಗುವಂತೆ ಇಲ್ಲ. ಅವಳು ಹೇಗೇ ಇದ್ದರೂ ತನ್ನ ಪ್ರೇಯಸಿ. ರತಿಕ್ರಿಯೆ, ಅದರಿಂದ ಪ್ರಾಪ್ತವಾಗುವಂತಹ ಸುಖ ಇಷ್ಟೇ ಪ್ರೇಮವೇನು ? ಅಲ್ಲ. ತಾನು ಕನಕಳನ್ನು ಪ್ರೀತಿಸುತ್ತಿರುವುದು ನಿಜವಾದರೆ ಇಂತಹ ಸಣ್ಣ ಕಾರಣಕ್ಕಾಗಿ ಮನಸ್ಸು ಕೆಡಿಸಿಕೊಳ್ಳಬಾರದು.

ಕೆಲವು ಬಾರಿ ಅದು ಸಣ್ಣ ಕಾರಣವಾಗಿ ಕಂಡುಬರುವುದಿಲ್ಲ. ದೊಡ್ಡ ಕಾರಣವಾಗಿ ಸಾಗುತ್ತವೆ. ಆಗ ಮತ್ತೊಂದು ಬಗೆಯಾದ ಆಲೋಚನೆಯು ಬರುತ್ತದೆ.

ಇದು ತನ್ನ ಪರೀಕ್ಷೆ ಎಂದುಕೊಳ್ಳುತ್ತಾನೆ. ಅವಳನ್ನು ಉದ್ಧಾರ ಮಾಡುವ ಕೆಲಸಗಳಲ್ಲಿ ಇದು ಒಂದು. ಹಿಂದೆ ಅನೇಕರು ಸ್ಪರ್ಶಿಸಿ, ಸ್ಪರ್ಶಿಸಿ ಅವಳಿಗೀಗ ಸ್ಪರ್ಶನ ಜ್ಞಾನವಿಲ್ಲದಿರಬಹುದು. ಆದರೆ ಇನ್ನೂ ಅವಳದು ಸಣ್ಣ ವಯಸ್ಸು. ಎಳೆಯ ದೇಹ. ಎಳೆಯ ಮನಸ್ಸು. ಪ್ರನಃ ಅವಳಲ್ಲಿ ಚೈತನ್ಯವು ಬರುವುದೇ ಇಲ್ಲವೇನು? ಬರುತ್ತದೆ. ತಾನು ಅವಳ ಸ್ಪರ್ಶಜ್ಞಾನವನ್ನು ಪ್ರಚೋದಿಸಲಾಗುತ್ತದೆ. ಬಿಗಿದು ಹಿಡಿದ ತಂತಿಯನ್ನು ಮಿಡಿದರೆ ಹೃದಯಾಹ್ಲಾದಕರವಾದ ಸ್ವರ ಹೊರಡುವಂತೆ ಸ್ಪರ್ಶಿಸುವುದರಿಂದ ಅವಳಲ್ಲಿ ಚೈತನ್ಯ ಉಂಟುಮಾಡಲಾಗುತ್ತದೆ.

ಅದಕ್ಕೇಕೆಲಕಾಲ ಕಾಯಬೇಕಾಗಬಹುದು.

ಕಾದರೇನಂತೆ ! ಜೀವನದ ಮಧು ಮಧುರ ದಿನಗಳಿಗಾಗಿ ಸ್ವಲ್ಪ ಕಾದರೇನಂತೆ ?

## ೧೨

ಶಂಕರ ನಿರೀಕ್ಷಿಸದೆಯೇ ಇದ್ದಂತಹ ಘಟನೆಯೊಂದು ನಡೆಯಿತು.

ಅವನ ತಂದೆ ಆನಂದರಾಯರು ತಾವು ಯಾರೋ ಸ್ನೇಹಿತರನ್ನು ನೋಡುವುದಕ್ಕಾಗಿ ಬೊಂಬಾಯಿಗೆ ಹೋಗಬೇಕಾಗಿವೆಯೆಂದೂ, ದಾರಿಯಲ್ಲಿ ಇಳಿದು ಒಂದು ದಿನವಿದ್ದು ಮಗನನ್ನು ನೋಡಿಕೊಂಡು ಹೋಗುವುದಾಗಿಯೂ ಕಾಗದಬರೆದಿದ್ದರು.

ಆ ಕಾಗದ ನೋಡಿ ಶಂಕರನಿಗೆ ಆಶ್ಚರ್ಯವಾಯಿತು. ಅವನಿಗೆ ಗೊತ್ತಿದ್ದ ಹಾಗೆ ಬೊಂಬಾಯಿನಲ್ಲಿ ಅವನ ತಂದೆಗೆ ಯಾವ ಸ್ನೇಹಿತರೂ ಇರಲಿಲ್ಲ. ಅವರು ಬೊಂಬಾಯಿಗೆ ಹೋಗಬೇಕಾಗಿದೆ ಎಂದು ಬರೆದಿರುವುದು ಕೇವಲ ನೆಪ. ಅವರು ಬೆಳಗಾವಿಗೆ ಬರುತ್ತಾರೆ. ತನ್ನನ್ನು ನೋಡಿಕೊಂಡು ಹೋಗುವುದಕ್ಕೆ ಬರುತ್ತಾರೆಂದು ಅವನಿಗೆ ಅರ್ಥವಾಯಿತು.

ಇದ್ದಕ್ಕಿದ್ದ ಹಾಗೆಯೇ ಅವರೇಕೆ ಬರುತ್ತಾರೆ ?

ಇನ್ನೂ ಅವನು ಬೆಂಗಳೂರಿನಿಂದ ಬಂದು ಮೂರು ತಿಂಗಳುಗಳೂ ಸಹ ಆಗಿಲ್ಲ. ಹಾಗಿರುವಾಗ ತನ್ನನ್ನು ನೋಡಬೇಕಾದ ಕೆಲಸವೇನಿದೆ ?

ಕಳೆದ ವರ್ಷವೆಲ್ಲಾ ಅವನು ಬೆಳಗಾವಿಯಲ್ಲಿಯೇ ಇದ್ದ. ಆಗವರು ಇಲ್ಲಿ ಬಂದಿರಲಿಲ್ಲ. ಹಣ ಕಳಿಸುವಾಗ ಸಂಪ್ರದಾಯ ಪ್ರಕಾರವಾಗಿ ಒಂದು ಕಾಗದವನ್ನು ಬರೆಯುವುದರ ವಿನಾ ಕಾಗದಗಳನ್ನು ಸಹ ಬರೆಯುತ್ತಿರಲಿಲ್ಲ. ಅಂತಹವರು ಈಗ ತನ್ನನ್ನು ನೋಡಲು ಬರಬೇಕಾದ ಆವಶ್ಯಕತೆಯೇನು ಬಂದಿದೆ.

ತಾನು ಕನಕಳೊಡನೆ ಸಂಸಾರ ಮಾಡುತ್ತಿರುವುದು ಅವರಿಗೆ ಗೊತ್ತಾಗಿ ಹೋಗಿದೆಯೇನು ? ಹೇಗೆ ಗೊತ್ತಾಗುವುದು ಸಾಧ್ಯ. ಅವನುಎಷ್ಟು ಗುಟ್ಟಾಗಿ ಮುಚ್ಚು ಮರೆಯಿಂದ ಇದ್ದಾನೆ.

ಅವರಿಗೆ ವಿಷಯ ಗೊತ್ತಾಗಿಯೇ ಇದೆಎಂದು ಅವನ ಮನಸ್ಸು ಹೇಳುತ್ತಿತ್ತು. ಗೊತ್ತಾದ ಬಗೆ ಹೇಗೆ ? ಕಾರಣಗಳನ್ನು ಹುಡುಕುತ್ತಾ ಹೋದರೆ ನೂರು ಕಾರಣಗಳನ್ನು ಹೇಳಬಹುದು.

ಮುಖ್ಯವಾಗಿ ಯಾರೋ ಅವನಿಗಾಗದವರು ಆನಂದರಾಯರಿಗೆ ಕಾಗದ ಬರೆದಿರಬಹುದು.

ಅವನಿಗಾಗದವರು ಬೆಳಗಾವಿಯಲ್ಲಿ ಯಾರಿದ್ದಾರೆ ? ತಿಳಿದಂತೆ ಯಾರೊಂದಿಗೂ ಅವನು ನಿಷ್ಠೂರ ಮಾಡಿಕೊಂಡಿಲ್ಲ. ಜಗಳವಾಡಿಲ್ಲ. ಅಪ್ರಿಯವಾಗಿ ಸಹ ಮಾತನಾಡುವುದಿಲ್ಲ.

ತನಗೆ ಕಲ್ಯಾಣವನ್ನು ಉಂಟುಮಾಡುತ್ತೇನೆಂಬ ಅಭಿಪ್ರಾಯದಿಂದ ವಾಸುದೇವನೋ, ಶಶಿಕಾಂತನೋ ಬರೆದಿರಬಹುದೋ? ಯಾವಾಗಲಾದರೂ ಒಂದೊಂದುಬಾರಿ ಹಾಗೆ ಬರೆದಿರಬಹುದೆಂದು ತೋರುತ್ತಿತ್ತು. ಆದರೆ ಅವರುಗಳು ಆರೀತಿ ಅನ್ಯಥಾ ವರ್ತಿಸುವವರಲ್ಲವೆಂದು ಮನಸ್ಸು ಮೇಲಿಂದ ಮೇಲೆ ಹೇಳುತ್ತಿತ್ತು.

ಬಂದರೆ ಅವರು ಯಾವಾಗ ಬರಬಹುದು ?

ಆ ಕಾಗದದಲ್ಲೂ ಅಂತಹ ಯಾವ ಸೂಕ್ಷ್ಮವೂ ಇಲ್ಲ. ಯಾವಾಗ ಬರುತ್ತೇನೆ ಏನು ಎಂಬುದನ್ನು ಅವರು ಬರೆದಿಲ್ಲ.

"ಬೊಂಬಾಯಿಗೆ ಹೋಗಬೇಕೆಂದಿದೆ. ಆಗ ದಾರಿಯಲ್ಲಿ ಒಂದುದಿನ ಇಳಿದು ನಿನ್ನನ್ನು ನೋಡಿಕೊಂಡು ಹೋಗಬೇಕೆಂದು ಕೊಂಡಿದ್ದೇನೆ." ಎಂದು ಮಾತ್ರ ಬರೆದಿದ್ದರು.

ಯಾವಾಗ ಬರುತ್ತಾರೆಯೋ ? ಅಂತೂ ಅನಿರೀಕ್ಷಿತವಾಗಿ ಇದ್ದಕ್ಕೆ ಇದ್ದ ಹಾಗೆಯೇ ಬಂದು ಇಳಿದು ಬಿಡುತ್ತಾರೆ.

ಬೆಳಗಾವಿಗೆ ಬಂದ ನಂತರ ಕ್ಷೇಮವಾಗಿ ಊರುಸೇರಿದ್ದುದಾಗಿಯೂ, ಕಾಲೇಜಿಗೆಸೇರಿದುದಾಗಿಯೂ, ಮಾಮೂಲಿನಂತೆ ಹಾಸ್ಟಲಿನಲ್ಲಿಯೇ ಇರುವುದಾಗಿಯೂ ಬರೆದಿದ್ದ.

ಅವರು ಬಂದರೆ ತಾನು ಹಾಸ್ಟಲಿನಲ್ಲಿಲ್ಲದಿರುವುದು ಗೊತ್ತಾಗಿ ಹೋದರೆ ಅನಾಹುತವಾಗುತ್ತದೆ.

ಎಷ್ಟೇಖರ್ಚಾದರೂ ಹಾಸ್ಟಲಿನಲ್ಲಿ ಒಂದುಜಾಗ ಪಡೆಯಬೇಕೆಂದುಕೊಂಡ. ಆದರೆ ಈ ಸಮಯದಲ್ಲಿ ಅಲ್ಲಿ ಸೀಟು ಸಿಗುವುದು ಕಷ್ಟ.

ಕಾಗದ ಬಂದ ದಿನವೇ ಸಾಯಂಕಾಲ ತನ್ನಸ್ನೇಹಿತ ಕೃಷ್ಣಸ್ವಾಮಿಯನ್ನು ಕಂಡು ಮಾತನಾಡಿದ. ಅವನು ಮೈಸೂರು ದೇಶದವನೇ. ತುಮಕೂರಿನ ಹುಡುಗ. ಇವನಂತೆಯೇ ಬೆಳಗಾವಿಗೆ ಬಂದು ಓದುತ್ತಿದ್ದ. ಹಾಸ್ಟಲಿನಲ್ಲಿ ಅವನಿಗೆ ಸೀಟಿತ್ತು.

ಅವನನ್ನು ನೋಡಿ ಒಂದು ವಿಧವಾಗಿ ತನ್ನ ವಿಷಯ ತಿಳಿಸಿದ.

"ನೋಡು ಕೃಷ್ಣಸ್ವಾಮಿ ಈ ವರ್ಷ ನನಗೆ ಹಾಸ್ಟಲಿನಲ್ಲಿ ಸೀಟು ಸಿಕ್ಕಲಿಲ್ಲ. ಬೇರೆ ರೂಮು ಮಾಡಿಕೊಂಡು ಕಾಲ ಹಾಕುತ್ತಿದ್ದೇನೆ. ಮನೆಯವರು ಪೇಚಾಡುತ್ತಾರೆಂದು ಹಾಸ್ಟಲಿನಲ್ಲಿ ಸೀಟು ಸಿಕ್ಕಿರುವುದಾಗಿ ಬರೆದಿದ್ದೆ. ಈಗ ನಮ್ಮ ತಂದೆ ಯಾಕೋಬೊಂಬಾಯಿಗೆ ಹೋಗುತ್ತಾರೆ. ಹೋಗುತ್ತಾ ನನ್ನನ್ನು ನೋಡುವುದಕ್ಕಾಗಿ ಬಂದು ಇಲ್ಲಿರುತ್ತಾರೆ. ಆಗ ನಾನು ಹಾಸ್ಟಲಿನಲ್ಲಿಲ್ಲದಿರುವುದು ಗೊತ್ತಾದರೆ ಕೋಪ ಮಾಡಿಕೊಳ್ಳುತ್ತಾರೆ.

ಕೃಷ್ಣಸ್ವಾಮಿ ಶಂಕರನು ಹೇಳುವುದನ್ನೆಲ್ಲಾ ಕೇಳಿ ಹೂಗುಟ್ಟುತ್ತಿದ್ದ. ಈ ಮಾತಿನ ಕೊನೆಯು ಎಲ್ಲಿ ಮುಟ್ಟುತ್ತದೆ ಎಂದು ಯೋಚಿಸುತ್ತಿದ್ದ.

"ನಿನ್ನಗೆಸ್ಟಾಗಿ ನಾನು ಇಲ್ಲಿ ಎರಡು ಮೂರು ದಿನ ಇರುತ್ತೇನೆ. ನಿನ್ನ ರೂಂ ಮೇಟಗೆ ಹೇಳಿ ಅವನನ್ನು ಬೇರೇ ರೂಮಿಗೆ ಕಳಿಸಿಬಿಡು. ನಮ್ಮಪ್ಪ ಹೋಗುವವರೆಗೆ ನಾನು ಹಾಸ್ಟಲಿನಲ್ಲಿರುವಂತೆ ಇಲ್ಲಿರುತ್ತೇನೆ. ಅಷ್ಟು ಮಾಡಿಕೊಟ್ಟರೆ ನಿನಗೆ ಪುಣ್ಯ ಬರುತ್ತದೆ."

ಈ ಕೋರಿಕೆಯನ್ನು ಸಲ್ಲಿಸುವುದು ಕೃಷ್ಣಸ್ವಾಮಿಗೆ ಕಷ್ಟವಾಗಿ ಇರಲಿಲ್ಲ. ಅವನು ಒಪ್ಪಿಕೊಂಡ.

ಆ ದಿನವೇ ಹಾಸ್ಟಲಿನಲ್ಲಿ ಹೋಗಿರುವ ಅವಶ್ಯಕತೆಯೇನೂ ಇರಲಿಲ್ಲ. ಸಾಧಾರಣವಾಗಿ ಅವನ ತಂದೆ ಅರ್ಧ ರಾತ್ರಿಯಲ್ಲಿ ಬಂದಿಳಿಯುವುದಿಲ್ಲ. ಅವರಿದುವರೆಗೆ ಬೆಳಗಾಂಗೆ ಬಂದಿಲ್ಲ. ಅಷ್ಟು ಹೊತ್ತಿನಲ್ಲಿ ಹಾಸ್ಟಲು ಹುಡುಕುವುದು ತೊಂದರೆಯಾಗುತ್ತದೆ. ಅವರು ಹಗಲು ಹೊತ್ತು ಬರುತ್ತಾರೆ. ಆದರೆ ನಾಲ್ಕು ಗಂಟೆಯ ಸಮಯದಲ್ಲಿ ದಿನವೂ ಕಾಲೇಜು ಮುಗಿದ ನಂತರ ತಂದೆ ಬರುವಿಕೆಯನ್ನು ನಿರೀಕ್ಷಿಸುತ್ತಾ ಒಂದೊಂದು ಗಂಟೆಯ ಹೊತ್ತು ಹಾಸ್ಟಲಿನಲ್ಲಿಯೇ ಕಳೆಯುತ್ತಿದ್ದ.

ಅವರು ರಾತ್ರಿಯ ಹೊತ್ತು ಬೆಳಗಾಂನಲ್ಲಿ ಬಂದಿಳಿದರೆ ವಾಸ್ತವವಾಗಿ ಶಂಕರನಿಗೆ ತೊಂದರೆಯಾಗುತ್ತಿತ್ತು. ಅದರಿಂದ ಅವರಿಗೊಂದು ಕಾಗದ ಬರೆದಿದ್ದ. ರಾತ್ರಿ ಬಂದಿಳಿಯುವುದಕ್ಕಿಂತ ಹಗಲು ಹೊತ್ತು ಬಂದರೆ ಒಳ್ಳೆಯದೆಂದೂ ಯಾವ ದಿನ, ಯಾವ ರೈಲಿಗೆ ಬರುವ ಉದ್ದೇಶವಿದೆಯೋ ತಿಳಿಸಿದರೆ ತಾನು ರೈಲ್ವೇ ಸ್ಟೇಷನ್ನಿಗೆ ಬಂದು ನೋಡುವುದಾಗಿ ಬರೆದಿದ್ದ.

ಅವರಿಂದ ಉತ್ತರ ಬಂದಿರಲಿಲ್ಲ. ಯಾವಾಗ ಬರುವರೋ, ಏನಾಗುವುದೋ ಎಂದು ಒದ್ದಾಡುತ್ತಲೇ ಇದ್ದ.

ತನಗೆ ತಂದೆಯಿಂದ ಕಾಗದ ಬಂದ ವಿಷಯ ಶಂಕರ ಕನಕಳಿಗೆ ಹೇಳಿರಲಿಲ್ಲ. ಆದರೆ ಅವನ ಒದ್ದಾಟವನ್ನು ನೋಡಿ ಏನೋ ಹೆಚ್ಚು ಕಡಿಮೆಯಾಗಿದೆ ಎಂಬುದಾಗಿ ಅವಳು ಊಹೆ ಮಾಡಿದಳು.

ಮೂರನೆಯದಿನ ತಡೆಯಲಾರದೇ ಪ್ರಶ್ನೆಮಾಡಿದಳು.

"ಏನೋ ಒಂದು ತರಹ ಇದ್ದೀರಲ್ಲಾ, ಏನಾಗಿದೆ ? "

ಚೈತನ್ಯ ರಹಿತವಾದ ನಗುವನ್ನು ನಕ್ಕು ಅವನು ಹೇಳಿದ.

"ಏನು ಬಂತು ? ಏನೂ ಇಲ್ಲವಲ್ಲ"

"ಅಲ್ಲ. ಈ ಮೂರುನಾಲ್ಕು ದಿನಗಳಿಂದ ನೀವೇನೋ ಚಿಂತಾಕ್ರಾಂತರಾಗಿರುವಂತೆ ಕಂಡುಬರುತ್ತದೆ."

"ಅಂತಹ ದೇನೂ ಇಲ್ಲ, ಕನಕ. ನಾನೇನು ಚಿಂತಾಕ್ರಾಂತನಾಗಿಲ್ಲ. ನನಗೆ ಚಿಂತೆಯೇನು ಬಂದಿತು."

"ಇಲ್ಲ. ಸುಳ್ಳು ಹೇಳುತ್ತಿದ್ದೀರಿ"

"ಸುಳ್ಳೇಕೆ ಹೇಳಬೇಕು"

"ನನ್ನ ಮೇಲೆ ನಿಮಗೇನೋ ಅಸಮಾಧಾನವಾಗಿರಬೇಕು"

"ಇಲ್ಲ. ಖಂಡಿತವಾಗಿ ಇಲ್ಲ"

"ಹಾಗಾದರೆ ಇನ್ನೇಕೆ ಹಾಗಿದ್ದೀರಿ ; ಹೇಳಿ"

ಇಂದಲ್ಲದಿದ್ದಿದ್ದರೆ ಎಂದಾದರೂ ಅವಳಿಗೆ ಗೊತ್ತಾಗಬೇಕಾಷ್ಟೇ. ಈ ದಿನವೇ ಯಾಕೆ ಹೇಳಿಬಿಡಬಾರದು. ಇದ್ದಕ್ಕಿದ್ದಂತೆಯೇ ತನ್ನ ತಂದೆ ಬರುವುದಾಗಿ ಬರೆದಿದ್ದ ವಿಷಯತಿಳಿಸಿದ. "ಯಾರೋ ಪಾಪಿಗಳು ಹೊಟ್ಟೆಯುರಿಯಿಂದ ನಮ್ಮ ವಿಷಯ ತಂದೆಗೆ ಬರೆದಿದ್ದಾರೆ" ಎಂದು ಗೊಣಗುಟ್ಟಿದ.

"ಓಹೋ ! ಹಾಗಾದರೆ ಗತಿಯೇನು ? "

"ಗತಿಯೇನು ಬಂದಿತು, ಕನಕ. ಅವರಿಗೆ ಇದೊಂದೂ ಗೊತ್ತೇ ಇಲ್ಲದೇ ಇರಬಹುದು. ನಾನು ಅಕಾರಣವಾಗಿ ಗಾಬರಿ ಪಡುತ್ತಿರಬಹುದು. ಅವರಿಗೆ ನಮ್ಮ ವಿಷಯವೊಂದೂ ಗೊತ್ತಾಗದಂತೆ ಹುಷಾರಾಗಿ ನೋಡಿಕೊಳ್ಳುತ್ತೇನೆ. ಅವರೆಷ್ಟು ದಿನ ತಾನೇ ಇರುತ್ತಾರೆ ? ಒಂದು ದಿನ ಇರುತ್ತಾರೆ. ಅಷ್ಟರಲ್ಲಿ ಏನು ತಾನೇ ಗೊತ್ತಾಗುವುದು ಸಾಧ್ಯ ? ಒಂದು ವೇಳೆ.... ಒಂದು ವೇಳೆ...."

"ಒಂದು ವೇಳೆ–? "

"ಒಂದುವೇಳೆ ಅವರಿಗೆ ಈಗಾಗಲೇ ವಿಷಯ ಗೊತ್ತಾಗಿರುತ್ತದೆ ಎಂದುಕೋ. ಎಂದಾದರೂ ಗೊತ್ತಾಗಬೇಕಾದದ್ದೇ. ಆದರೆ ಆಗಲಿ. ಗೊತ್ತಾಗಿರುವ ವಿಷಯ ಅವರಿಗೆ ಗೊತ್ತಾಗದಂತೆ ಮಾಡುವುದು ಸಾಧ್ಯವೇ ? "

"ಅವರು ನಮ್ಮ ಸಂಬಂಧಕ್ಕೆ ಒಪ್ಪದೇ ಹೋದರೆ ? "

"ಅದನ್ನೇ ಹೇಳುತ್ತಿದ್ದೆ. ಅಷ್ಟರಲ್ಲಿ ನೀನು ಕೇಳಿದೆ. ಅವರಿಗಾಗ ಸ್ಪಷ್ಟವಾಗಿ ಹೇಳಿಬಿಡುತ್ತೇನೆ. ನಾನು ನಿನ್ನನ್ನು ಮದುವೆಮಾಡಿ ಕೊಂಡಿದ್ದೇನೆಂದು ಹೇಳಿಬಿಡುತ್ತೇನೆ. ಇರುವವನು ನಾನೊಬ್ಬನೇ ಮಗ. ಅದರಿಂದ ಅವರು ಒಪ್ಪಿಕೊಂಡರೂ ಒಪ್ಪಿಕೊಳ್ಳಬಹುದು. ಆಗ ಒಳ್ಳೆಯದೇ ಆಯಿತು. ಒಂದು ವೇಳೆ ಒಪ್ಪಿಕೊಳ್ಳಲಿಲ್ಲ ಎಂದುಕೋ. ಈಗ ಕೋಪಮಾಡಿಕೊಂಡು

ಹೋಗುತ್ತಾರೆ. ಆದರೆ ನಮ್ಮಮ್ಮನಿಗೆ ನಾನೆಂದರೆ ಎಷ್ಟೋಪ್ರೀತಿ. ನಾನೇನು ಮಾಡಿದರೂ ಅವರಿಗೆ ನನ್ನಮೇಲೆ ಕೋಪ ಬರುವುದಿಲ್ಲ. ಅನಂತರ ಅವರು ನಮ್ಮಪ್ಪನನ್ನು ಸರಿಮಾಡುತ್ತಾರೆ."

"ಒಂದು ವೇಳೆ ಸರಿಹೋಗದೇ ಇದ್ದರೆ ?"

"ಸರಿಹೋಗದೇ ಇದ್ದರೆ ಇಲ್ಲ. ನಾನೇನು ಗಂಡಸಲ್ಲವೇ ? ನನ್ನ ಹೆಂಡತಿಯನ್ನು ನಾನು ಸಾಕಲಾರನೇ? ಮಕ್ಕಳಾದರೆ ಅವರಿಗೆ ಅನ್ನ ಹಾಕ ಲಾರೆನೇ ?"

ಶಂಕರನ ತಂದೆಗೆ ಸ್ವಲ್ಪ ಆಸ್ತಿಪಾಸ್ತಿಗಳಿವೆ ಎಂದೂ ಬೆಂಗಳೂರಿನಲ್ಲಿ ಒಳ್ಳೆಯದೊಂದು ಬಂಗಲೆಯಿದೆ ಎಂದೂ ಕನಕ ಕೇಳಿದ್ದಳು.

"ಅದು ನಿಜ, ಅನ್ನಿ. ಆದರೆ ಅವರಿಗೆ ನೀವೊಬ್ಬರೇ ಮಕ್ಕಳಾಗಿರು ವುದರಿಂದ ಅವರ ಆಸ್ತಿ ಎಲ್ಲವೂ ನಿಮಗೆ ಬರಬೇಕಲ್ಲವೇ ?"

ತನ್ನನ್ನು ತಿರಸ್ಕರಿಸಿದಂತಹ ತಂದೆಯಿಂದ ಆಸ್ತಿ ತೆಗೆದುಕೊಳ್ಳುವುದು ಶಂಕರನಿಗೆ ಸರ್ವಥಾ ಇಷ್ಟವಿರಲಿಲ್ಲ. ಅದಕ್ಕಿಂತಲೂ ಹೆಚ್ಚಾಗಿ ಕನಕ ಆ ಆಸ್ತಿಯ ಮೇಲೆ ಕಣ್ಣು ಹಾಕಿದುದು ಅವನಿಗೆ ಸರಿಬೀಳಲಿಲ್ಲ.

ಹಾಳು ಹುಡುಗಿ. ಬಹಳ ಕೆಟ್ಟ ಗುಣಗಳನ್ನು ಕಲಿತಿದ್ದಾಳೆ. ಎಲ್ಲ ವನ್ನೂ ಹಣದ ದೃಷ್ಟಿಯಿಂದಲೇ ನೋಡುವುದು ಅವಳಿಗೆ ಅಭ್ಯಾಸವಾಗಿ ಹೋಗಿದೆ. ಅದಷ್ಟು ಅವನ ಮನಸ್ಸಿಗೆ ಬಂದರೂ ಅದನ್ನು ಕುರಿತು ಮಾತ ನಾಡಲಿಲ್ಲ. ಆ ವಿಷಯ ಕೇಳಿಸಿಕೊಳ್ಳದವನಂತೆ ಹೇಳಿದ.

ಯಾವುದು ಹೇಗಾದರೂ ಆಗಲಿ, ಕನಕ. ನಾನು ನಿನ್ನನ್ನು ಪ್ರೀತಿ ಸುತ್ತಿದ್ದೇನೆ. ಯಾವುದು ಹೇಗಾದರೂ ಅದರಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ."

ಬಹಳ ದಿನಗಳು ಶಂಕರ ಏನಾಗುತ್ತದೆಯೋ ಎಂಬ ತುಯ್ಯಾಟವಲ್ಲಿರ ಬೇಕಾಗಲಿಲ್ಲ.

ವಾರದೊಳಗಾಗಿ ಅ ನ ಂ ದ ರಾ ಯ ರು ಬೆಳಗಾವಿಗೆ ಬಂದರು. ಸಾಯಂಕಾಲ ನಾಲ್ಕೂವರೆ ಐದು ಗಂಟೆಗೆಯ ಸಮಯದಲ್ಲಿ ಅವರು ಕಾಲೇ ಜಿನ ಬಳಿ ಬಂದರು. ಶಂಕರ ಆಗ ತಾನೇ ಅಲ್ಲಿಂದ ಹೊರಟಿದ್ದ. ಹಾಸ್ಟಲಿಗೆ

ಹೋಗಿ ನೋಡಿದರು. ಕೋಣೆಯಲ್ಲಿ ಅವನು ಕೃಷ್ಣಸ್ವಾಮಿಯೊಂದಿಗೆ ಮಾತನಾಡುತ್ತಾ ಕುಳಿತ್ತಿದ್ದ.

ಆನಂದರಾಯರು ಬರುವವರೆವಿಗೆ ಶಂಕರನಿಗೆ ಬಹಳ ಗಾಬರಿಯಾಗಿದ್ದಿತಷ್ಟೆ. ಅವರು ಬಂದಾಗಲಂತೂ ಅವನಿಗೆ ಎದೆಯೊಡೆದುಕೊಳ್ಳಲಾರಂಭವಾಯಿತು. ಆದರೆ ಅವರು ಬಂದ ಅರ್ಧ ಗಂಟೆಯೊಳಗಾಗಿ ಶಂಕರನ ಮನಸ್ಸು ಶಾಂತವಾಯಿತು

ತಂದೆಯ ಮಾತಿನಲ್ಲಿಯಾಗಲೀ, ನೋಟದಲ್ಲಿ ವ್ಯತ್ಯಾಸ ಕಂಡುಬರಲಿಲ್ಲ. ಅವರು ಶಾಂತವಾಗಿ ಗಂಭೀರದಿಂದ ಇದ್ದರು. ಅವನ ಯೋಗಕ್ಷೇಮವನ್ನು ವಿದ್ಯಾವ್ಯಾಸಂಗವನ್ನು ಕುರಿತು ಲೋಕಾಭಿರಾಮವಾಗಿ ಪ್ರಶ್ನಿಸಿದರು.

ತಾನು ಕಾರಣವೇ ಇಲ್ಲದೇ ಭಯಪಟ್ಟು ವಿಹ್ವಲನಾಗಿದ್ದುದಕ್ಕೆ ಶಂಕರ ನಗು ಬಂದಿತು.

ಸುಮಾರು ಆರೂವರೆ ಗಂಟೆಯ ಹೊತ್ತಿನಲ್ಲಿ ಶಂಕರ ತಂದೆಯನ್ನು ಕೇಳಿದ.

"ಹೀಗೇ ಸ್ವಲ್ಪ ಹೋಗಿ ಕಾಫೀ ತೆಗೆದು ಕೊಂಡು ಬರೋಣ ಬರುತ್ತೀರಾ ?"

"ಬೇಡ. ನಾನು ಇಲ್ಲಿಗೆ ಬರುತ್ತಾ ಚಹಾ ಕುಡಿದುಕೊಂಡು ಬಂದೆ. ಪುನಃ ಕುಡಿದರೆ ಸಿದ್ದೆ ಬರುವುದಿಲ್ಲ."

"ಅದೇ. ಕಾಫೀ ಕುಡಿಯ ಬೇಕೇನೋ ಎಂದು ಕೇಳಿದೆ. ಈ ಊರಿನಲ್ಲಿ ಒಂದು ಕಡೆ ಒಳ್ಳೆಯ ಕಾಫೀ ಸಿಗುತ್ತದೆ."

ಬೇಡಪ್ಪ—ನಾನು ಇಲ್ಲಿಯೇ ಇರುತ್ತೇನೆ. ನೀನು ಹೋಗಿ ಬಾ"

ಶಂಕರ ತಾನೊಬ್ಬನೇ ಹೊರಟ. ಅವನು ತಂದೆಯನ್ನು ಕಾಫಿಗೆ ಕರೆದಿದ್ದ. ಆದರೆ ಅವರು ಬರದೇ ಇದ್ದುದು ಅವನಿಗೆ ಅನುಕೂಲವಾಗಿದ್ದಿತು. ಈ ರಾತ್ರಿ ಅವರು ಊರಿನಲ್ಲಿಯೇ ಇರುತ್ತಾರೆ, ಅದರಿಂದ ತಾನು ಹೋಗಿ ವ ನೆಯಲ್ಲಿ ಮಲಗಿಕೊಳ್ಳಲಾಗುವುದಿಲ್ಲ. ಕನಕಳನ್ನು ನೋಡಲಾಗುವುದಿಲ್ಲ. ಹೇಗಾದರೂ ಸ್ವಲ್ಪ ಪುರಸತ್ತು ಮಾಡಿಕೊಂಡು ಹೋಗಿ ಕನಕಳನ್ನು ನೋಡಿ ತನ್ನ ತಂದೆ ಬಂದಿರುವುದರಿಂದ ಈ ರಾತ್ರಿ ತಾನು ಊಟಕ್ಕಾ

ಗಲೀ ಮಲಗಿಕೊಳ್ಳುವುದಕ್ಕಾಗಲೀ ಮನೆಗೆ ಬರುವುದಿಲ್ಲವೆಂದು ಹೇಳಿಬಿಟ್ಟು ಬರಬೇಕಾಗಿತ್ತು.

ಆನಂದರಾಯರು ಮಗನ ಜೊತೆಯಲ್ಲಿ ಕಾಫಿಗೆ ಬಂದಿದ್ದರೆ ಅದಕ್ಕೆ ಅವಕಾಶವಾಗುತ್ತಿರಲಿಲ್ಲ. ಈಗ ಕನಕಳನ್ನು ನೋಡಿಕೊಂಡು ವಿಷಯ ತಿಳಿಸಿ ಬರಬಹುದು.

ಕಾಫಿಗೆ ಹೋಗುವುದಕ್ಕಿಂತ ಕನಳನ್ನು ನೋಡಲು ಆತುರವೇ ಹೆಚ್ಚಾಗಿತ್ತು. ಶಂಕರ ಮನೆಗೆ ಹೋದ. ಅವಳೇ ಕಾಫಿಯನ್ನು ಕೊಟ್ಟಳು. ತಂದೆ ಬಂದರೆಂದು ಅವರಿಗೆ ಈ ವಿಷಯಗಳೊಂದು ಗೊತ್ತಿಲ್ಲವೆಂದೂ ಹೇಳಿ, ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ವಾಪ್ಸು ಹಾಸ್ಟಲಿಗೆ ಬಂದ.

ಅವನು ಬರುವ ವೇಳೆಗೆ ರಾತ್ರಿ ಎಂಟುಗಂಟೆಯಾಗಿತ್ತು. ಕಾಲು ಗಂಟೆಯೊಳಗೆಲ್ಲಾ ಊಟದ ಗದ್ದಲ ಆರಂಭವಾಯಿತು. ವಿದ್ಯಾರ್ಥಿಗಳೆಲ್ಲರೂ ಊಟಕ್ಕೆ ಹೊರಡುತ್ತಿದ್ದರು. ಆಗ ತಾವೂ ಊಟಕ್ಕೆ ಹೋಗೋಣವೆಂದು ಶಂಕರ ಸೂಚಿಸಿದ.

ಆನಂದರಾಯರೆಂದರು—

"ಸ್ವಲ್ಪ ಕುಳಿತುಕೋ. ಮಾತನಾಡಬೇಕಾಗಿದೆ"

ಅವರು ಹೇಳಿದಬಗೆ, ಧ್ವನಿಗಳು ಶಂಕರನ ಎದೆಯು ಕಂಪಿಸುವಂತೆ ಮಾಡಿದುವು. ಆ ಕಡೆಯ ಗಳಿಗೆಯು ಬಂದೇಬಿಟ್ಟಿತೇನು ? ಬಂದಿದ್ದರೆ ಏನಾದರೂಮಾಡಿ ಅದನ್ನು ಮುಂದೆ ತಳ್ಳಬೇಕು. ಇಲ್ಲವಾದರೂ ಏನಂತೆ! ಊಟಮಾಡಿಯೇ ಮಾತನಾಡಬಹುದಲ್ಲ.

"ಊಟಮಾಡಿಕೊಂಡು ಬಂದೇ ಮಾತನಾಡೋಣಪ್ಪ. ಆಮೇಲೆ ಅಡಿಗೆ ಆರಿ ಹೋಗುತ್ತದೆ"

"ಆರಿಹೋದರೆ ಹೋಗಲಿ, ನೀನು ಕುಳಿತುಕೋ"

ಧ್ವನಿಯುಆಜ್ಞೆಮಾಡುವಂತೆ ಇದ್ದಿತು. ಅದಕ್ಕನುಸಾರನಾಗಿ ಶಂಕರ ಕುಳಿತುಕೊಂಡ.

"ನೀನು ನನಗೆ ಸುಳ್ಳುಹೇಳಿದೆ"

"ಏನು"

"ಹಾಸ್ಟೆಲಿನಲ್ಲಿ ಇರುವುದಾಗಿ ಬರೆದಿದ್ದೆ. ಈಗ ನಾನು ಬಂದನಂತರವೂ ಇಲ್ಲಿಯೇ ಇರುವಂತೆ ನಟಿಸುತ್ತಿದ್ದೀಯೆ?"

"ಆದರಲ್ಲಿ ಸುಳ್ಳೇನು ಇದೆ ? ನಾನು ಇಲ್ಲಿಯೇ ಇದ್ದೇನೆಯಲ್ಲಾ"

"ಇಲ್ಲ. ನೀನು ಇಲ್ಲಿಲ್ಲ. ಬೇರೇಕಡೆ ಇದ್ದೀಯೆ"

ಶಂಕರನಿಗೆ ಏನು ಹೇಳಬೇಕೋ ತೋರಲಿಲ್ಲ. ಅವಾಕ್ಕಾದ.

"ನಾನು ಈ ಊರಿಗೆ ಯಾವಾಗ ಬಂದೆ ಗೊತ್ತೇ ?"

"..................."

"ಗೊತ್ತೇ ? "

ಉತ್ತರ ಹೇಳುವುದು ಬೇಕಾಗಿಲ್ಲದಿದ್ದರೂ ಹೇಳಿದ.

"ಈ ದಿನ ಮಧ್ಯಾನ್ಹದ ರೈಲಿಗೆ ಬಂದಿರಿ"

"ಇಲ್ಲ. ನಾನು ನಿನ್ನೆಯ ದಿನ ರಾತ್ರಿಬಂದೆ....."

ನಿನ್ನೆಯ ದಿನ ರಾತ್ರಿ ಬಂದರೆ ? ಹಾಗಾದರೆ ತನ್ನನ್ನು ನೋಡುವ ವರೆವಿಗೆ ಈ ದಿನ ಸಾಯಂಕಾಲದವರೆವಿಗೆ ಈ ಮುದುಕ ಏನು ಮಾಡುತ್ತಿದ್ದ? ಶಂಕರ ಏನು ಮಾಡುತ್ತಿದ್ದಿರೆಂದು ಕೇಳದಿದ್ದರೂ ಅವರೇ ಅವನ್ನೆಲ್ಲಾ ಹೇಳಿದರು.

"ನೀನು ರಾತ್ರಿಯ ಹೊತ್ತು ಬರಬೇಡವೆಂದು ಬರೆದಿದ್ದೆ–ಆದರೂ ನಾನು ರಾತ್ರಿಯೇ ಬಂದೆ. ನಿನ್ನೆ ರಾತ್ರಿ ರೈಲಿಳಿದವನು ಗಾಡೀ ಮಾಡಿಕೊಂಡು ಈ ಹಾಸ್ಟಲಿಗೆ ಬಂದೆ. ಲಾ ಕಾಲೇಜು ಹಾಸ್ಟಲು ಎಂದು ಹೇಳಿದೊಡನೆಯೇ ಗಾಡಿಯವನು ಸರಿಯಾಗಿ ಇಲ್ಲಿಗೆ ತಂದುಬಿಟ್ಟ. ಇಲ್ಲಿ ವಾಚ್ ಮೇನನ್ನು ಕೇಳಿದೆ. ನೀನು ಇಲ್ಲವೆಂದ. ಇಬ್ಬರು ಮೂವರು ಹುಡುಗರನ್ನು ವಿಚಾರಿಸಿದೆ. ಅವರೂ ಅದೇ ಹೇಳಿದರು. ನಾನು ಹುಡುಕಿಕೊಂಡು ಬಂದಿರುವುದು ನಿನ್ನನ್ನೇ ಎಂಬುದು ಅವರಿಗೆ ಸರಿಯಾಗಿ ಗೊತ್ತೋ ಇಲ್ಲವೋ ಎಂದು ಸರಿಯಾಗಿ ವಿಚಾರಿಸಿದೆ. ಅವರಿಗೆ ಗೊತ್ತಿತ್ತು. ಹೋದ ವರ್ಷ ನೀನು ಇಲ್ಲಿದ್ದುದಾಗಿಯೂ ಈ ವರ್ಷ ಬೇರೆ ಎಲ್ಲಿಯೋ ಇರುವುದಾಗಿಯೂ ಹೇಳಿದರು. ರಾತ್ರಿ ಹೋಗಿ ಒಂದು ಹೋಟಲಿನಲ್ಲಿ ಮಲಗಿಕೊಂಡೆ. ಬೆಳಗಾಗ ಬಂದು ವಾರ್ಡನ್ನರನ್ನು ಕೇಳಿದೆ. ಅವರೂ ಅದೇ ಮಾತು ಹೇಳಿದ

ನಂತರ ನೀನು ಇಲ್ಲವೆಂದು ಖಚಿತ ಮಾಡಿಕೊಂಡೆ."

ಶಂಕರ ನೆನೆಸಿಕೊಂಡುದಕ್ಕಿಂತಲೂ ದೊಡ್ಡ ಅನಾಹುತವೇ ನಡೆದಿದೆ. ಅವನ ತಂದೆ ಬೆಳಗಾಗಿನಿಂದ ಈ ಊರಿನಲ್ಲಿಯೇ ತಿರುಗಿದ್ದಾರೆ. ಏನು ಮಾಡುತ್ತಿದ್ದರು ಎಂಬುದು ಪೂರಾ ಅವನಿಗೆ ಗೊತ್ತಿಲ್ಲ. ತನ್ನ ವಿಷಯ ಎಷ್ಟು ಗೊತ್ತಿದೆ ಎಷ್ಟು ಗೊತ್ತಿಲ್ಲ ಎಂಬುದೂ ಸರಿಯಾಗಿ ತಿಳಿದಿಲ್ಲ. ಮತ್ತೊಂದು ಸ್ವಲ್ಪ ಎಳೆದು ನೋಡೋಣವೆಂದು ಹೇಳಿದ.

"ಅದೊಂದು ವಿಷಯ ಅಕಸ್ಮಾತ್ ತಪ್ಪಾಗಿ ಹೋಯಿತು. ನಾನು ಬರುವ ವೇಳೆಗೆ ಹಾಸ್ಟಲಿನಲ್ಲಿ ಸೀಟ್ಸ್ ಎಲ್ಲಾ ಫಿಲಪ್ ಆಗಿಹೋಗಿದ್ದಿತು. ಹಾಗೆಯೇ ಬರೆದರೆ ನೀವು ಏನಾದರೂ ತಿಳಿದುಕೊಳ್ಳಬಹುದೆಂದು ಹಾಗೆ ಬರೆದೆ. ನಾನು ಮಾಡಿಕೊಂಡಿರುವ ರೂಮಿನಲ್ಲಿ ಸರಿಯಾಗಿ ಅನುಕೂಲವಿಲ್ಲದ್ದರಿಂದ ನೀವು ಇಳಿಯುವುದಕ್ಕೆ ಇಲ್ಲಿ ಏರ್ಪಾಟು ಮಾಡಿದೆ."

"ಅದು ಸುಳ್ಳು. ನೀನು ರೂಂ ಮಾಡಿಕೊಂಡಿಲ್ಲ. ಮನೆ ಮಾಡಿಕೊಂಡಿದ್ದೀಯೆ. ಈ ದಿನ ನಿನ್ನ ಮನೆಯನ್ನು— — — —"

ಮುಂದೇನೋ ಹೇಳುವುದರಲ್ಲಿದ್ದವರು ಅದನ್ನು ನುಂಗಿಕೊಂಡು ವಾಕ್ಯ ಮುಗಿಸಿದರು.

"— — —ನೋಡಿಕೊಂಡು ಬಂದೆ."

"ನಿಮಗೆ ನನ್ನ ವಿಷಯವನ್ನು ಯಾರೋ ಇಲ್ಲಸಲ್ಲದನ್ನು ಹೇಳಿದ್ದಾರೆ.

ಆನಂದರಾಯರು ಬಹಳ ಮುಂಗೋಪಿಗಳು. ಆದರೆ ಇಷ್ಟು ಹೊತ್ತು ತಮ್ಮ ಸ್ವಭಾವಕ್ಕೆ ವಿರೋಧವಾಗಿ ಬಹಳ ಕಷ್ಟದಿಂದ ಸಮಾಧಾನವಾಗಿಯೇ ಮಾತನಾಡುತ್ತಿದ್ದರು. ಈಗ ಉದ್ರೇಕದಿಂದ ರೇಗುತ್ತಾ ಹೇಳಿದರು.

"ನನ್ನನ್ನೇನು ಮುಠಾಳ ಎಂದುಕೊಂಡಿದ್ದೀಯಾ? ನಿನ್ನ ವಿಷಯವೆಲ್ಲಾ ನನಗೆ ಬೆಂಗಳೂರಿನಲ್ಲಿಯೇ ಗೊತ್ತಾಯಿತು. ಅಲ್ಲಿಯೇ ನಿನ್ನನ್ನು ತೊರೆದು ಕೈ ತೊಳೆದುಕೊಳ್ಳಬೇಕೆಂದಿದ್ದೆ. ಆದರೆ ನಿಮ್ಮಮ್ಮ—ನಿಮ್ಮಮ್ಮ— —"

"ನಿಮ್ಮಮ್ಮ—ನಿಮ್ಮಮ್ಮ" ಎನ್ನುವಾಗ ಆ ವೃದ್ಧರ ಕಣ್ಣುಗಳಲ್ಲಿ ಹನಿ ಮೂಡಿತು. ಕೊರಳು ಕಟ್ಟಿಕೊಂಡು ಬಂದಿತು. ಮಾತನಾಡಲಿಲ್ಲ.

ಆದರೂ ಕಷ್ಟಪಟ್ಟುಕೊಂಡು ಹೇಳಿದರು.

"— —ಅತ್ತು ಕರೆದಳು. ಹೋಗಿ ನೋಡಿಕೊಂಡು ಬನ್ನಿ ಎಂದಳು. ಅವಳ ಮಾತು ತೆಗೆದುಹಾಕಲಾರದೇ ಬಂದೆ. ನೀನು ಹಾಸ್ಟಲಿನಲ್ಲಿ ಇಲ್ಲದುದನ್ನು ನೋಡಿದೊಡನೆಯೇ ನಿಜವೆಂದುಕೊಂಡೆ. ನನಗೆ ಕಾಗದ ಬರೆದವನನ್ನು ಹುಡುಕಿಕೊಂಡು ಹೋದೆ. ಅವನು ನಿನ್ನ ಮನೆ—ತೋರಿಸಿದ. ನಿನ್ನ ವಿಷಯವೆಲ್ಲಾ ಹೇಳಿದ. ಈ ಕಾಗದ—ಕಾಗದ ನೋಡಿಕೋ."

ಆನಂದರಾಯರು ಜೇಬಿನಿಂದ ಒಂದು ಕಾಗದ ತೆಗೆದು ಮಗನ ಮುಂದೆ ಹಾಕಿದರು. ಅವನು ನಡುಗುವ ಕೈಗಳಿಂದ ಅದನ್ನು ತೆಗೆದು ನೋಡಿದ. ಓದದೇಯಾವಳನ್ನೋ ಕಟ್ಟಿಕೊಂಡು ನಿಮ್ಮಮಗ [illegible]ನಲ್ಲಿ ಅಲೆಯುತ್ತಿದ್ದಾನೆ–ಎಂದದರಲ್ಲಿ ಬರೆದಿತ್ತು. ಕೆಳಗಡೆ ಶಿವಣ್ಣ ಎಂದು ರುಜು ಮಾಡಿತ್ತು

ಯಾರೀ ಶಿವಣ್ಣ ! ಕೂಡಲೇ ಶಂಕರನಿಗೆ ಅವನಾರೆಂಬುದು ಗೊತ್ತಾಗಲಿಲ್ಲ. ಸ್ವಲ್ಪಹೊತ್ತು ಯೋಚನೆ ಮಾಡಿದ ನಂತರ ಮನಸ್ಸಿಗೆ ಬಂದಿತು. ಹೌದು. ಶಿವಣ್ಣ ಎಂದು ಕನಕ ಒಬ್ಬಾತನನ್ನು ಕರೆಯುತ್ತಿದ್ದಳು. ಅವನನ್ನು ಶಂಕರ ಕನಕಳ ಮನೆಯಲ್ಲಿ ಎರಡು ಬಾರಿ ನೋಡಿದ್ದ.

ಶಂಕರ ಯೋಚನೆಮಾಡಿದ. ಈಗೇನು ಮಾಡುವುದು? ತಂದೆಗೆ ಎಲ್ಲವೂ ಗೊತ್ತಾಗಿ ಹೋಗಿದೆ. ಇನ್ನು ಮುಚ್ಚಿಟ್ಟು ಪ್ರಯೋಜನವಿಲ್ಲ. ಒಪ್ಪಿಕೊಳ್ಳಲೇಬೇಕು. ಒಪ್ಪಿಕೊಳ್ಳದಿದ್ದರೆ ಎದುರಿಗೆ ಕುಳಿತಿರುವ ಮುದುಕ ಒಪ್ಪಿಸುತ್ತಾನೆ. ವಿಧಿಯಿಲ್ಲ. ಆದರೆ ಒಪ್ಪಿಕೊಳ್ಳುವುದು ಹೇಗೆ ?

"ಈಗಲಾದರೂ ಹೇಳು. ನಿಜವನ್ನು ಹೇಳು. ಅವನು ಬರೆದಿರುವುದು ಸುಳ್ಳೋ ನಿಜವೋ ?"

"ನಿಜ–ಸುಳ್ಳು" ಇವೆರಡರಲ್ಲಿ ಶಂಕರ ಯಾವುದನ್ನೂ ಹೇಳಲಿಲ್ಲ ಮುಂದಿನ ವಿಷಯ ಹೇಳಿದ. ಅದು ಹೇಗೆ ಅವನ ಬಾಯಿಂದ ಹೊರಡಿತೋ ಗೊತ್ತಾಗಲಿಲ್ಲ. ಹುಚ್ಚನಂತೆ ಹೇಳಿದ.

"ನಾನು ಅವಳನ್ನು ಪ್ರೀತಿಸುತ್ತೇನೆ. ಮದುವೆಯಾಗುತ್ತೇನೆ. "

ತಂದೆ ಮಗನ ಬಾಯಿಂದ ಆ ಮಾತು ನಿರೀಕ್ಷಿಸಿರಲಿಲ್ಲ. ಅದನ್ನು ಕೇಳಿ ಅವರ ಉದ್ರೇಕ ಕೋಪಗಳು ಸಹ ಇಳಿದು ಹೋದವು. ಏನು ಮಾಡಬೇ

ಕೆಂದು ತೋರಲಿಲ್ಲ. ಇರುವ ಒಬ್ಬನೇ ಒಬ್ಬ ಮಗನನ್ನು ಉಳಿಸಿಕೋ ಎಂದು ಅವರ ಮನಸ್ಸಿನಲ್ಲಿ ನೂರಾರು ಧ್ವನಿಗಳಿಂದ ಕೂಗಿದಂತಾಯಿತು.

"ಶಂಕರ— — —"

'— — — — —"

"ನೀನು ನನ್ನ ಜೊತೆಯಲ್ಲಿ ಬೆಂಗಳೂರಿಗೆ ಬಾ. ಈ ವರ್ಷ ಓದುವುದು ಬೇಡ. ಮುಂದಿನ ವರ್ಷ ಬೊಂಬಾಯಿಗೋ ಮದರಾಸಿಗೋ ಹೋಗಿ ಓದುವೆಯಂತೆ— —"

ಆ ಕಡೆಯ ಮಾತು ಹೇಳಿದುದು ಅವರಿಗೆ ಸಮರ್ಪಕವಾಗಿ ತೋರಲಿಲ್ಲ. ಮಗನಿಂದ ಉತ್ತರವನ್ನು ನಿರೀಕ್ಷಿಸದೇನೇ ಮೊದಲು ಆಡಿದ ಮಾತನ್ನು ತಿದ್ದಿಕೊಂಡು ಹೇಳಿದರು.

"ಬೆಂಗಳೂರಿನಲ್ಲಿಯೇ ಲಾ ಕಾಲೇಜು ಮೊದಲಾಗುವುದಂತೆ. ಅಲ್ಲಿಯೇ ಇದ್ದು ಓದಿಕೊಳ್ಳುವೆಯಂತೆ."

ಉತ್ತರ ಹೇಳಲೇ ಬೇಕಾಗಿತ್ತು ಅವನು ಹೇಳಿದ.

"ಇಲ್ಲ. ನಾನು ಇಲ್ಲಿಯೇ ಇದ್ದು ಓದಿಕೊಳ್ಳುತ್ತೇನೆ."

"ಅಂದರೆ ನೀನು ನನ್ನ ಮಾತು ಕೇಳುವುದಿಲ್ಲ. ಅನ್ನುತ್ತಿದ್ದೀಯೆ. ಅಲ್ಲವೆ ? "

"ಹಾಗಲ್ಲ, ಈಗ ಪ್ರಾರಂಭಿಸುತ್ತಿರುವ ಲಾ ಮುಗಿಸಿಕೊಂಡೇ ಬರುತ್ತೇನೆ. "

ವಿಷಯ ಮುಚ್ಚಿಟ್ಟು ಮಾತನಾಡುವುದು ಪ್ರಯೋಜನವಿಲ್ಲವೆಂದು ಆನಂದರಾಯರಿಗೆ ತೋರಿತು. ನೇರವಾಗಿ ವಿಷಯ ಪ್ರಸ್ತಾಪಿಸಿದರು.

" ಅದೊಂದೂ ಮುಖ್ಯವಲ್ಲ. ನಾನು ಹೇಳುತ್ತಿರುವುದು ಅವಳನ್ನು ಬಿಟ್ಟುಬಿಡು ಎಂದು."

"ನಾನವಳಿಗೆ ಮಾತು ಕೊಟ್ಟಿದ್ದೇನೆ."

ಅಷ್ಟು ಹೊತ್ತಿಗಾಗಲೇ ಅವರು ಉದ್ರೇಕಗೊಂಡಿದ್ದರು. ಧ್ವನಿಯಲ್ಲದು ಕಂದು ಬರುತ್ತಿತ್ತು. ಇನ್ನೂ ರೇಗಿಕೊಂಡು ಹೇಳಿದರು.

"ಮಾತು ಕೊಟ್ಟಿದ್ದೀಯ. ನನ್ನ ಮಾತುಗಿಂತ ನಿನ್ನ ಮಾತು ದೊಡ್ಡದೇನು ? ತಾಯಿ ತಂಗಿಗಳಿಗಿಂತ ಆ ಸೂಳೇ ಮುಂಡೆ — — —."

ವಿದ್ಯಾರ್ಥಿಗಳ ಊಟ ಮುಗಿದಿದ್ದಿತೆಂದು ಕಂಡು ಬರುತ್ತದೆ. ಹೊರಗಡೆ ನಡೆಯುವ ಕಾಲು ಸಪ್ಪಳ ಕೇಳುತ್ತಿತ್ತು. ಭೋಜನ ಗೃಹದಿಂದ ಎಲ್ಲರೂ ತಮ್ಮ ತಮ್ಮ ಕೋಣೆಗಳಿಗೆ ವಾಪ್ಸು ಬರುತ್ತಿದ್ದಿರಬೇಕು. ಅವರುಗಳು ಕಿವಿಗೆ ಬೀಳುವುದರೊಳಗಾಗಿ ಮಾತು ಮುಗಿಸಲು ಶಂಕರ ಹೇಳಿದ.

"ಅದನ್ನು ಇನ್ನು ಮಾತನಾಡುವುದು ಪ್ರಯೋಜನವಿಲ್ಲ. ನಾನು ಅವಳನ್ನು ಕೈ ಬಿಡುವುದಿಲ್ಲ."

"ಹಾ. ನನಗೆ–ನನಗೆ ಈ ಜವಾಬು. ನಾನು ಬೆಂಗಳೂರಿನಲ್ಲಿ ನಿರ್ಧರಿಸಿದ್ದಂತೆ ನಿನ್ನನು ಮರೆತು ಬಿಡಬೇಕಾಗಿತ್ತು. ಅವಳ ಮಾತು ಕೇಳಿ ನಿನ್ನಿಂದ ಅವಮಾನವಾಯಿತು."

ಶಂಕರ ಸುಮ್ಮನೆ ಕುಳಿತ್ತಿದ್ದ.

"ಸರಿ, ನೀನು ನಿರ್ಧರ ಮಾಡಿರುವುದಾದರೆ ನಾನೂ ನಿರ್ಧರ ಮಾಡಿದ್ದೇನೆ. ಹೇಳುತ್ತೇನೆ ಕೇಳು. ಇನ್ನು ನನಗೂ ನಿನಗೂ ಸಂಬಂಧವಿಲ್ಲ. ನೀನು ಮಗನೂ ಅಲ್ಲ. ನಾನು ತಂದೆಯೂ ಅಲ್ಲ. ಊರಿಗೆ ಹೋಗಿ ನಿನಗೆ ಘಟಾಶ್ರಾದ್ಧ ಮಾಡಿ ಬಿಡುತ್ತೇನೆ. ನನಗೆ ಮಗನೇ ಹುಟ್ಟಲಿಲ್ಲವೆಂದು ಕೊಳ್ಳುತ್ತೇನೆ."

ಆನಂದರಾಯರು ಕೂಗಿ ಮಾತನಾಡುತ್ತಿದ್ದರು. ಅವರ ಧ್ವನಿಯು ಹೊರಗಡೆ ಓಡಿಯಾಡುವ ವಿದ್ಯಾರ್ಥಿಗಳನ್ನು ಆಕರ್ಷಿಸಿತ್ತು. ಕೆಲವರು ತಂದೆ ಮಕ್ಕಳ ಸಂಭಾಷಣೆಯನ್ನು ಕೇಳುತ್ತಾ ಕಿಟಕಿಯ ಬಳಿ ನಿಂತಿದ್ದರು. ಮತ್ತೆ ಕೆಲವರು ಬಾಗಿಲ ಮರೆಯಲ್ಲಿಯೂ ನಿಂತಿದ್ದರೋ ಏನೋ?

"ವೃದ್ಧ ತಾಯಿತಂದೆಗಳನ್ನು ತೃಣಗಣಾಯ ಮಾಡಿ ಆ ಕತ್ತೇಮುಂಡೆಯನ್ನು ಬಿಡುವುದಿಲ್ಲ, ಅಲ್ಲವೇ? ಸಾಕಿ, ಸಲಹಿ, ದೊಡ್ಡವನನ್ನಾಗಿ ಮಾಡಿದವರಿಗಿಂತಲೂ ಎಲ್ಲೋ ಬೀದಿಯಲಿ ಸಿಕ್ಕಿದ ತೊಟ್ಟೀ ಮುಂಡೆ ನಿನಗೆ ದೊಡ್ಡವಳಾದಳಲ್ಲವೇ?"

ವೃದ್ಧರಾದ ಅವರು ರೇಗುತ್ತಿದ್ದರು, ಕೂಗುತ್ತಿದ್ದರು. ಆದರೂ ಅಳುತ್ತಿದ್ದರು. ಅವರ ಕೆನ್ನೆಗಳ ಮೇಲೆ ನೀರು ಹರಿದು ಬರುತ್ತಿತ್ತು. ಎದ್ದು ನಿಂತುಕೊಂಡರು. ಹೊರಗೆ ಹೊರಟುಹೋಗಬೇಕೆಂದು ಅವರ ಮನಸ್ಸು ಹೇಳುತ್ತಿತ್ತು. ಹೆತ್ತ ಕರುಳು ಒಬ್ಬನೇ ಮಗನನ್ನು ಬಿಟ್ಟು ಹೋಗಲಾ

ರದೇ ಹಿಂದೆಳೆಯುತ್ತಿತ್ತು.

"ನನ್ನ ಮಾತು ಕೇಳು, ಶಂಕರ. ನನ್ನೊಡನೆ ಬಂದುಬಿಡು."

ಅವನು ಕಲ್ಲಿನ ಗೊಂಬೆಯಂತೆ ಕುಳಿತಿದ್ದ. ತಲೆ ಎತ್ತಿ ನೋಡಲೂ ಇಲ್ಲ. ಮಾತನಾಡಲೂ ಇಲ್ಲ.

"ಹಾಳಾಗಿ ಹೋಗು. ನಿನ್ನ ಕರ್ಮಕ್ಕೆ ಯಾರೇನು ಮಾಡಲಾಗುತ್ತದೆ? ನೀನು ಕೆಟ್ಟು ಹಾಳಾಗಿ ಹೋಗಬೇಕೆಂದು ನಿನ್ನ ಹಣೆಯಲ್ಲಿ ಬರೆದಿರುವಾಗ ಯಾರು ತಾನೇ ತಪ್ಪಿಸಲಾಗುತ್ತದೆ?"

ಮುಂದೆ ಹೋಗಿ ಬಾಗಿಲು ತೆರೆದರು. ಹದಿನೈದು ಇಪ್ಪತ್ತು ಮಂದಿ ಯುವಕರು ವಿಸ್ಮಿತರಾಗಿ ನೋಡುತ್ತಾ ನಿಂತಿದ್ದರು.

"ಇಷ್ಟೊಂದು ಮಂದಿ ಹುಡುಗರು ಸರಿಯಾಗಿದ್ದು, ನಮ್ಮ ಮಗನಿಗೇ ಈ ದುರ್ಬುದ್ಧಿ ಬರಬೇಕೇ? ಪೂರ್ವಾರ್ಜಿತ ಕರ್ಮಫಲ, ಕರ್ಮಫಲ."

ಆ ವೃದ್ಧರು ನಿರಾಶರಾಗಿ ಅಲ್ಲಿಂದ ದಢದಢನೆ ಹೊರಟುಹೋದರು

ಶಂಕರನಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಜೇಬಿನಿಂದ ಪ್ಯಾಕ್ ತೆಗೆದು, ಸಿಗರೇಟು ಹಚ್ಚಿಕೊಂಡ. ಮೂರು ನಾಲ್ಕು ಪಫ್ ಎಳೆದು ತಲೆ ಎತ್ತಿ ನೋಡಿದ. ಹಾಸ್ಟಲಿನ ಹುಡುಗರು ಇನ್ನು ಅಲ್ಲಿಯೇ ನಿಂತಿದ್ದರು.

ಅವರೆದುರಿಗೆ ಹೀಗಾದುದು ಅಪಮಾನವಾದಂತೆ ಆಗಿತ್ತು. ಇನ್ನೂ ಅವರು ನೋಡುತ್ತಾ ನಿಂತಿದ್ದಾರೆ. ನೋಡಿದರೆ ನೋಡಲಿ ಎಂದು ಭಂಡತನದಿಂದ ಅಲ್ಲಿ ಕುಳಿತಿದ್ದ. ಆದರೆ ಬಹಳ ಹೊತ್ತು ಅಲ್ಲಿ ಕುಳಿತಿರಲಾಗಲಿಲ್ಲ.

ಹತ್ತಿಸಿದ ಸಿಗರೇಟು ಮುಗಿಯುತ್ತಿದ್ದಂತೆ ಅದನ್ನು ತೆಗೆದು ಮೂಲೆಗೆ ಸೆದ. ಅಲ್ಲಿಂದ ಹೊರಟು ಹೋದ.

ಶಂಕರ ಮನೆಗೆ ಬರುವುದಿಲ್ಲವೆಂದು ಕನಕ ಊಟ ಮುಗಿಸಿಕೊಂಡಿದ್ದಳು. ನಿದ್ದೆ ಬರದೇ ಉಲ್ಲನ್ ಬ್ಲೌಸ್ ಹೆಣೆಯುತ್ತಾ ಕುಳಿತಿದ್ದಳು.

ಮೊದಲು ಮಾತುಕತೆಗಳು ಬೇಡವಾಗಿದ್ದರೂ ಸ್ವಲ್ಪ ಹೊತ್ತಿನಲ್ಲಿ ಕನಕಳೊಡನೆ ಮಾತನಾಡ ತೊಡಗಿದ. ತಂದೆಗೂ ತನಗೂ ನಡೆದ ಮಾತುಕತೆಗಳನ್ನು ವಿವರವಾಗಿ ಹೇಳಿದ. ಇದಕ್ಕೆಲ್ಲಾ ಕಾರಣನಾದ ಶಿವಣ್ಣನನ್ನು ವಾಚಾಮಗೋಚರವಾಗಿ ಬೈದ.

ಎಲ್ಲವನ್ನೂ ಕೇಳಿದ ಕನಕ ಅಂದಳು.

"ನಿಮ್ಮ ತಂದೆ ಹಾಗೆಲ್ಲ ಗಲಾಟೆ ಮಾಡಬಾರದಾಗಿತ್ತು."

"ನೀನು ಅವರ ವಿ ಷ ಯ ವ ನ್ನೇ ಹೇಳುತ್ತೀಯಲ್ಲಾ. ಈ ಹಾಳು ಶಿವಣ್ಣ ಮಾಡಿದ್ದಕ್ಕೇನು ಅಂತೀಯ?"

ಏನು ಅನ್ನುತ್ತಾಳೆ? ಆ ವಿಷಯಗಳನ್ನೆಲ್ಲ ಕೇಳಿದ ಕನಕಳ ಮನಸ್ಸಿನಲ್ಲಿ ಮತ್ತೊಂದು ವಿಧವಾದ ಭಾವ ಉಂಟಾಗಿತ್ತು. ಶಿವಣ್ಣ ಹಾಗೇಕೆ ಮಾಡಿದ? ತನ್ನ ಮೇಲಿನ ಮೋಹದಿಂದ ಮಾ ಡಿ ದ. ತಾನು ಸಂಪೂರ್ಣವಾಗಿ ಅವನ ಕೈತಪ್ಪಿ ಹೋಗಿದ್ದಳು. ಏನಾದರೂ ಮಾಡಿ ಪುನಃ ತ ನ್ನ ನ್ನು ಪಡೆಯ ಬೇಕೆಂಬ ಹಂಬಲದಿಂದ ಮಾಡಿದ್ದ.

ಗಂಡು ಮಾಡಿದ ಕೆಲಸ ತುಚ್ಛವಾದರೂ ತನ್ನ ಮೇಲಿನ ಆಸೆಗಾಗಿ ಅದನ್ನು ಮಾಡಿದುದರಿಂದ ಹೆಣ್ಣಿನ ಮ ನ ಸ್ಸಿ ನ ಲ್ಲಿ ಅವನ ವಿಷಯವಾಗಿ ಮೆಚ್ಚಿಗೆ ಮೂಡುತ್ತಿತ್ತು.

ಅದನ್ನು ಪ್ರತ್ಯಕ್ಷವಾಗಿ ಹೇಳುವಂತಿರಲಿಲ್ಲ.

"ಅವನ ವಿಷಯ ಸರಿ, ಅವನು ಲುಚ್ಛಾ ಮನುಷ್ಯ. ಸಿಕ್ಕಲಿ, ಜೋಡಿ, ನಲ್ಲಿ ಹೊಡೆಯುತ್ತೇನೆ. ಅದನ್ನು ಬಿಡಿ. ತಿಳಿದವರು. ವಯಸ್ಸಾದವರು ವಿದ್ಯಾವಂತರು ನಿಮ್ಮ ತಂದೆ ಹೀಗೆ ಮಾಡಬಹುದೇ?"

"ಏನು ಮಾಡಿದರೆನ್ನುತ್ತೀ?"

ಪ್ರಶ್ನೆಯ ಉದ್ದೇಶ ಉತ್ತರ ಪಡೆಯುವುದಾಗಿರಲಿಲ್ಲ, ಅವಳ ಮಾತು ತುಂಡು ಮಾಡುವುದಾಗಿತ್ತು. ಆದರೂ ಅವಳು ಉತ್ತರ ಹೇಳಿದಳು.

"ಅಷ್ಟು ಜನರ ಎದುರಿಗೆ ಹಾಗೆ ಮಾತನಾಡಬಹುದೇ? ಅಷ್ಟೊಂದು ಗಲಾಟೆ ಮಾಡಬಹುದೇ? ನಿಮ್ಮನ್ನು ಬೇರೆಯಾಗಿ ಕರೆದುಕೊಂಡು ಹೋಗಿ ಮಾತನಾಡಬೇಕು. ಅಥವಾ ಇಲ್ಲಿ ಬಂದು ಮಾತನಾಡಬಹುದಾಗಿತ್ತು."

ತನ್ನ ತಂದೆ ಮಾಡಿದ್ದು ಸರಿ ಎಂದೇ ಶಂಕರನ ಮನಸ್ಸು ಹೇಳು ತ್ತಿತ್ತು. ತಾನೇ ತಂದೆಯಾಗಿ ತನ್ನ ಮಗ ಹೀಗೆ ಮಾಡಿದ್ದರೆ ತಾನೂ ಅದೇ ರೀತಿಯಾಗಿ ಮಾಡುತ್ತಿದ್ದನೆಂದು ಅವನ ಮನಸ್ಸು ಹೇಳುತ್ತಿತ್ತು. ಅವನಿಗೆ ತಂದೆಯ ಮೇಲೆ ಹೆಚ್ಚು ಗೌರವವಿತ್ತು. ತಾಯಿಯ ಮೇಲೆ ಅಪಾರ ಪ್ರೀತಿ ಯಿತ್ತು. ಆದರೆ ಕನಕಳ ಮೇಲಿನ ಮೋಹ ತಾಯಿತಂದೆಗಳ ಮನೋಭಿ

ಲಾಷೆಯ ಪ್ರಕಾರ ನಡೆಯದಂತೆ ಮಾಡಿತ್ತು.

ಎಷ್ಟೇ ಮೋಹವಿದ್ದರೂ ಕನಕ ತನ್ನ ತಂದೆಯ ವಿಷಯದಲ್ಲಿ ಲಘು ವಾಗಿ ಮಾತನಾಡುವುದು ಅವನಿಗೆ ಸರಿಬೀಳಲಿಲ್ಲ.

"ಹೋಗಲಿ ಬಿಡು."

ಶಂಕರನ ಮನಸ್ಸಿನಲ್ಲಿದ್ದ ಭಾವವನ್ನು ಕನಕ ಅರ್ಥ ಮಾಡಿಕೊಂ ಡಳೋ ಇಲ್ಲವೋ? ಅಂತೂ ಆ ಮಾತು ಬೆಳೆಸುವುದು ಅವನಿಗೆ ಇಷ್ಟವಿಲ್ಲ ವೆಂದುಕೊಂಡಳು.

ಮಾತು ಬದಲಾಯಿಸಲು ಅವಳು ಹೇಳಿದಳು.

"ಈ ಗಲಾಟೆಯಲ್ಲಿ ನೀವು ಊಟವೇ ಮಾಡಲಿಲ್ಲವೆಂದು ಕಾಣುತ್ತದೆ."

"ಇಲ್ಲ— —"

"ಹಾಗಾದರೆ ಏಳಿ. ಹಸಿದು ಮಲಗುವುದೇ?"

"— — — — —"

"ಊಟ ಬೇಡವಾದರೆ ಹಾಲಾದರೂ ಕುಡಿದು ಮಲಗಿ."

"ಇಲ್ಲ, ಕನಕ ನನಗೆ ಈ ದಿನ ಏನೂ ಬೇಡ."

ಕನಕ ಊಟಕ್ಕಾಗಲೀ, ಹಾಲು ಕುಡಿಯುವುದಕ್ಕಾಗಲೀ ಮತ್ತೆ ಶಂಕ ರನನ್ನು ಬಲಾತ್ಕಾರ ಮಾಡಲಿಲ್ಲ. ಆದರೆ ಅವನು ಖಿನ್ನನಾಗಿದ್ದುದೂ ಅದು ಸರಿಹೋಗದಿದ್ದುದೂ ಅವಳಿಗೆ ಗೊತ್ತಾಗಿತ್ತು. ಅವನನ್ನು ಹಾಗೆಯೇ ಬಿಡುವುದು ಅವಳಿಗೆ ಇಷ್ಟವಿರಲಿಲ್ಲ. ಖಿನ್ನತೆಯನ್ನು ಕಳೆದು ಅವನನ್ನು ಖುಷಿ ಮಾಡುವುದು ಹೇಗೆಂದು ಯೋಚಿಸಿದಳು. ಅವಳಿಗೆ ಗೊತ್ತಿದ್ದುದು ಒಂದೇ ಮಂತ್ರ.

ಅದನ್ನೇ ಪುನಶ್ಚರಣ ಮಾಡಿದಳು.

ಎರಡು ಗಳಿಗೆ ಸುಮ್ಮನಿದ್ದಳು ಸುಮ್ಮನೆ ಹಾಸಿಗೆಯಲ್ಲಿ ಬಿದುಕೊಂ ಡಿದ್ದಳು. ನಿರಾಸಕ್ತಿಯಿಂದ ಬಿದ್ದುಕೊಂಡಿದ್ದವನನ್ನೊಮ್ಮೆ ಆಲಂಗಿಸಿದಳು. ಅದರಿಂದಲೂ ಶಂಕರನ ಸ್ಥಿತಿಯು ಬದಲಾಯಿಸಲಿಲ್ಲ. ಹಾಗಾದಾಗ ಏನು ಮಾಡಬೇಕೆಂಬುದು ಆವಳಿಗೆ ಗೊತ್ತಿತ್ತು. ಮೆಲ್ಲನೆ ತನ್ನ ಕೈಗಳೆರಡನ್ನೂ ಷರ್ಟಿನಲ್ಲಿ ಹಾಕಿ ಅವನ ವಕ್ಷಸ್ಥಲವನ್ನು ಸ್ಪರ್ಶಿಸಿದಳು. ಹಾಗೆಯೇ ಕೈಗ ಳನ್ನು ಕುಚಪ್ರದೇಶದ ಮೇಲಿಟ್ಟು ಮರ್ದಿಸ ತೊಡಗಿದಳು.

ಕನಕಳಿಗೆ ಶಂಕರನ ಸಹವಾಸವಾಗುವವರೆವಿಗೆ ಹೆಂಗಸರು ಗಂಡಸರ ಕುಚಪ್ರದೇಶವನ್ನು ಸ್ಪರ್ಶಿಸಿ, ಮರ್ದಿಸುವುದು ತಿಳಿಸಿರಲಿಲ್ಲ. ಅದಕ್ಕೆ ವಿಪರೀತವಾಗಿ ಗಂಡಸರು ಹೆಂಗಸರ ಕುಚಗಳನ್ನು ಸ್ಪರ್ಶಿಸುವುದೊಂದು ಮಾತ್ರ ಅವಳಿಗೆ ಗೊತ್ತಿತ್ತು. ಹಿಂದೊಂದು ಬಾರಿ ಅವನ ವಕ್ಷಸ್ಥಲವನ್ನು ಸ್ಪರ್ಶಿಸುತ್ತಾ ಅವಳ ಕೈ ಅಲ್ಲಿ ನಿಂತಿದ್ದಿತು. ಆದರಿಂದ ಶಂಕರನಿಗೆ ಏನು ಸುಖವಾಯಿತೋ ಅವಳು ಕಾಣಳು. ಮತ್ತೊಂದು ದಿನ ಅವನೇ ಅವಳ ಕೈಗಳನ್ನು ತನ್ನ ಎದೆಯ ಮೇಲಿಟ್ಟುಕೊಂಡು ಮರ್ದಿಸಲು ಹೇಳಿದ.

ಅದರಿಂದ ಕನಕ ಕೇಳಿದ್ದಳು.

"ಇದೇನು? ಗಂಡಸರು ನಮಗೆ ಮಾಡುವಂತೆ ಮಾಡಬೇಕೆನ್ನುತ್ತೀರಿ?"

ಆ ಮಾತು ಹೇಳಲ್ಪಟ್ಟಾಗ ಶಂಕರನಿಗೆ ನಾಚಿಕೆಯಾಗಿತ್ತು. ಆದರೆ ಬಯಕೆ ನಾಚಿಕೆಯನ್ನು ಮೀರಿತ್ತು, ಅವನು ಹೇಳಿದ್ದ.

"ನನ್ನನ್ನು ಹೆಣ್ಣು ಎಂದೇ ಅಂದುಕೋ, ಕ ನ ಕ . ಮುಖ್ಯವಾದುದು ಸುಖ ತಾನೇ! ಮಿಕ್ಕುದನ್ನು ಕಟ್ಟಿಕೊಂಡು ನಾವೇಕೆ ಅಳಬೇಕು."

ಅಂದಿನಿಂದ ಕನಕ ಅರ್ಥಮಾಡಿಕೊಂಡಿದ್ದಳು. ಶಂಕರನ ಕುಚಪ್ರದೇಶವನ್ನು ಕಾಠಿಣ್ಯದಿಂದ ಸ್ಪರ್ಶಿಸಿದರೆ ಅ ವ ನಿ ಗೆ ಆನಂದವಾಗುತ್ತದೆಂದು. ಅವನು ಉದ್ರೇಕ ಗೊಳ್ಳುತ್ತಾನೆಂದು.

ಈ ದಿನ ಅವಳು ಅವನನ್ನು ಆನಂದ ಗೊಳಿಸಬೇಕಾಗಿತ್ತು. ಉದ್ರೇಕ ಗೊಳಿಸಬೇಕಾಗಿತ್ತು. ಅದಕ್ಕಾಗಿ ಅವನ ಕುಚಪ್ರದೇಶವನ್ನು ಸ್ಪರ್ಶಿಸಿದಳು.

ಎಷ್ಟೋ ದಿನಗಳು ಪಕ್ಕದಲ್ಲಿಯೇ ಮಲಗಿದ್ದರೂ, ಅವನ ಮನಸ್ಸು ಹಂಬಲಿಸುತ್ತಿದ್ದರೂ ಅವಳು ಸ್ಪರ್ಶಿಸದೇ ಇರುತ್ತಿದ್ದಳು. ಬಾಯಿಬಿಟ್ಟು ಕೇಳಿದ್ದರೆ ಮನದ ಬಯಕೆ ಈಡೇರುತ್ತಿದ್ದಿತೋ ಏನೋ? ಎಷ್ಟೇ ಸಲಿಗೆ ಇದ್ದರೂ ಕೇಳುವುದು ಕಷ್ಟ. ಕೇಳಿ ಪಡೆಯುವುದರಲ್ಲಿ ಸುಖವೂ ಇಲ್ಲ. ಅದರಿಂದ ಮಾತನಾಡದೇ ಪರಿತಪಿಸುತ್ತಿದ್ದ.

ಅವಳು ಈ ದಿನ ತನಗೆ ತಾನೇ ಮನಸ್ಸಿನ ಮಂಡಿಗೆಯನ್ನು ಬಡಿಸುತ್ತಿದ್ದರೂ ಇವನಿಗೆ ಬೇಡವಾಗಿತ್ತು.

"ಬೇಡ, ಕನಕ. ಸುಮ್ಮನಿರು."

ಅವಳು ಸುಮ್ಮನಿರಲಿಲ್ಲ.

ಶಂಕರ ಅವಳ ಕೈಗಳೆರಡನ್ನೂ ಎಳೆದು ಹಾಕಿದ. ಅವಳು ಮತ್ತೆ ಹಾಕುವುದಕ್ಕೆ ಹೋದಾಗ ಹೇಳಿದ.

"ಬೇಡ, ಕನಕ. ಬೇಡ"

"ನನಗೆ ಬೇಕು"

ಅವಳಿಗೆಂದೂ ಬೇಕಾಗುವುದಿಲ್ಲವೆಂದೂ, ತನ್ನನ್ನು ಪ್ರೇರೇಪಿಸಲು ಆ ಮಾತು ಆಡುತ್ತಾಳೆಂದು ತೋರಿತು.

"ಈ ದಿನ ಬೇಡ ಎಂದರೆ ಬಿಡಬಾರದೆ?"

"ಬಿಡುತ್ತೇನೆ. ಆದರೆ ಇನ್ನು ಮೇಲೆ ನೀವು ಕೇಳಿದರೂ ಇಲ್ಲ."

"ಹೀಗೆಲ್ಲಾ ಹಟ ಹಿಡಿದರೆ ಹೇಗೆ, ಕನಕ."

"ಹಟವೇ — — ?"

ಅವಳನ್ನು ಒಪ್ಪಿಸಲಾಗುತ್ತಿರಲಿಲ್ಲ. ಅವನಿಗೆ ಬೇಡವಾಗಿತ್ತು.

"ಬೇಡ — — "

"ಇನ್ನು ಎಂದೂ ಕೇಳಕೂಡದು"

"ಕೇಳುವುದಿಲ್ಲ."

ಅವನು ಮಾತನ್ನು ಹೇಳಿದ ತಕ್ಷಣವೇ ಕನಕ ತಟ್ಟನೆ ಪಕ್ಕಕ್ಕೆ ತಿರುಗಿ ಬಿದ್ದುಕೊಂಡಳು.

ಅವರು ರಾತ್ರಿ ಪುನಃ ಮಾತನಾಡಲಿಲ್ಲ.

## ೧೩

ಶಂಕರನ ತಾಯಿ ಅವನಿಗೊಂದು ಕಾಗದ ಬರೆದಿದ್ದರು.

ಹಳೆಯ ಕಾಲದ ಹೆಂಗಸು. ಕನ್ನಡ ಸಹ ಸರಿಯಾಗಿ ಓದಿಬರೆಯಲು ಬರುತ್ತಿರಲಿಲ್ಲ. ಕಾಗುಣಿತ ತಪ್ಪಾಗಿದ್ದ, ದೊಡ್ಡ ಅಕ್ಷರಗಳಲ್ಲಿ ಆಕೆ ಮಗನಿಗೆ ಕಾಗದ ಬರೆದಿದ್ದರು. ಆದರೂ ಅದರಲ್ಲಿ ಅರ್ಥ ಸರಿಯಾಗಿತ್ತು.

"ನಿಮ್ಮಪ್ಪನಿಗೆ ನಿನ್ನ ಮೇಲೆ ಬಹಳ ಕೋಪ ಬಂದಿತ್ತು. ಎಷ್ಟೋ ಹೇಳಿ ಸಮಾಧಾನ ಮಾಡಿದ್ದೇನೆ. ನೀನು ಅವಳನ್ನು ಬಿಟ್ಟು ಬಂದರೆ ನೀನು ಮನೆಗೆ ಬರಬಹುದೆಂದು ಹೇಳಿದ್ದಾರೆ. ನೀನು ಮನೆಗೆ ಬಂದುಬಿಡು. ಮುದುಕರಾದ ನಮಗೆ ನೀನಲ್ಲವೇ ಮತ್ಯಾರು ತಾನೇ ದಿಕ್ಕು? ಒಂದು ವೇಳೆ ನಿನ್ನಿಂದ ಅವಳನ್ನು ಬಿಡುವುದು ಸಾಧ್ಯವಿಲ್ಲದೇ ಹೋದರೆ ನಿಮ್ಮಪ್ಪನ ಕಣ್ಣಿಗೆ ಬೀಳದಂತೆ ಏನಾದರೂ ಮಾಡಿಕೋ. ಅಂತೂ ಮನೆಗೆ ಬಂದುಬಿಡು" ಎಂದು ಬರೆದಿದ್ದರು.

ತಾಯಿಯು ಸೂಚಿಸಿದಂತೆ ಬೆಂಗಳೂರು ಹಿಂತಿರುಗಿ ಹೋಗುವುದು ಅವನಿಂದ ಸಾಧ್ಯವಾಗಿರಲಿಲ್ಲ. ಅವನು ಬಲು ದೂರ ಬಂದುಬಿಟ್ಟಿದ್ದ.

ಇನ್ನು ಓದುವುದಕ್ಕೆ ತಂದೆ ಹಣ ಕೊಡುವುದಿಲ್ಲವೆಂಬುದಂತೂ ಖಚಿತವಾಗಿತ್ತು. ಆ ಕಾರಣದಿಂದಲೇ ವ್ಯಾಸಂಗ ನಿಲ್ಲಿಸ ಬೇಕಾಗಿರಲಿಲ್ಲ. ಅವನ ಬಳಿ ಇದ್ದ ಸ್ವಂತ ಹಣದಿಂದಲೇ ಓದಬಹುದಾಗಿತ್ತು. ಆದರೆ ಬೆಳಗಾಂನಲ್ಲಿರುವುದಕ್ಕೂ ಮನಸ್ಸು ಒಪ್ಪುತ್ತಿರಲಿಲ್ಲ. ಅವನ ತಂದೆ ಕಡೆಯ ಮಾತುಗಳನ್ನಾಡಿ ಹಾಸ್ಟಲಿನ ಕೋಣೆಯಿಂದ ಹೊರಗಡೆ ಹೋದಾಗ ಅನೇಕ ಮಂದಿ ಹುಡುಗರು ನಿಂತು ಕೇಳುತ್ತಿದ್ದರು. ತನಗೂ ತನ್ನ ತಂದೆಗೂ ಆದಂತಹ ಮಾತುಕತೆಗಳಿಂದ ಎಲ್ಲ ವಿಷಯಗಳೂ ಗೊತ್ತಾಗಿ ಹೋಗಿರುತ್ತದೆ. ಅದು ಹಾಸ್ಟಲು ಕಾಲೇಜುಗಳಲ್ಲೆಲ್ಲಾ ಗುಲ್ಲಾಗಿದೆ. ಎಲ್ಲರೂ ತನ್ನ ಕಡೆಗೆ ಬೆರಳು ತೋರಿಸಿ ಮಾತನಾಡಿಕೊಳ್ಳುತ್ತಾರೆ.

ಹಾಗಿರುವಾಗ ಕಾಲೇಜಿಗೆ ಹೋಗಿ ಓದುವುದು ಹೇಗೆ?

ಯಾರು ಏನೆಂದು ಕೊಂಡರೇನು? ಅದನ್ನೆಲ್ಲಾ ಎದರಿಸುತ್ತೇನೆ. ಹೋಗಿ ಓದುತ್ತೇನೆ, ಎಂದು ಮನಸ್ಸನ್ನು ಗಟ್ಟಿಮಾಡಿಕೊಳ್ಳುತ್ತಿದ್ದ.

ಬೆಳಗಾಂನಲ್ಲಿ ಮತ್ತೊಂದು ಆತಂಕವಿತ್ತು, ಅದು ಶಿವಣ್ಣ.

ತಾನು ಕನಕಳನ್ನು ಪ್ರೀತಿಸುತ್ತಿದ್ದಾನೆಂಬುದು ನಿಜ. ಆದರೆ ಪ್ರೇಮಕ್ಕಿಂತ ಮುಖ್ಯವಾದದ್ದು ಅವಳನ್ನು ಉದ್ಧಾರ ಮಾಡಬೇಕೆಂಬ ಸಂಕಲ್ಪ. ಈ ಎರಡು ಮೂರು ತಿಂಗಳುಗಳ ಅನುಭವದಲ್ಲಿ ಎಷ್ಟೋ ಬಾರಿ ಅವಳ ಮೇಲೆ ಅಸಮಾಧಾನವಾಗಿದೆ, ಕೋಪ ಬಂದಿದೆ. ಕೆಲವು ಸಲವಂತೂ ಇವಳನ್ನೇಕೆ ಕಟ್ಟಿಕೊಂಡು ಅಳಬೇಕು ಎಂದು ತೋರಿದೆ. ಇವೆಲ್ಲಾ ಪ್ರೇಮವೇನು? ಪವಿತ್ರವಾದ ಪ್ರೇಮದಲ್ಲಿ ಇಂತಹ ಮನಃಕಷಾಯಗಳು ಉದ್ಭವಿಸುತ್ತವೆಯೇನು? ಇಲ್ಲ, ಖಂಡಿತವಾಗಿ ಇಲ್ಲ. ಕೇವಲ ಪ್ರೇಮವೇ ಆಗಿದ್ದರೆ, ಅವಳ ಸಹವಾಸಾಪೇಕ್ಷೆಯೇ ಆಗಿದ್ದರೆ ಎಂದೋ ಅವಳು ಬೇಡವೆನ್ನಿಸುತ್ತಿತ್ತು. ಅವೆಲ್ಲದಕ್ಕಿಂತಲೂ ಪ್ರಬಲವಾದ ಸಂಕಲ್ಪ, ಪತಿತೆಯಾದವಳೊಬ್ಬಳನ್ನು ಉದ್ಧಾರ ಮಾಡಬೇಕೆಂಬ ಸಂಕಲ್ಪ, ಏನೇ ಆದರೂ ತನಗೂ ಅವಳಿಗೂ ಕಡಿದು ಹೋದಂತೆ ಉಳಿಸಿಕೊಂಡು ಬಂದಿದೆ.

ಅಂತಹ ಪವಿತ್ರವಾದ ಸಂಕಲ್ಪಕ್ಕೇ ಅಡ್ಡಿ ಮಾಡಲು ಪ್ರಯತ್ನ ಮಾಡುತ್ತಿರುವವನು ಶಿವಣ್ಣ. ಮೊದಲಿನಿಂದಲೂ ಅವನು ಮೇಲೇರುತ್ತಿರುವ ಕನಕಳನ್ನು ಕೆಳಗೆಳೆಯಲು ಪ್ರಯತ್ನ ಮಾಡುತ್ತಿದ್ದಾನೆ. ತಾನು

ಮನೆಯಲ್ಲಿಲ್ಲದೇ ವಾಸುದೇವನ ಜೊತೆಯಲ್ಲಿ ಹೊರಗೆ ಹೋಗಿದ್ದಾಗ ಬಂದು ಅನಾಹುತ ಮಾಡಿಬಿಟ್ಟ. ಕನಕ ಇಲ್ಲವೆಂದು ಪ್ರಮಾಣ ಮಾಡಿದ್ದರೂ ಆ ದಿನ ಅವಳಿಗೂ ಶಿವಣ್ಣನಿಗೂ ರತಿಯು ಏರ್ಪಟ್ಟಿದ್ದಿತೆಂದು ಸಂದೇಹ ಪಡುತ್ತ ಲೇ ಇದ್ದ. ಅಂದೇ ಕನಕಳಿಗೂ ತನಗೂ ಕಡಿದು ಹೋಗಿತ್ತು. ಏನೋ ಋಣಾನುಬಂಧ. ಪುನಃ ಕೂಡಿ ಬಂದಿತು.

ಈಗ ತನ್ನನ್ನೂ ಅವಳನ್ನೂ ಬೇರ್ಪಡಿಸಲು ದೊಡ್ಡದೊಂದು ಪ್ರಯತ್ನ ವನ್ನೇ ಮಾಡಿದ್ದ. ವಿಫಲನಾಗಿದ್ದರೂ ಸುಮ್ಮನಿರುತ್ತಾನೆಯೇ, ಆ ಮ ನುಷ್ಯ. ಇನ್ನೂ ಏನೇನು ಅವಗಡಗಳನ್ನು ತರುತ್ತಾನೆಯೋ? ಸರ್ವಜ್ಞನು ಹೇಳಿರುವಂತೆ ಹೆಣ್ಣಿನ ಮನಸ್ಸು ದುರ್ಬಲವಾದುದು. ಎಳೆದ ಕಡೆ ಹೋಗು ತ್ತದೆ. ಯಾವುದೋ ವಿಷ ಗಳಿಗೆಯಲ್ಲಿ ಶಿವಣ್ಣ ಕನಕಳ ಮನಸ್ಸು ಕೆಡಿಸಿದರೆ? ತಾನು ಇಷ್ಟು ದಿನದಿಂದ ಮಾಡಿದ ಪ್ರಯತ್ನ, ತ್ಯಾಗ ಎಲ್ಲವೂ ವಿಫಲವಾಗಿ ಹೋಗುತ್ತವೆ.

ಶಿವಣ್ಣನಿಂದ ದೂರವಾಗಿ ಎಲ್ಲಿಯಾದರೂ ಹೊರಟು ಹೋಗಬೇಕು, ಎಂದು ಶಂಕರನಿಗೆ ತೋರಲು ಆರಂಭವಾದೊಡನೆಯೇ ಬೆಳಗಾವಿಯಲ್ಲಿರು ವುದಕ್ಕೆ ಇರುವ ಅನಾನುಕೂಲಗಳು ಕಂಡು ಬಂದುವು. ಕಾಲೇಜಿಗೆ ಹೋಗು ವುದು ಅಸಾಧ್ಯವೆನ್ನಿಸಿತು. ತಾನು ಗುಂಡಿಗೆಯನ್ನು ಎಷ್ಟೇ ಗಟ್ಟಿಮಾಡಿ ಕೊಂಡು ಹೋದರೂ ತನಗೊಂದು ಬಗೆಯ ಬಹಿಷ್ಕಾರವು ಬಂದು ಅದನ್ನೆ ದುರಿಸಲು ಕಷ್ಟವಾಗುತ್ತದೆಂದು ತೋರಿತು.

ಅಂತೂ ಈ ವರ್ಷ ಓದು ಹೋದ ಹಾಗೆಯೇ ? ಮುಂದಿನ ವರ್ಷ ಅನುಕೂಲವಾದರೆ ಬೆಳಗಾವಿಗೇ ಬಂದು ಓದುವುದು. ಅಷ್ಟುಹೊತ್ತಿಗೆ ಈ ಘಟನೆಯು ಹಳೆಯದಾಗಿ ಮರೆತು ಹೋಗಿರುತ್ತದೆ. ಒಂದು ವೇಳೆ ಈ ಹಾಳು ಊರು ಬೇಡವೆಂದು ತೋರಿತು. ಮದರಾಸಿನಲ್ಲಿಯೋ ಬೊಂಬಾಯಿ ನಲ್ಲಿಯೋ ಓದಿ ಪ್ಯಾಸುಮಾಡಿ ಕೊಳ್ಳುವುದು.

ನಾಲ್ಕೈದು ದಿನಗಳು ಹಗಲೂ ರಾತ್ರಿ ಈ ವಿಷಯಗಳನ್ನೇ ಮೇಲಿಂದ ಮೇಲೆ ಆಲೋಚನೆ ಮಾಡಿದ. ಕಡೆಯಲ್ಲಿ ಮತ್ತೊಂದು ಆಲೋ ಚನೆ ಹೊಳೆಯಿತು. ಕಾಗದಕ್ಕೆ ಉತ್ತರ ಬರಲಿಲ್ಲವೆಂದು ಅವನ ತಾಯಿಯೇ ಬಂದು ಬಿಟ್ಟರೆ ? ತಂದೆಯೊಂದಿಗೆ ಶೌರ್ಯ ಮಾಡಿದಂತೆ ಎದುರಿಗೆ ಬಂದು

ಕುಳಿತು ಅಳುವ ತಾಯಿಯೊಂದಿಗೆ ಮಾಡುವುದು ಸಾಧ್ಯವೇ ಇಲ್ಲ. ಆಕೆ ಯೊಂದಿಗೆ ಬೆಂಗಳೂರಿಗೆ ವಾಪ್ಸು ಹೋಗಲೇ ಬೇಕಾಗುವುದು. ಊರು ಬಿಟ್ಟು ಹೋಗುವುದೆಂದೇ ನಿರ್ಧರಿಸಿ ಕನಕಳೊಂದಿಗೆ ಹೇಳಿದ.

"ಈ ಯಾಕೋ ಊರು ನನಗೆ ಬೇಜಾರಾಗಿದೆ, ಕನಕ. ಇಲ್ಲಿಂದ ಎಲ್ಲಿ ಯಾದರೂ ಹೊರಟು ಹೋಗೋಣ."

ಏನೂ ಆಗದಿದ್ದರೆ ಹೇಗೋ ಹಾಗೆ ಕೇಳಿದಳು.

"ಏನಾಯಿತು, ಅಷ್ಟು ಬೇಗ ಈ ಊರು ಬೇಜಾರಾಯಿತೇ?"

"ಇದೇನು, ಕನಕ. ಏನೂ ಗೊತ್ತಿಲ್ಲದವಳಂತೆ ಮಾತನಾಡುತ್ತೀಯೆ. ಈ ಊರು ನಮ್ಮ ಮೈಸೂರು, ಬೆಂಗಳೂರುಗಳಂತೆ ಅಲ್ಲ. ಅವರವರು ಅವ ರವರ ಕೆಲಸ ನೋಡಿಕೊಂಡಿರುವುದಿಲ್ಲ. ಇಂತಹ ಕಡೆ ನಾವೇಕೆ ಇರಬೇಕು?"

"ಇರಬೇಕಾಗಿಲ್ಲ, ಅಸ್ಟೆ. ಎಲ್ಲಿಗೆ ಹೋಗಬೇಕಾದರೂ ನಿಮ್ಮೊಡನೆ ಬರಲು ನಾನು ಸಿದ್ಧ. ಆದರೆ ಈ ಜನರ ಬಾಯಿಗೆ ಹೆದರಿ ಓಡಿಹೋಗ ಬೇಕೇ–ಎಂದು ಅಷ್ಟೇ."

ಜನದ ಬಾಯಿಗೆ ಹೆದರಬೇಕಾಗಿದೆ ಎಂದು ಹೆದರಬೇಕಾಗಿರಲಿಲ್ಲ. ಆ ಹಾಳು ಶಿವಣ್ಣ ಬಂದು ಎಲ್ಲಿ ಹುಳಿ ಹಿಂಡಿ ಬಿಡುತ್ತಾನೆಯೋ ಎಂದು ಹೆದರ ಬೇಕಾಗಿತ್ತು. ಆದರಾ ಮಾತನ್ನು ಸ್ಪಷ್ಟವಾಗಿ ಹೇಳುವುದಕ್ಕಿಲ್ಲ.

"ಜನಕ್ಕೆ ಹೆದರಬೇಕಾಗಿಯೂ ಇಲ್ಲ. ನಾವು ಓಡಿ ಹೋಗುತ್ತಲೂ ಇಲ್ಲ. ಈ ಬೆಳಗಾವಿಯಲ್ಲಿ ಏನಿದೆ? ಓದೋಣವೆಂದುಕೊಂಡು ಬಂದೆ. ಓದುವುದಿ ಲ್ಲವೆಂದುಕೊಂಡೆ."

"ಹಾಗಾದರೆ ನೀವಿನ್ನು ಓದುವುದಿಲ್ಲವೇ?"

"ಓದುತ್ತೇನೆ. ಅರ್ಧಕ್ಕೆ ಬಿಟ್ಟೇನು ಮಾಡಲಿ. ಲಾ ಪಾಸು ಮಾಡಿ ದರೆ ಏನಾದರೂ ಒಂದು ಮಾರ್ಗವಾಗುತ್ತದೆ. ಈ ವರ್ಷ ಓದುವುದಿಲ್ಲ ವೆಂದುಕೊಂಡಿದ್ದೇನೆ."

"ಯಾಕೆ ಹಾಗೆ ಮಾಡುತ್ತೀಯೆ?" ಎಂದವಳು ಕೇಳಲಿಲ್ಲ. ಅವನು ಆಡುತ್ತಿದ್ದ ಮಾತು ಮುಂದುವರಿಸಿದ.

"ಓದದೇ ಇದ್ದ ಮೇಲೆ ಇಲ್ಲೇನು ಮಾಡುವುದು? ಇನ್ನಾವುದಾದರೂ

ಊರಿನಲ್ಲಿ ಎರಡು ದಿನ ಹಾಯಾಗಿದ್ದು ಬರೋಣವೆಂದುಕೊಂಡೆ. ನಿನ್ನ ಅಭಿಪ್ರಾಯ ಹೇಗಿದೆ?"

ಅವಳಿಗೆ ಬೆಳಗಾಂ ಬಿಟ್ಟು ಹೋಗುವುದು ಇಷ್ಟವಿರವಿಲ್ಲ. ಬೆಳಗಾಂ ಅವಳು ಕಂಡಿರುವ ಊರು. ಗೊತ್ತಿರುವ ನಾಲ್ಕು ಜನ ಇರುವ ಊರು. ಏನಾದರೂ ಹೆಚ್ಚು ಕಡಿಮೆಯಾದರೆ ಯಾವುದಕ್ಕೂ ಹೆದರಬೇಕಾಗಿಲ್ಲ. ಆದರೂ ಮಾತನ್ನು ಹೇಳುವುದಕ್ಕಾಗುವುದೇ?

"ನನ್ನ ಅಭಿಪ್ರಾಯವೇನು ಬಂದಿತು, ನೀವು ಹೇಳಿದ ಹಾಗೆ."

"ಮತ್ತೊಂದು ವಿಷಯವಿದೆ ಕನಕ. ಯಾರು ಏನೆಂದರೂ ನಾನು ನಿನ್ನ ಕೈ ಬಿಡುವುದಿಲ್ಲ, ಎನ್ನು. ಆದರೆ ನಮ್ಮಮ್ಮ ಬಂದು ಆಳುತ್ತಾ ಮನೆಯ ಬಾಗಿಲಿನಲ್ಲಿ ಕುಳಿತರೆ ರಾದ್ಧಾಂತವಾಗುತ್ತದೆ. ಗುಟ್ಟಾಗಿ ನಾವೆ ಯಲ್ಲಿಯಾದರೂ ಹೊರಟುಹೋಗುವುದು ಕ್ಷೇಮ.

ಯಾವ ಊರಿಗೆ ಹೋಗುವುದೆಂದು ಅವರಿಬ್ಬರೂ ಚರ್ಚಿಸಿದರು. ಮೈಸೂರು ಕಡೆಗೆ ಹೋಗುವುದು ಇಬ್ಬರಿಗೂ ಇಷ್ಟವಿರಲಿಲ್ಲ. ಶಶಿಕಾಂತ ನಿದ್ದುದರಿಂದ ಹುಬ್ಬಳ್ಳಿಯೂ ಶಂಕರನಿಗೆ ಸರಿತೋರಲಿಲ್ಲ. ಎಲ್ಲಿಗಾದರೂ ಹೋಗುವವರು ಬೊಂಬಾಯಿ, ಪೂನಾಗಳಲ್ಲಿ ಯಾವುದಾದರೊಂದು ಊರಿಗೆ ಹೋಗಬಹುದಾಗಿತ್ತು. ನೋಡದ ದೊಡ್ಡ ಊರಿಗೆ ಹೋಗುವುದು ಅವನಿಗೆ ಒಪ್ಪಿಗೆಯಿಲ್ಲ. ನಾಲ್ಕು ಜನರ ಕಣ್ಣಿಗೆ ಬೀಳದಂತೆ ಸಾಧಾರಣವಾಗಿ ದೊಡ್ಡ ಊರಾಗಿರಬೇಕು. ಹೆಚ್ಚು ಜನಸಂದಣಿ, ಗಲಾಟೆಗಳಿರಬಾರದು. ಅಂತಹ ಊರಾಗಿರಬೇಕು.

ಬಹಳ ಯೋಚನೆ ಮಾಡಿ ಬೀಜಾಪುರದವಲ್ಲಿ ಹೋಗಿರಬೇಕೆಂದೂ ಅಲ್ಲಿ ಸರಿಹೋಗದಿದ್ದರೆ ಅನಂತರ ಬೇರೊಂದು ಆಲೋಚನೆ ಮಾಡುವು ದೆಂದೂ ನಿರ್ಧರಿಸಿದರು.

ಮಾರನೆಯ ದಿನವೇ ಕನಕಳೂ, ಶಂಕರನೂ ಬೆಳಗಾಂ ಬಿಟ್ಟರು.

ರೈಲು ಹುಬ್ಬಳ್ಳಿಯನ್ನು ಸಮೀಪಿಸುತ್ತಿದ್ದ ಹಾಗೆ ಶಂಕರನಿಗೊಂದು ಬಗೆಯಾಗಿ ದಿಗಿಲಾಗ ತೊಡಗಿತು. ಬೆಂಗಳೂರಿನಿಂದ ಯಾರಾದರೂ ತನ್ನನ್ನು ಹುಡುಕಿಕೊಂಡು ಬೆಳಗಾವಿಗೆ ಹೊರಟಿದ್ದು ಹುಬ್ಬಳ್ಳಿಯಲ್ಲಿ ಸಿಕ್ಕಿದರೆ ? ತನ್ನ ತಾಯಿಯೇನಾದರೂ ಬಂದು ಬಿಟ್ಟಿದ್ದರೆ– ಶಶಿಕಾಂತ

ಸಿಕ್ಕಿದರೆ ? ತನ್ನ ತಾಯಿಯೇನಾದರೂ ಬಂದು ಬಿಟ್ಟಿದ್ದರೆ– ಶಶಿಕಾಂತ ಕಾಣಿಸಿಕೊಂಡರೆ ?

ಅವರೆಲ್ಲರಿಗಿಂತಲೂ ವಾಸುದೇವನ ದಿಗಲು ಶಂಕರನಿಗಿ ಹೆಚ್ಚಾಗಿತ್ತು. ಅವನ ಕಾಲು, ಬೆರಳುಗಳಲ್ಲೆಲ್ಲಾ ಚಕ್ರದ ಚಿನ್ಹೆಗಳಿರಬೇಕು. ಸದಾ ಸುತ್ತುತ್ತಿರುವುದೇ ಅವನ ಕೆಲಸ. ಅವನು ಎದುರಿಗೆ ಬಂದು ಓದು ಸಹ ಬಿಟ್ಟು ಕನಕಳನ್ನು ಕಟ್ಟಿಕೊಂಡು ಓಡಿ ಹೋಗುತ್ತಿರುವಂತಹ ತನ್ನನ್ನು ನೋಡಿದರೆ ?.

ಏನೆನ್ನುತ್ತಾನೆ ? ಎನ್ನಲು ಅವನಾರು ? ಆದರೂ ತಪ್ಪಿತಸ್ಥನನ್ನು ದಿಟ್ಟಿಸುವ ನ್ಯಾಯಾಧೀಶನಂತೆ ನೋಡುವ ಅವನ ದೃಷ್ಟಿಯ ಮುಂದೆ ನಿಲ್ಲುವುದು ಬಹಳ ಕಷ್ಟ.

ಹುಬ್ಬಳ್ಳಿಯು ಸಿಕ್ಕುತ್ತಲು ರೈಲು ಪಟ್ಟಿಗೆಯ ಮೂಲೆ ಹಿಡಿದು ಪತ್ರಿಕೆಯನ್ನು ಓದುವ ನೆಪದಿಂದ ಮುಖ ಮುಚ್ಚಿ ಕುಳಿತು. ಹಾಳು ಹುಬ್ಬಳ್ಳಿಯಿಂದ ರೈಲು ಬೇಗ ಹೊರಡುವುದೇ ಇಲ್ಲ. ಶತಮಾನಗಳು ನಿಲ್ಲುವಂತೆ ನಿಲ್ಲುತ್ತದೆ.

ಕಡೆಗೆ ರೈಲು ಹುಬ್ಬಳ್ಳಿಯಿಂದಲೂ ಹೊರಟಿತು. ಶಂಕರ ಪತ್ರಿಕೆ ಓದುವುದನ್ನು ನಿಲ್ಲಿಸಿ, ಕನಕಳೊಂದಿಗೆ ಮಾತನಾಡಲು ತೋಡಗಿದ. ಗದಗ ದಾಟಿದ ನಂತರವಂತೂ ಎಲ್ಲ ಭಯಗಳೂ ತಪ್ಪಿದುವು. ಪಂಜರದಿಂದ ಮೋಡಗಳನ್ನು ಮುಟ್ಟಿದ ಹಕ್ಕಿಯಂತೆ ಮನಸ್ಸು ನಿರಾಳವಾಯಿತು.

ಅಲ್ಲಿಂದ ರೈಲಿನ ವೇಗವು ಕಡಿಮೆ. ಪ್ರತಿಯೊಂದು ಸ್ಟೇಷನ್ನಿನಲ್ಲಿಯೂ ಬಹಳ ಹೊತ್ತು ರೈಲು ನಿಲ್ಲುತ್ತಿತ್ತು. ಅವರು ಕುಳಿತಿದ್ದ ಸೆಕೆಂಡ್ ಕ್ಲಾಸಿನಲ್ಲಿ ಗದ್ದಲವಿಲ್ಲದಿದ್ದರೂ ಪ್ರತಿಯೊಂದು ಕಡೆಯೂ ಸಂತೆ ನೆರೆದಂತೆ ಹತ್ತುವ ಜನ, ಇಳಿಯುವ ಜನ.

ಎಂದೆಂದಿಗೂ ಮುಗಿಯದಂತಿತ್ತು, ಆ ಪ್ರಯಾಣ.

ಮಾತನಾಡಿ, ಮಾತನಾಡಿ, ಬೇಜಾರಾಗಿತ್ತು. ಸಿಗರೇಟು ಸೇದಿ ಸೇದಿ ಬಾಯಿ ಕೆಟ್ಟಿತ್ತು.

ಪ್ರಯಾಣ ಮುಗಿಯುವುದಾವಾಗಲೆಂದು ಗೈಡ್ ತೆಗೆದು ನೋಡಿದ. ಅವನೆಂದೂ ಕೇಳದಿದ್ದ ಊರುಗಳ ಹೆಸರುಗಳನ್ನು ಓದ ತೊಡಗಿಡ.

ಒಂದು ಊರಿನ ಹೆಸರು ಚಿರಪರಿಚಿತವಿದ್ದಂತಿತ್ತು. ಬಾದಾಮಿ.

ಬಾದಾಮಿ. ಚಾಲುಕ್ಯರ ಬಾದಾಮಿ. ಎಲ್ಲಿಯೋ ಮೂಲೆಯಲ್ಲಿದ್ದರೂ ಕನ್ನಡ ಜನ ಒಂದು ಕಾಲದಲ್ಲಿ ಹಿಮಾಲಯದವರೆವಿಗೆ ದಂಡೆತ್ತಿ ಹೋಗಿದ್ದರೆಂದು ಚರಿತ್ರೆಯಲ್ಲಿ ಓದಿದ್ದ. ಹಿಮಾಚಲದ ಹಿಮಶಿಖರಗಳ ಮೇಲೆ ಜಯಪತಾಕೆಯನ್ನು ಹಾರಿಸಿದುದು ಕನ್ನಡದ ಜನಕ್ಕೆಷ್ಟು ಅಸಂಭವವಾಗಿರಬೇಡ?

ಅಂತಹ ಬಾದಾಮಿ ಶಂಕರನ ಮನಸ್ಸನ್ನು ಸೆಳೆಯಿತು. ಅಲ್ಲಿನ ಗುಹಾಂತರ್ದೇವಾಲಯಗಳನ್ನು ನೋಡಬೇಕೆನ್ನಿಸಿತು. ಉತ್ಸಾಹದಿಂದ ಹೇಳಿದ.

“ಕನಕ. ಬಾದಾಮಿಯಲ್ಲಿಳಿದು ಒಂದು ದಿನವಿದ್ದುಕೊಂಡು ಮುಂದೆ ಹೋಗೋಣ.”

“ಅಲ್ಲೇನಾದರೂ ಕೆಲಸವಿದೆಯೇನು ?”

“ಹಾಗೆ ಕೆಲಸವಿಲ್ಲ. ಅಲ್ಲಿ ಗುಹಾಂತರ್ದೇವಾಲಯವಿದೆ. ಕಲ್ಲಿನಲ್ಲಿ ಸುಂದರ ವಿಗ್ರಹಗಳನ್ನು ಕಡೆದಿದ್ದಾರೆಂದು ಕೇಳಿದ್ದೇನೆ. ನಾನು ಅವುಗಳನ್ನು ನೋಡಿಯೇ ಇಲ್ಲ. ಇನ್ನು ಎಂದೋ ಏನೋ ? ಬಾದಾಮಿಯನ್ನು ಹಾದು ಹೋಗುತ್ತಿದ್ದೇವೆ. ನೋಡಿಕೊಂಡೇ ಹೋಗೋಣ”

“ಟಿಕೆಟ್ಟು ಬೀಜಾಪುರಕ್ಕೇ ತೆಗೆದು ಕೊಂಡಿದ್ದೀರಲ್ಲವೆ ?”

“ಹೌದು. ಒಂದು ಹತ್ತು ರೂಪಾಯಿ ಹೋದರೆ ಹೋಗಲಿ. ಇಲ್ಲಿ ಇಳಿಯೋಣ”

[redacted]

ಇಳಿಯದೇ ಇರುವುದಕ್ಕೆ ಪ್ರತ್ಯಕ್ಷವಾಗಿ ಅವಳಿಗೆ ಕಂಡು ಬರುತ್ತಿದ್ದುದು ಸುಮಾರು ಹತ್ತು ರೂಪಾಯಿ ಉಳಿಯುತ್ತದೆಂಬುದು ಒಂದೇ ಕಾರಣ. ಹಣ ಉಳಿಸುವುದರಲ್ಲಿ ಅವಳಿಗೆ ಯಾವಾಗಲೂ ಆಸಕ್ತಿ ಇರಲಿಲ್ಲ.

“ಆಗಲಿ, ನೀವು ನೋಡಬೇಕೆನ್ನುವುದಾದರೆ ನೋಡೋಣವಂತೆ.”

ಕನಕಳ ಒಪ್ಪಿಗೆಯೇನೋ ದೊರೆಯಿತು. ಅದು ಅಷ್ಟು ಸಪ್ಪೆಯಾಗಿದ್ದುದು ಮನಸ್ಸಿಗೆ ಹಿತವಾಗಲಿಲ್ಲ. ಆ ಒಪ್ಪಿಗೆಯಲ್ಲಿ ಬಾದಾಮಿಯನ್ನು ನೆನೆದುಕೊಂಡಾಗ ಕನ್ನಡ ಜನರಿಗಿರಬೇಕಾದ ಹೆಮ್ಮೆ ಇರಲಿಲ್ಲ. ಅಲ್ಲಿನ ಅಮರ

ವಾದ ಕಲಾಕೃತಿಗಳನ್ನು ನೋಡಬೇಕೆಂಬ ಬಯಕೆ ಒಡೆದು ಮೂಡುತ್ತಿರ ಲಿಲ್ಲ.

ಬೀದಿಯ ಹೆಣ್ಣಾಗಿ, ಜೀವನದಲ್ಲಿ ಆಸಕ್ತಿಯನ್ನು ಕನಕ ಕಳೆದು ಕೊಂಡಿರದ್ದಿದ್ದರೆ ? ಸ್ವಲ್ಪ ಓದಿಕೊಂಡವಳಾಗಿದ್ದಿದ್ದರೆ ? ತಾನು ನಿರೀಕ್ಷಿಸಿದ್ದ ಹೆಮ್ಮೆ, ಬಯಕೆಗಳು ಅವಳಲ್ಲಿ ಕಂಡು ಬರುತ್ತಿದ್ದವು.

ಈಗ ? ಏನಿದೆಯೋ ಇದೆ. ಇದ್ದುದನ್ನು ಸರಿ ಮಾಡಿಕೊಂಡು ಹೋಗುವುದೇ ಜೀವನ !

ಬಾದಾಮಿಯಲ್ಲಿ ರೈಲಿಳಿದು, ಸಾಮಾನುಗಳನ್ನು ರೈಲ್ವೆ ಸ್ಟೇಷನ್ನಿನಲ್ಲಿ ಕೂಲಿಯೊಬ್ಬನಿಗೆ ಒಪ್ಪಿಸಿ, ಬಸ್ಸಿನಲ್ಲಿ ಹೊರಟರು. ಬಸ್ ಪ್ರಯಾಣ ಮುಗಿ ಸಿಕೊಂಡು ಜಟಕಾದಲ್ಲಿ ಸಾಗಿದರು.

ಆ ಪಾಳು ಪ್ರದೇಶವನ್ನು ನೋಡುತ್ತಿದ್ದ ಹಾಗೆ ಶಂಕರನ ಮನಸ್ಸಿನಲ್ಲಿ ಬಗೆಬಗೆಯ ಭಾವಗಳು ಬಂದುವು. ಬಿಕೋ ಎನ್ನುತ್ತಿರುವ ಈ ಪ್ರದೇಶ ಗಳು ಹಿಂದೆಷ್ಟು ವೈಭವಪೂರಿತವಾಗಿರಬೇಕು. ಇಲ್ಲಿ ಎಷ್ಟು ಜನ ಉದ್ದಾಮ ವೀರರು ಮಲಗಿ ಶಾಶ್ವತ ವಿಶ್ರಾಂತಿಯನ್ನು ಪಡೆಯುತ್ತಿರಬೇಕು. ಎಷ್ಟು ಬಗೆಯ ಜನಗಳೊಂದಿಗೆ ಹೋರಾಡಿದವರಿವರು! ಎಷ್ಟು ರೀತಿಯ ಯುದ್ಧ ಗಳಲ್ಲಿ ಗೆದ್ದವರಿವರು!

ಇವರೆಲ್ಲಾ ಇಂದು ಮೌನವಾಗಿ ಮಲಗಿದ್ದಾರಲ್ಲವೇ?

ಇಲ್ಲ, ಮೌನವಾಗಿಲ್ಲ. ಬೀಸುವ ಗಾಳಿಯು ಶಬ್ದಮಯವಾಗಿ ಭಾಸ ದಾಯಿತವನಿಗೆ. ಗಾಡಿ, ಕುದುರೆ, ಗಾಡಿ ಹೊಡೆಯುವವನು, ಮೈಗೆ ಮೈ ತಗಲಿಸಿಕೊಂಡು ಕುಳಿತಿರುವ ಕನಕ ಎಲ್ಲವೂ ಅವನ ಚಿತ್ತಭಿತ್ತಿಯಿಂದ ಮರೆ ಯಾಗಿ ಹೋಯಿತು. ಖಡ್ಗಗಳ ಝಣಝಣಾತ್ಕಾರ ಕೇಳಿ ಬಂದಂತಾ ಯಿತು.

ಏನೋ ದನಿಯು, ಬೃಹತ್ ಧ್ವನಿಯು ಸಮೂಹ ಕಂಠದಿಂದ ಕೇಳಿ ಬರುತ್ತಿದೆ.

ಹೌದು. ಲಕ್ಷ ಲಕ್ಷ ಕಂಠಗಳು ಕೂಗಿ ಹೇಳುತ್ತಿವೆ.

"ಎಲೈ ಕನ್ನಡಿಗನೇ! ಏಕೆ ನಿರ್ವೀರ್ಯನಾಗಿರುವೆ ? ಏಳು ! ಎದ್ದೇಳು"

ಗಾಡಿಯವನು ಕೆಳಗಿಳಿಯಲು ಹೇಳಿದಾಗ ಶಂಕರನಿಗೆ ಎಚ್ಚರವಾ

ಯಿತು. ಇಳಿದು ಗಾಡಿಯವನನ್ನು ಇರಲು ಹೇಳಿ, ಕನಕಳೊಂದಿಗೆ ದೇವಾಲ ಯಾಭಿ ಮುಖವಾಗಿ ನಡೆದ ಹೋಗುತ್ತಾ ಸೂಕ್ಷ್ಮವಾಗಿ ಬಾದಾಮಿ ಚಾಲು ಕ್ಯರ ಶೌರ್ಯ ಪರಕ್ರಮಗಳನ್ನೂ ಗುಹಾಂತರ ದೇವಾಲಯವನ್ನು ನಿರ್ಮಿಸಿದ ಸಿದವರ ಕಲಾನೈಪುಣ್ಯವನ್ನೂ ಹೇಳಿದ.

ಅವಳು ಹೂಗುಟ್ಟುತ್ತಿದ್ದಳು.

ದೇವಾಲಯದೊಳಗೆ ದೊಡ್ಡ ಸಣ್ಣ ಶಿಲಾಫಲಕಗಳ ಮೇಲೆ ವಿವಿಧ ದೇವತೆಗಳು ಮೂಡಿದ್ದವು.

ಎಲ್ಲದಕ್ಕಿಂತಲೂ ಹೆಚ್ಚಾಗಿ ದೇವ ದೇವಿಯರ ಪ್ರಣಯ ಭಂಗಿಗಳು ಶಂಕರನ ಮನಸ್ಸನ್ನು ಸೆರೆ ಹಿಡಿದುವು.

ಒಂದು ಕಡೆ ಮಲಗಿರುವ ಮಾ ಧ ವ ನ ಪಕ್ಕದಲ್ಲಿ ರಮೆಯು ಕುಳಿತಿದ್ದಳು. ಮತ್ತೊಂದು ಕಡೆ ಶಿವ ಗೌರಿಯನ್ನು ತೊಡೆಯ ಮೇಲೆ ಕುಳ್ಳಿರಿಸಿ ಕೊಂಡಿದ್ದ. ಮಗದೊಂದು ಕಡೆ ಜಗತ್ತನ್ನೇ ಮರೆತು ಮನ್ಮಥ ರತಿಯನ್ನು ಆಲಂಗಿಸಿ ಹಿಡಿದು ನಿಂತಿದ್ದ.

ಶಂಕರನಿಗೆ ಪುರಾಣಗಳ ಪರಿಚಯ ತಕ್ಕಮಟ್ಟಿಗಿದ್ದಿತು. ದೇವ ದೇವಿಯರ ಕತೆಗಳು ತಿಳಿದಿದ್ದುವು. ದೇವತೆಗಳು ಮಾನವರಿಗೆ ಪೂಜ್ಯರು. ಆದರೆ ಪ್ರೇಮ ಪ್ರಣಯಗಳಲ್ಲಿ ಅವರಿಗಿರುವ ಸ್ವಾತಂತ್ರ ನಮಗಿಲ್ಲಿಲ್ಲ. ಆ ಶಿವ ಪಾರ್ವತಿಯನ್ನು ತೊಡೆಯ ಮೇಲೆ ಕೂರಿಸಿಕೊಂಡು ಹೇಗೆ ಕುಳಿತಿದ್ದಾನೆ ? "ಮುಟ್ಟಿದರೆ ಮುನಿ" ಗಿಡದಂತಾಡುವ ನಮ್ಮ ಹೆಣ್ಣುಗಳಂತೆ ರತಿ ಹೆದರಿ ನಡುಗುತ್ತಿದ್ದಾಳೆಯೇ ?

ಯಾವ ಮತ, ವೇದಾಂತಗಳನ್ನು ತೆಗೆದುಕೊಂಡರೂ ಹೇಳುವುದೊಂದೇ ಮಾತು. ಒಂದಲ್ಲ, ಒಂದು ಬಗೆಯಾಗಿ ಮಾನವ ದೇವನಾಗುವ ರೀತಿ ಹೇಳುತ್ತವೆ.

ದೇವನಾಗ ಬಯಸುವ ಮಾನವ ದೇವದೇವಿಯರ ಪ್ರಣಯ ಜೀವನ ವನ್ನು ಅನುಸರಿಸಬಾರದೇಕೆ?

ಮತ್ತೊಂದು ಗಳಿಗೆಯಲ್ಲಿ ತೋರಿತು. ರಮೆ ತಲೆ ತಗ್ಗಿಸಿಕೊಂಡೇ ಕುಳಿತಿದ್ದಾಳೆ. ಶಿವನ ತೊಡೆಯೇರಿರುವ ಶಿವೆಯ ದೃಷ್ಟಿಯು ಅಧೋಮುಖ ವಾಗಿದೆ. ರತಿ ನಾಚಿದಂತೆಯೇ ಕಂಡುಬರುತ್ತಿದ್ದಾಳೆ.

ಮಾನವ ನಿರ್ಮಾಣ ಮಾಡಿದ್ದರಲ್ಲಿ ತನ್ನತನವನ್ನೆಲ್ಲಿ ಬಿಟ್ಟಾನು?

ದಾರಿ ತೋರಿಸಲು ಬಂದವನು ಸ್ವಲ್ಪ ಮುಂದಿದ್ದ. ಪಕ್ಕದಲ್ಲಿದ್ದ ಕನಕಳಿಗೆ ಶಂಕರನ ಮನಸ್ಸಿನಲ್ಲಿ ಬಂದ ಆಲೋಚನೆಗಳನ್ನು ಹೇಳಬಯಸುತ್ತಾ ಇಂದ.

"ನೋಡಿದೆಯಾ ಕನಕ. ಶಿಲಾಫಲಕಗಳಲ್ಲಿರುವ ಆ ಮೂರ್ತಿಗಳನ್ನು. ಶಿಲ್ಪಿಯ ನೈಪುಣ್ಯವನ್ನು ಗಮನಿಸು. ಆ ಮೂರು ಮಂದಿ ಗಂಡುಗಳ ಮುಖಭಾವಗಳಲ್ಲಿನ ವ್ಯತ್ಯಾಸಗಳನ್ನು ನೋಡು. ಆ ಆಸೆಗಳಲ್ಲಿ ಕಂಡು ಬರುವ ವೈವಿಧ್ಯವು ಹೇಗಿದೆ? ಮೂರು ಹೆಣ್ಣುಗಳೂ ನಾಚಿದ್ದಾರೆ, ನಿಜ. ಆದರೆ ಆ ನಾಚಿಕೆಗಳಲ್ಲಿರುವ ಬಗೆಯನ್ನು ನೋಡು."

ಕನಕ ಒಂದು ಬಗೆಯ ಧ್ವನಿಯಿಂದ ಹೇಳಿದಳು.

"ಇದನ್ನೆಲ್ಲಾ ಏನು ಅಂತ್ರೀ, ನೋಡುವುದು. ನಾಚಿಕೆ ಇಲ್ಲದ ದೇವರುಗಳು. ನಾವು ಮಲಗುವ ಮನೆಯಲ್ಲಿ ಮಾಡುವುದನ್ನೆಲ್ಲಾ ಮಾಡುತ್ತಾ ಇವೆ. ಅಸಹ್ಯ, ನಡೆಯಿರಿ. ಹೊರಗೆ ಹೋಗೋಣ."

ಶಂಕರನ ಉತ್ಸಾಹ ಭಗ್ನವಾಯಿತು. ಕುರಿಯಂತೆ ಮುಂದೆ ಹೋಗುತ್ತಿದ್ದ ಮಾರ್ಗದರ್ಶಕನನ್ನು ಅನುಸರಿಸಿ ಹೋದ. ಅವನು ಏನೇನೋ ಹೇಳುತ್ತಿದ್ದ. ಇವನೂ ಏನೇನೋ ನೋಡುತ್ತಿದ್ದ. ಆದರೆ ಯಾವುದೂ ಕಿವಿಗೆ ಬೀಳಲಿಲ್ಲ. ಯಾವುದೂ ಕಣ್ಣಿಗೆ ಬೀಳಲಿಲ್ಲ.

ಹೊರಗೆ ಗಾಡೀ ನಿಂತಿತ್ತು. ಮಾರ್ಗದರ್ಶಕನ ಕೈಗೆ ರೂಪಾಯಿ ಇಟ್ಟು ಗಾಡೀ ಹತ್ತಿದ.

ಗಾಡೀ ಸ್ಟೇಷನ್ನಿಗೆ ಹೋಗುತ್ತಿದ್ದಾಗ ಪುನಃ ಬಾದಾಮಿಯ ಪಾಳು ನೆಲವು ಕಣ್ಣಿಗೆ ಬಿದ್ದಿತು. ಮಲಗಿರುವ ವೀರರು ಕೂಗಿಕೊಳ್ಳುತ್ತಿರುವಂತೆ ಬೀಸುವ ಗಾಳಿಯಲ್ಲಿ ದನಿಗಳು ಕೇಳಿ ಬಂದ ಹಾಗಾಯಿತು.

"ಹೀಗೆ ಕೂಗಿಕೊಳ್ಳುತ್ತಾ ಬೇಜಾರು ಮಾಡುತ್ತೀರಿ. ಅದರಿಂದಲೇ ಜನ ಇಲ್ಲಿ ಬರುವುದಿಲ್ಲ."

ಶಂಕರ ಏನೋ ಮಾತನಾಡಿದಂತೆ ಕನಕಳಿಗೆ ಕೇಳಿಸಿತು.

"ಏನಂದಿರಿ ?"

"ಏನೂ ಇಲ್ಲ."

## ೧೪

ಶಂಕರ ಬೀಜಾಪುರಕ್ಕೆ ಎಂದೂ ಹೋಗಿರಲಿಲ್ಲ, ಅಲ್ಲಿ ಹೋದರೆ ಎಲ್ಲಿರಬೇಕೆಂದೂ ಏನು ಮಾಡಬೇಕೆಂದೂ ಅವನಿಗೆ ಗೊತ್ತಿರಲಿಲ್ಲ. ಹೊಸ ಊರಿಗೆ ಹೋದರೆ ಎಲ್ಲರೂ ಏನು ಮಾಡುತ್ತಾರೆಯೋ ಅವನೂ ಅದನ್ನೇ ಮಾಡಿದ. ಆ ಊರಿನಲ್ಲಿರಲು ಸಾಧಾರಣವಾಗಿ ಚೆನ್ನಾಗಿರುವುದೆಂದರೆ ಮೆಜೆಸ್ಟಿಕ್ ಹೋಟಲು.

ಕನಕಳ ಜೊತೆಯಲ್ಲಿ ಶಂಕರ ಅಲ್ಲಿಯೇ ತಂಗಿದ.

ಅವರು ಬೀಜಾಪುರದಲ್ಲಿ ಹೋಗಿಳಿದಾಗ ಬೆಳಗಾಗ ಹನ್ನೊಂದು ಹನ್ನೊಂದೂವರೆ ಗಂಟೆ ಇರಬಹುದು. ಸ್ಟೇಷನ್ನಿನಿಂದ ಊರಿಗೆ ಮೂರು ಮೈಲಿ. ಟಾಂಗಾದಲ್ಲಿ ಕುಳಿತು ಬರುವಾಗ ಶಂಕರ ಊರಿನಲ್ಲಿ ಒಳ್ಳೆಯ ಹೋಟಲಾವುದೆಂದು ಗಾಡಿಯುವವನನ್ನು ವಿಚಾರಿಸಿದ.

ಮೆಜೆಸ್ಟಿಕ್ ಹೋಟಲು ಒಳ್ಳೆಯದೆಂದು ಹೇಳಿ ತಂದು ತೋರಿಸಿದವನು. ಅವನೇ, ಗಾಡಿಯುವವನು ತನ್ನ ಗಿರಾಕಿ ಕಾದಿರಿಸಿಕೊಳ್ಳಲು ಕೇಳಿದ.

"ಇಮಾರತ್ತುಗಳನ್ನು ನೋಡಲು ಯಾವಾಗ ಹೋಗುತ್ತೀರಿ?"

ಅವನು ಕೇಳಿದನಂತರ ಶಂಕರನ ನೆನಪಿಗೆ ಬಂತು. ಬೀಜಾಪುರ ವನ್ನು ಆಳುತ್ತಿದ್ದ ಸುಲ್ತಾನರ ಏಳೆಂಟು ಸ್ಮಾರಕಗಳು ಆ ಊರಿನಲ್ಲಿವೆ. ಅವು ಗಳನ್ನು ನೋಡುವುದಕ್ಕಲ್ಲದಿದ್ದರೆ ಬೀ ಜಾ ಪು ರ ಕ್ಕೆ ಜನಗಳೇಕೆ ಬರು ತ್ತಾರೆಂದು ಆವನು ಯೋಚಿಸಿರಬೇಕು. ಶಂಕರ ಉತ್ತರ ಕೊಡುವ ಮೊದಲೇ ಗಾಡಿಯುವ ಮುಂದಿನ ಮಾತನ್ನು ಹೇಳಿದ.

"ನೀವು ಹೇಳಿದರೆ ಮಧ್ಯಾಹ್ನ ನಾಲ್ಕು ಗಂಟೆಗೆ ಬರುತ್ತೇನೆ. ಗಾಡಿ ಯಲ್ಲಿ ಕರೆದುಕೊಂಡು ಹೋಗಿ ಎಲ್ಲವನ್ನೂ ತೋರಿಸಿಕೊಂಡು ಬಂದು ಬಿಡುತ್ತೇನೆ."

"ಹುಂ. ಬಾ ನೋಡೋಣ."

ಎರಡನೆಯ ಅಂತಸ್ತಿನಲ್ಲಿ ಆವರಿಗೆ ಒಳ್ಳೆಯ ಕೋಣೆಯೇ ಸಿಕ್ಕಿತ್ತು. ಬೇಕಾದ ಹಾಗೆ ಗಾಳಿ ಬೆಳಕುಗಳು ಬರುವಂತಿದ್ದಿತು.

ಗಾಡಿ ಇಳಿದವರು ಸ್ನಾನ ಮಾಡಿದರು. ಆ ಹೋಟಲು ಬರೀ ಲಾಡ್ಜಿಂಗ್ ಮಾತ್ರ. ಊಟ ಹೊರಗಿನಿಂದ ಬರಬೇಕು. ಹೋಟಲಿನ ಆಳು ಹೊರಗಿನಿಂದ ಊಟ ತಂದುಕೊಟ್ಟ.

ಇಬ್ಬರೂ ಊಟ ಮಾಡಿ ಮಲಗಿದರು.

ಮೂರು ಮೂರೂವರೆ ಗಂಟೆಯ ವೇಳೆಗೆ ಕನಕಳಿಗೂ ಶಂಕರನಿಗೂ ಎಚ್ಚರವಾಗಿ, ಕುಳಿತರು. ಚಹಾವನ್ನೋ ಕಾಫಿಯನ್ನೋ ತೆಗೆದುಕೊಳ್ಳ ಬೇಕೆಂದಿದ್ದರು. ಆಳನ್ನು ಕೂಗಿ ಹೇಳಬೇಕು. ಅವನು ಕಣ್ಣಿಗೆ ಬೀಳ ಲಿಲ್ಲ. ಎದ್ದು ಹೋಗಿ ಹೇಳಲು ಸ್ವಲ್ಪ ಸೋಮಾರಿತನ.

ಅಷ್ಟು ಹೊತ್ತಿಗೆ ಯಾರೋ ಒಬ್ಬ ಹುಡುಗ ಬಂದು "ಚಹಾ ತರಲೇ ಸಾಬ್" ಎಂದು ಕೇಳಿದ.

ಕೋಣೆಗಳಲ್ಲಿ ಮಲಗುವವರು ಎದ್ದರೇ ಎಂದು ಆ ಹುಡುಗ ಅಲೆಯು ತ್ತಿದ್ದಿರಬೇಕು.

ಶಂಕರ ಚಹಾಗೆ ಹೇಳಿದ. ಎರಡು ಕಪ್ಪುಗಳಲ್ಲಿ ಒಳ್ಳೆಯ ಬಿಸಿ ಯಾದ ಚಹಾ ಬಂದಿತು.

ಕುಡಿದು ಕಪ್ಪುಗಳನ್ನು ಕೆಳಗಿಡುತ್ತಿದ್ದ ಹಾಗೆ, ಬೆಳಗಾಗ ಕರೆತಂದು ಬಿಟ್ಟ ಗಾಡಿಯುವನು ಬಂದು ಸಲಾಂ ಮಾಡಿ ನಿಂತ.

ಹೋಗಿ ನೋಡಿಕೊಂಡು ಬರೋಣವೆಂದು ಶಂಕರನಿಗೆ ಒಂದು ಮನಸ್ಸು. ಇನ್ನೂ ಎಷ್ಟೋ ದಿನ ಇಲ್ಲಿಯೇ ಇರುತ್ತೇವೆಯಲ್ಲಾ ಈ ದಿನವೇ ಹೋಗಿ ನೋಡಬೇಕಾದ ಜರೂರು ಏನು ಎಂದು ಮತ್ತೊಂದು ಭಾವನೆ. ಅಂತೂ ಬರುವುದಕ್ಕೆ ಹೇಳಿದ. ನೋಡಿಕೊಂಡು ಬರಲು ನಿರ್ಧರಿಸಿದ.

ಗಾಡಿಯವನನ್ನು ಕೆಳಗಡೆ ಇರುವುದಕ್ಕೆ ಹೇಳಿ ಇಬ್ಬರೂ ಬಟ್ಟೆಗಳನ್ನು ಬದಲಾಯಿಸಿ, ಇಮಾರತ್ತುಗಳನ್ನು ನೋಡಿಕೊಂಡು ಬರಲು ಹೊರಟರು.

ಎರಡು ಮೂರು ಸ್ಮಾರಕಗಳನ್ನು ನೋಡಿದ ನಂತರ ಗೋಲ್‌ಗುಂಬಜ್ ಕಡೆ ಗಾಡೀ ತಿರುಗಿಸಿದ. ರೈಲ್ವೆ ಸ್ಟೇಷನ್ನಿನ ನೇರವಾದ ರಸ್ತೆಯಲ್ಲಿ ಗಾಡೀ ಹೋಗುತ್ತಿತ್ತು.

ಯಾರೋ "ಶಂಕರರಾವ್-ಶಂಕರರಾವ್" ಎಂದು ಕೂಗಿಕೊಂಡರು

ಬೀಜಾಪುರದಲ್ಲಿ ಅವನನ್ನು ಕೂಗುವವರು ಯಾರು?

ದೂರದಲ್ಲಿ ಒಬ್ಬಾತ ಸರಸರನೆ ಗಾಡಿಯ ಕಡೆ ನಡೆದು ಬರುತ್ತಿದ್ದ. ಶಂಕರನ ಮಾತಿನಂತೆ ಸಾಬಿ ಗಾಡಿಯನ್ನು ನಿಲ್ಲಿಸಿದ.

ಬರುತ್ತಿದ್ದಾತನನ್ನು ಶಂಕರ ನೋಡಿದ. ಕಪ್ಪಗೆ ಕುಳ್ಳಾದ ಆಳು. ಆದರೆ ಒಳ್ಳೆಯ ಕಾಂತಿಯುತವಾದ ಮುಖ. ಫಿನ್ಲೇ ಪಂಚೆಯನ್ನು ಕಚ್ಚೆ ಹಾಕಿ ಉಟ್ಟಿದ್ದಾನೆ. ಸಿಲ್ಕ್ ಷರಟು ಧರಿಸಿದ್ದಾನೆ. ಅದರ ಮೇಲೆ ಸರ್ಜು ಕೋಟು, ತಲೆಗೆ ಟೋಪಿ. ಕೈಯಲ್ಲಿ ಪ್ರಕಾಶಿಸುವ ಹರಳುಗಳಿಂದ ಕೂಡಿದ ಎರಡು ಉಂಗುರಗಳು.

ಯಾರೀ ವ್ಯಕ್ತಿ? ಎಷ್ಟು ನೆನೆಸಿಕೊಂಡರೂ ಶಂಕರನಿಗೆ ಅವನ ಪರಿಚಯ ಹತ್ತಲಿಲ್ಲ.

ಹತ್ತಿರಕ್ಕೆ ಬಂದ ವ್ಯಕ್ತಿ ಏಕವಚನದಲ್ಲಿಯೇ ಮಾತನಾಡಿಸಿದ.

"ಯಾವಾಗ ಬಂದೆಯಪ್ಪಾ?"

ಗಾಡಿಯಲ್ಲಿ ಕುಳಿತುಕೊಂಡೆ ಶಂಕರ ಪರಿಚಯವಿದ್ದವನಂತೆ ಹೇಳಿದ.

"ಈ ದಿನ ಬೆಳಗಾಂನಿಂದ ಬಂದೆ?"

"ಇತ್ತಕಡೆ ಎಲ್ಲಿ ಹೊರಟೆ ?"

"ಇಮಾರತ್ತುಗಳನ್ನು ನೋಡಿಕೊಂಡು ಬರುತ್ತಿದ್ದೇವೆ. ಗೋಲ್ ಬಜ್‌ನ ಕಡೆ ಹೋಗುತ್ತಿದ್ದೇವೆ".

ಅದೇನು, ನೋಡಿದಿರಾಯಿತು. ಬಾ. ನಮ್ಮ ಮನೆಗೆ ಹೋಗಿ ನಿದಾನವಾಗಿ ಹೋಗೋಣ".

ಇನ್ನೂ ಆವನಾರೆಂಬುದು ಶಂಕರನಿಗೆ ಗೊತ್ತು ಸಿಕ್ಕಲಿಲ್ಲ. ಎಷ್ಟು ಪ್ರಯತ್ನ ಮಾಡಿದರೂ "ಮನೆಗೆ ಹೋಗಿ ಹೋಗೋಣ ಬಾ" ಎನ್ನುವ ಈ ವ್ಯಕ್ತಿ ಯಾರೆಂದು ನೆನಪಿಗೆ ಬರುವುದಿಲ್ಲ.

"ಹೊರಟ್ಟಿದ್ದೇವೆ. ಹೋಗಿ ನೋಡಿಕೊಂಡು ಬಂದು ಬಿಡೋಣ ಎಂದು — — —"

"ಹಾಗಾದರೆ ಪುನಃ ನಿನ್ನನ್ನು ನೋಡುವುದು ಯಾವಾಗ ?"

"ಇನ್ನು ಎರಡು ಮೂರು ದಿನಗಳು ಇಲ್ಲಿಯೇ ಇರುತ್ತೇವೆ."

ಆ ಗೆಳೆಯನಿಗೆ ಏನು ತೋರಿತೋ ಏನೋ ?.

"ನಾನೂ ಗೋಲ್‌ಗುಂಬಜ್‌ಗೆ ಬರುತ್ತೇನೆ, ನಡಿ."

ಶಂಕರನ ಇಷ್ಟಾನಿಷ್ಟಗಳನ್ನು ಗಮನಿಸದೆಯೇ ಅವನು ಗಾಡಿಯ ಮುಂದುಗಡೆ ಬಂದು ಹತ್ತಿದ. ಸಾಬಿ ಅವನಿಗೆ ಕುಳಿತುಕೊಳ್ಳಲು ಸ್ಥಳ ಮಾಡಿಕೊಟ್ಟ.

ಗೋಲ್‌ಗುಂಬಜ್‌ನ ಮುಂದೆ ಗಾಡಿ ನಿಂತಿತ್ತು.

ತಾನು ಮೊದಲಿಳಿದು ಗಾಡಿಯುವನನ್ನು ಆತ "ಬಾಡಿಗೆ ಎಷ್ಟು ?" ಎಂದು ಕೇಳಿದ.

'ಇನ್ನೂ ತೋರಿಸುವುದಿವೆ, ಸಾರ್."

"ಆದೇನು ಬೇಡ, ಇಲ್ಲಿಯುವರೆವಿಗೆ ಎಷ್ಟು ಬಾಡಿಗೆ ಆಗಿದೆಯೋ ತೆಗೆದುಕೋ."

ಗಿರಾಕಿಯನ್ನು ಬಿಡಲು ಇಷ್ಟವಿಲ್ಲದೇ ಸಾಬಿ ಬಾಡಿಗೆ ಸ್ವಲ್ಪ ಹೆಚ್ಚಾಗಿಯೇ ಹೇಳಿದ. ಹೊಸಬ ಅವನನ್ನು ಜೈದು ಕಡಿಮೆ ತೆಗೆದು ಕೊಳ್ಳಬೇಕೆಂದ. ಸ್ವಲ್ಪಹೊತ್ತು ತಕರಾರು ನಡೆದು ಎರಡು ರೂಪಾಯಿ ಕೊಡುವುದೆಂದು ಗೊತ್ತಾಯಿತು. ಹೊಸಬನೇ ಕೊಡುವುದಕ್ಕೆ ಹೋದ. ಶಂಕರ ತಾನೇ ಕೊಡುವುದಾಗಿ ಹಟಮಾಡಲು ಸುಮ್ಮನಾದ.

ಗಾಡೀ ಇಳಿಯುವ ಜಾಗಕ್ಕೂ ಗೋಲ್‌ಗುಂಬಜ್‌ಗೂ ಎರಡೂ ಎರಡೂವರೆ ಫರ್ಲಾಂಗುಗಳ ದೂರ. ದೊಡ್ಡ ಮೈದಾನದ ನಡುವೆ ದೊಡ್ಡ

ಚೆಂಡು ಕುಳಿತಂತಿದೆ. ಗುಂಬಜ್‌ಗೆ ಸೇರಿದಂತಿರದಿದ್ದರೂ ನಡುವೆ ಅದಕ್ಕೆ ಹೋಗುವಂತಹ ಮಹಾದ್ವಾರ. ಎರಡು ಕಡೆಯೂ ಕೈಸಾಲೆಗಳು.

ಕೈಸಾಲೆಯ ಕಡೆ ಹೋಗುತ್ತ ಆ ಹೊಸ ಗೆಳೆಯ ಕೇಳಿದ.

"ನಿಮಗೆ ನನ್ನ ಗುರುತು ಹತ್ತಲಿಲ್ಲ, ಅಲ್ಲವೇ ?"

ಇದುವರೆವಿಗೂ ಗುರುತಿರುವಂತೆಯೇ ಅಭಿನಯಿಸುತ್ತ ಬಂದಿದ್ದ. ಪ್ರಶ್ನೆ ಮೊದಲಿಗೆ ಬಂದಿತ್ತು. ಗೊತ್ತಿದೆ ಅಂದರೆ "ನಾನಾರು ಹೇಳು" ಎಂದು ಒಗಟು ಕೇಳುವಂತೆ ಕೇಳುತ್ತಾನೆ.

"ಕ್ಷಮಿಸಬೇಕು. ಎಷ್ಟು ಜ್ಞಾಪಿಸಿಕೊಂಡರೂ ನಿಮ್ಮ ನೆನಪು ಬರಲಿಲ್ಲ."

"ಬಡವರ ಜ್ಞಾಪಕ ಎಲ್ಲಿಂದ ಬರುತ್ತದೆ ?"

ಬಾಯಲ್ಲೇನೋ ಬಡವ ಎಂದು ಹೇಳಿದರೂ ನೋಡಿದರೆ ಶ್ರೀಮಂತ ನಂತೆಯೇ ಕಂಡು ಬರುತ್ತಿದ್ದ.

"ಹಾಗಲ್ಲ. ಎಷ್ಟೋ ಜ್ಞಾಪಿಸಿ ಕೊಳ್ಳುತ್ತಿದ್ದೇನೆ. ಅದರೂ...."

"ಜ್ಞಾಪಕ ಬರಲಿಲ್ಲವೇನಯ್ಯ ! ಸೆಂಟ್ ಜೋಸೆಫ್ ಕಾಲೇಜಿನಲ್ಲಿ ನಾವು ಆರ್ಟ್ಸ್‌ಗೆ ಓದುತ್ತಿದ್ದುದು ಮರೆತು ಹೋಯಿತೇ? ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟು ಸಿಕ್ಕದೇ ಆರ್ಟ್ಸ್‌ಗೆ ಓದಲು ಬಂದಿದ್ದೆ. ಮು ರಿ ಗೆ ಪ್ಪ. ಇನ್ನೂ ಜ್ಞಾಪಕ ಬರಲಿಲ್ಲವೇ ?"

"ಆಹಾ ! ಈಗ ಜ್ಞಾಪಕ ಬಂದಿತು. ನೀನು ಫಸ್ಟ್ ಟರ್ಮ್‌ನೊಳಗೇ ಕಾಲೇಜು ಬಿಟ್ಟು ಹೊರಟು ಹೋದೆಯಲ್ಲವೇ ?"

"ಕಡೆಗೂ ಹಳೆಯ ಸ್ನೇಹಿತನನ್ನು ಜ್ಞಾಪಕಮಾಡಿ ಕೊಂಡೆಯಲ್ಲಾ"

ಯಾಕೆ ಮುರಿಗೆಪ್ಪನ ಗುರುತು ಮರೆತು ಹೋಯಿತು ? ಈ ಸಣ್ಣ ವಯಸ್ಸಿನಲ್ಲಿ ಇಷ್ಟು ಮರವೇ ? ಮರವಿಗೆ ಕಾರಣ ಇತ್ತು.

"ನೀನು ಬಹಳ ಬದಲಾವಣೆಯಾಗಿದ್ದೀ, ಮುರಿಗೆಪ್ಪ ಪ್ಯಾಂಟ್ ಹಾಕಿ, ಬುಷ್ ಕೋಟು ಹಾಕುತ್ತಿದ್ದವನು ಪಂಚೆ, ಟೋಪಿ ಧರಿಸಿದರೆ ನನಗೆ ಹೇಗೆ ಗುರುತು ಸಿಕ್ಕಬೇಕು?"

ಮೂವರೂ ಮಹಾದ್ವಾರದೊಳಗೆ ಪ್ರವೇಶಿಸಿದರು. ಎರಡು ಕಡೆಯೂ

ದೊಡ್ಡ ಕೈ ಸಾಲೆಗಳು. ಅಕ್ಷರಗಳು ಕೆತ್ತಿದ್ದ ಅನೇಕ ಶಿಲಾಫಲಕಗಳನ್ನೂ ಯಾವು ಯಾವುದೋ ಶಿಲಾ ವಿಗ್ರಹಗಳನ್ನು ಇಟ್ಟಿದ್ದಾರೆ.

ಎಡಗಡೆ ದೊಡ್ಡ ಶಿಲಾ ಮೂರ್ತಿ ಕುಳಿತಿದೆ. ಮನುಷ್ಯಾಕಾರಕ್ಕಿಂತಲೂ ದೊಡ್ಡ ಆಕಾರದ ಕರಿಯ ಕಲ್ಲಿನ ಮೂರ್ತಿ ಕುಳಿತಿದೆ. ಹೋಗುತ್ತಿದ್ದ ಮೂರು ಮಂದಿ ನೋಡಿದರೋ ಇಲ್ಲವೋ ? ನೋಡಿದಿರೂ ಗಮನಿಸಿದರೋ ಇಲ್ಲವೋ ?.

ಆದರೆ–ಆದರೆ ಏಳು ತಲೆ ಸರ್ಪದ ಹೆಡೆಯ ನೆರಳಿನಲ್ಲಿ ನಿರಾಳವಾಗಿ ಕುಳಿತಿದ್ದ ಜಿನ ಮೂರ್ತಿಯು ಹೋಗುತ್ತಿದ್ದ ಈ ಮೂರು ಮಂದಿಯನ್ನೂ ನೋಡುತ್ತಿರುವಂತಿತ್ತು.

ಹೀಗೆ ಎಷ್ಟು ಮಂದಿಯನ್ನು ಆ ಮೂರ್ತಿಯು ನೋಡುತ್ತೋ? ಪ್ರವೇಶಿಸಿದಾಗ ಕೇಳಿದ ಪ್ರಶ್ನೆಗೆ ಮಹಾದ್ವಾರವನ್ನು ದಾಟುವಾಗ ಮುರಿಗೆಪ್ಪ ಉತ್ತರ ಹೇಳಿದ.

"ಆ ಕಾಲ ಬೇರೆ! ಈ ಕಾಲವೇ ಬೇರೆ! ವ್ಯಾಪಾರ ಮಾಡುವಾಗಲೂ ಸ್ಟೂಡೆಂಟ್ ಲೈಫ್‌ನಲ್ಲಿ ಜೋಕೀ ಮಾಡಿದಂತೆ ಮಾಡಲಾಗುತ್ತದೆಯೇ?"

"ಇಲ್ಲಿ ವ್ಯಾಪಾರ ಮಾಡುತ್ತಿದ್ದೀಯಾ? ನೀನು ದಾವಣಗೆರೆಯವನಲ್ಲವೇ?"

"ಅರಳೀ ವ್ಯಾಪಾರ ಮಾಡುತ್ತಿದ್ದೇನೆ. ಹೇಳುತ್ತೇನೆ-ನಿದಾನವಾಗಿ ಹೇಳುತ್ತೇನೆ, ಬಾ. ಈಗ ಗುಂಬಜ್ ನೋಡೋಣ."

ದೊಡ್ಡ ಚಚ್ಚೌಕವಾದ ಹಜಾರ. ಮೇಲೆ ಗುಂಡು ಗೋಪುರ. ಗೋಪುರದ ಸುತ್ತಲೂ ಕೈಸಾಲೆ.

ಹಜಾರದ ನಡುವೆ ಕಾಲುಮಣೆಯಂತಹ ಎತ್ತರ ಪ್ರದೇಶ. ಸುತ್ತಲೂ ಕಟಕಟೆ, ಮಧ್ಯದಲ್ಲಿ ಗೋರಿಗಳು.

ಮೇಲಿನ ಕೈಸಾಲೆಗೆ ಹತ್ತಿ ಹೋಗಲು ನಾಲ್ಕು ಕಡೆಯೂ ಮೆಟ್ಟಿಲುಗಳು. ಮೆಟ್ಟಿಲುಗಳನ್ನು ಹತ್ತಿ ಹೋಗುವಾಗ ಆಯಾಸವಾದರೆ ವಿಶ್ರಮಿಸಿಕೊಳ್ಳಲು ಏಳು ವಿಮಾನಗಳು. ಕುಳಿತುಕೊಳ್ಳಲು ಅಲ್ಲಿ ಸುಖಾಸನವಿದೆ. ನೋಡಿದರೆ ಊರೆಲ್ಲವೂ ಕಾಣುತ್ತದೆ.

ನಾಲ್ಕನೆಯ ವಿಮಾನಕ್ಕೆ ಬಂದಾಗ ಕನಕಳ ಕಾಲು ಸೋತು, ಅವಳ

ಅಲ್ಲಿದ್ದ ಆಸನದ ಮೇಲೆ ಕುಳಿತಳು. ಅವಳ ಪಕ್ಕದಲ್ಲಿ ಶಂಕರನೂ, ಶಂಕರನ ಮಗ್ಗುಲಲ್ಲಿ ಮುರಿಗೆಪ್ಪನೂ ಕುಳಿತುಕೊಂಡರು.

ಅಲ್ಲಿ ಕುಳಿತುಕೊಂಡಾಗ ಶಂಕರನಿಗೆ ಮುರಿಗೆಪ್ಪನ ಮೇಲೆ ಅಸಮಾಧಾನವಾಯಿತು. ಈ ಹಾಳು ಮುರಿಗೆಪ್ಪ ಇಲ್ಲದಿದ್ದರೆ ತಾನೂ, ಕನಕಳೂ ಇಬ್ಬರೇ! ಇಬ್ಬರೇ ಇಲ್ಲಿ ಕುಳಿತಿದ್ದರೆ ಎಷ್ಟು ಆನಂದವಾಗಿರುತ್ತಿತ್ತು.

ಅವನು ಯೋಚಿಸುತ್ತಿದ್ದ ಹಾಗೆಯೇ ಮುರಿಗೆಪ್ಪ ಎದ್ದು ನಿಂತು ಹೇಳಿದ.

"ಏಳಿ, ಹೋಗೋಣ. ಬಾಗಿಲುಗಳು ಹಾಕುವ ಹೊತ್ತಾಗುತ್ತದೆ."

ಶಂಕರ ಯಂತ್ರದಂತೆ ಎದ್ದು ಮುರಿಗೆಪ್ಪನನ್ನು ಅನುಸರಿಸಿದ. ಕನಕಳೂ ಅವರ ಹಿಂದೆ ಹೋದಳು.

ಮೇಲಿನ ಕೈಸಾಲೆಯಲ್ಲಿ ಗುಂಬಜ್‌ನ ಆಳು ನೆಲದ ಮೇಲೆ ಬಿದ್ದಿದ್ದ ಕಾಗದ, ಬೀಡೀ ಸಿಗರೇಟು ತುಂಡುಗಳು, ಉರಿದ ಬೆಂಕೀಕಡ್ಡಿಗಳು ಆರಿಸುತ್ತಿದ್ದ.

ಪ್ರೇಕ್ಷಕರು ಕಾಣಿಸಿದೊಡನೆಯೇ ಹತ್ತಿರ ಬಂದು ಎದುರುಗೊಂಡ. ಕೆಳಗೆ ಮಲಗಿರುವವರ ವಿಷಯ ಗೊತ್ತಿದ್ದಷ್ಟು ಹೇಳಿದ. ಆದಿಲ್‌ಷಹನ ವೈಭವವನ್ನು ತಿಳಿಸಿದ.

ಅನಂತರ ಚಪ್ಪಾಳೆ ಹೊಡೆದ. ಅನೇಕ ಬಾರಿ ಚಪ್ಪಾಳೆಯ ಪ್ರತಿಧ್ವನಿಯು ಕೇಳಿಸಿತು. ಎದುರುಗಡೆ ಹೋಗಿ ನಿಂತು ಮೆಲ್ಲನೆ ಮಾತನಾಡಿ, "ನಾನು ಮಾತನಾಡುವುದು ಕೇಳುತ್ತವೆಯೇ?" ಎಂದ. ಕೇಳಿಸಿತು. "ನೋಡಿ. ಕಾಗದ ಹರಿಯುತ್ತೇನೆ. ಅದರ ಶಬ್ದ ಕೇಳಿ" ಎಂದ. ಕೇಳಿದರು. "ಕಡ್ಡೀ ಮುರಿದ ಶಬ್ದ ಕೇಳಿಸುವುದೇ?" ಎಂದ.ಕೇಳಿ ಬಂದಿತು.

ಮುರಿಗೆಪ್ಪ ಎಷ್ಟೋ ಬಾರಿ ಗುಂಬಜ್ ನೋಡಿದ್ದ. ಅವನಿಗದರ ಮೇಲೆ ಆಸಕ್ತಿ ಇರಲಿಲ್ಲ. ಹೊರಗಡೆ ವಿಮಾನದಲ್ಲಿ ಹೋಗಿ ನಿಂತು, ಊರ ಕಡೆ ನೋಡುತ್ತಾ ಬೀಡೀ ಸೇದ ತೊಡಗಿದ. ಆಳು ಕಸ ಆರಿಸುವ ತನ್ನ ಕೆಲಸದಲ್ಲಿ ಉದ್ಯುಕ್ತನಾದ.

ಕನಕ ಶಂಕರರು ಎಷ್ಟೋ ಆಸಕ್ತಿಯಿಂದ ಅದನ್ನು ಪರಿಶೀಲಿಸಲಾರಭಿ

ಸಿದರು. ಒಬ್ಬೊಬ್ಬರು ಒಂದೊಂದು ಕಡೆ ನಿಂತು ಮಾತನಾಡಿದರು. ಕಾಗದ ಹರಿದರು. ಕಡ್ಡೀ ಮುರಿದರು.

ಎದುರಿಗೆ ನಿಂತಿದ್ದ ಕನಕ ನಕ್ಕಂತೆ ಶಂಕರನಿಗೆ ಕೇಳಿಸಿತು.

"ಯಾಕೆ ನಗುತ್ತೀಯೋ?"

"ನಗಲೂ ಬಾರದೇ?"

"ನಗಬಹುದು. ಆದರೆ ನಗುವುದಕ್ಕೆ ಒಂದು ಕಾರಣ ಇರಬೇಕಲ್ಲವೇ?

"ಇದೆ— —"

"ಏನದು?"

"ಬಹಳ ಗುಟ್ಟು"

"ಗುಟ್ಟಾಗಿಯೋ ಹೇಳು. ಕೇಳೋಣ."

"ಹೊರಗಡೆ ಆ ವಿಮಾನದಲ್ಲಿ ನಿಂತು ವಿಶಾಲವಾದ ಮೈದಾನವನ್ನು ನೋಡಿದಾಗ ಏನೆನ್ನಿಸಿತು, ಗೊತ್ತೇ?''

"ಏನೆನ್ನಿಸಿತು?"

"ಒಳ್ಳೆಯ ಬೆಳದಿಂಗಳಿನ ರಾತ್ರಿಯಲ್ಲಿ ಹುಲ್ಲಿನ ಮೇಲೆ————"

"ಥೂ, ಸುಮ್ಮನಿರು. ನಾಚಿಕೆಯಾಗುವುದಿಲ್ಲವೇ?"

"ನಾಚಿಕೆ ಯಾಕೆ?"

"ಹೋಗಲಿ, ಸುಮ್ಮನಿರು. ಮುರಿಗೆಪ್ಪ ಎಲ್ಲಿಯಾದರೂ ಕೇಳಿಸಿಕೊಂಡಾನು."

"ಗುಟ್ಟಾಗಿ ಯಾರಿಗೂ ಕೇಳದಂತೆ ಮಾತನಾಡುತ್ತಿದ್ದೇವಲ್ಲಾ."

"ಒಳ್ಳೇ ಗುಟ್ಟು. ಸುಮ್ಮನಿರು.'.

ಗುಟ್ಟು ಮಾತನಾಡಿದ ಕನಕ ನಗಾಡಿಕೊಂಡು ಹತ್ತಿರ ಬರತೊಡಗಿದಳು.

ಆಗ ಶಂಕರನಿಗೆನ್ನಿಸಿತು. ಕನಕಳ ಬಯಕೆಗಳು ಸತ್ತುಹೋಗಿಲ್ಲ. ಕಾಲ, ವಾತಾವರಣಗಳಲ್ಲಿ ಅವು ಚಿಗುರುತ್ತವೆ. ಆ ಭಾವನೆ ಅವನ ಮನಸ್ಸಿಗೆಷ್ಟೋ ಸಂತೋಷವನ್ನುಂಟುಮಾಡಿತು.

ಇವರು ನೋಡಿ ಮುಗಿಸುವುದನ್ನೇ ಮುರಿಗೆಪ್ಪ ಕಾಯುತ್ತಿದ್ದನೆಂದು ಕಂಡುಬರುತ್ತದೆ. ಕನಕ ಬಂದು ಸೇರುವ ವೇಳೆಗೆ ಅವನೂ ಸಮಿಾಪಿಸಿದ.

ಮೆಟ್ಟಿಲುಗಳನ್ನು ಇಳಿದನಂತರ ಗುಂಬಜ್‌ನ ಆಳು "ಬುಡದಲ್ಲಿರುವ ಗೋರಿಗಳನ್ನು ನೋಡುತ್ತೀರಾ?" ಎಂದ.

ಮುರಿಗೆಪ್ಪನಿಗೆ ಇಷ್ಟವಿರಲಿಲ್ಲ. ಆದರೆ ಆಳಿನೊಡನೆ ನೋಡಲು ಕನಕ ಶಂಕರರು ಹೋದರು.

ಮೊದಲು ಅವರು ನೋಡಿದ ಹಜಾರದ ಕೆಳಗೆ ದೊಡ್ಡ ಹಜಾರ. ವಿಶಾಲ ಪ್ರದೇಶವಾದರೂ ಗುಹೆಯೊಳಗೆ ಹೋದಂತೆ, ಗುಹೆಯೊಳಗಿದ್ದಂತೆ ಇದ್ದಿತು. ಅಲ್ಲಿ ನಡುವೆ ಗೋರಿಗಳು.

ಆಳು ಗೋರಿಗಳು ಯಾರಯಾರದೆಂದು ಹೇಳ ತೊಡಗಿದ. ಎತ್ತರವಾಗಿರುವ ದೊಡ್ಡ ಗೋರಿ ಬೀಜಾಪುರದ ಮೊದಲನೆಯ ಸುಲ್ತಾನ್ ಆದಿಲ್ ಷಹನದು. ಪಕ್ಕದಲ್ಲಿ ರಂಭಾವತಿ ಉಳಿದವು ಮಿಕ್ಕವರದು. ಮಿಕ್ಕವರದು ಎಂದರೆ ಸುಲ್ತಾನನ ಹೆಂಡತಿ, ಮಕ್ಕಳದು.

ರಂಭವತಿ ಎಂಬುದು ಹಿಂದೂ ಹೆಸರಿನಂತಿತ್ತು. ಹಿಂದೂ ಹೆಂಗಸೊಬ್ಬಳು ಸುಲ್ತಾನನ ಹೇರೆಂಲ್ಲಿದ್ದಿರಬಹುದು. ಆದರೆ ಸುಲ್ತಾನನ ದೇಹದ ಪಕ್ಕದಲ್ಲಿ ಅವಳ ದೇಹವನ್ನು ಸುಲ್ತಾನನ ಮಕ್ಕಳು ಇರಿಸಿದರೆ?.

"ರಂಭಾವತಿ ರಾಣಿಯೇ ?"

"ಅಲ್ಲ ಸುಲ್ತಾನರ ರಾಣಿಯವರ ಗೋರಿ ಇದು. ಆದರೆ ರಂಭಾವತಿ ರಾಣಿಗಿಂತಲೂ ದೊಡ್ಡ ರಾಣಿ. ಅವರಿಂದಲೇ ಆಕೆಯ ಗೋರಿ ಸುಲ್ತಾನರ ಗೋರಿಯ ಪಕ್ಕದಲ್ಲಿದೆ. ಆಕೆ ಲಂಕಾ ದ್ವೀಪದವಳು."

ಆದಿಲ್‌ಷಹ ಎಂತಹ ಪುಣ್ಯಾತ್ಮ. ಬದುಕಿದ್ದಾಗ ಮನ ಒಪ್ಪಿದ ಹೆಣ್ಣಿನೊಡನೆ ಬಾಳಿದ. ಸತ್ತ ಮೇಲೂ ಅವಳ ಮಗುಲಲ್ಲಿ ಮಲಗಿದ್ದಾನೆ. ಶಂಕರ ಅಂದುಕೊಂಡ. ತನಗಂತಹ ಭಾಗ್ಯವಿರಬಾರದೆ ? ಕನಕಳೊಡನೆ ಬದುಕಲು ಎಷ್ಟು ತೊಡಕುಗಳು. ಈ ಪ್ರಪಂಚದ ಜನವೇ ಹೀಗೆ! ಬಹಳ ಕೆಟ್ಟವರು. ಗುಂಬಜ್‌ನ ಆಳೂ ಸಹ ಹೇಗೆ ಮಾತನಾಡುತ್ತಾನೆ ಸುಲ್ತಾನ್ ಮದುವೆ ಮಾಡಿಕೊಂಡವಳ ವಿಷಯ ಬಹುವಚನದಲ್ಲಿ ಹೇಳುತ್ತಾನೆ. ರಂಭಾವತಿಯನ್ನು ಏಕ ವಚನದಲ್ಲಿ ಸಂಭೋಧಿಸುತ್ತಾನೆ.?

ಸುಲ್ತಾನನ ಸಹವಾಸ ಏರ್ಪಟ್ಟನಂತರ ರಂಭಾವತಿ ಮುಸ್ಲಿಮಳಾಗಲಿಲ್ಲವೇಕೆ? ಆದಿಲ್‌ಷಹಾ ಬಲಾತ್ಕಾರ ಮಾಡಲಿಲ್ಲವೇಕೆ? ಅವಳಿಗೆ ಇಷ್ಟವಿಲ್ಲ

ದಿರಬೇಕು. ಮುಸ್ಲಿಂ ಆಗಲು ಇಷ್ಟವಿಲ್ಲದ ಹೆಣ್ಣಿನೊಡನೆ ಬದುಕಬೇಕಾದರೆ, ಸತ್ತ ನಂತರವೂ ಅವಳನ್ನು ಗೌರವಿಸಿದ ಮೇಲೆ ಸುಲ್ತಾನ ಅವಳನ್ನೆಷ್ಟು ಆಕರ್ಷಿಸಿರಬೇಕು.

ರಂಭಾವತಿಯಲ್ಲಿ ಅಂತಹ ಆಕರ್ಷಣೆ ಏನಿತ್ತು ? ಸುಲ್ತಾನನನ್ನು ಆಕರ್ಷಿಸಿರಬೇಕಾದರೆ ಅವಳು ವಾಸ್ತವವಾದ ರಂಭೆಯೇ ಆಗಿರಬೇಕು ?

ಅವಳ ಪಠವನ್ನಾದರೂ ನೋಡುವುದು ಸಾಧ್ಯವಾದರೆ ?

ಹೊರಗೆ ಬಂದು, ಆಳಿಗೆ ಭಕ್ಷೀಸ್ ಕೊಟ್ಟು ಶಂಕರ ಕನಕಳೊಡನೆ ಮುರಿಗೆಪ್ಪನನ್ನು ಅನುಸರಿಸಿದ.

ಪುನಃ ಮಹಾದ್ವಾರದ ಕಡೆಗೆ ಹೋದರು. ಕೈಸಾಲೆಯಿಂದ ಜನ ಇಳಿದು ಬರುತ್ತಿದ್ದರು. ಅವರು ಕೈಸಾಲೆಯಲ್ಲಿರುವ ಶಿಲಾಫಲಕ, ಶಿಲಾವಿಗ್ರಹಗಳನ್ನು ನೋಡಿಕೊಂಡು ಬರುತ್ತಿದ್ದವರಲ್ಲ. ಮತ್ತೆಲ್ಲಿಂದಲೋ ಬರುತ್ತಿದ್ದಾರೆ.

ಶಂಕರ ಮುರಿಗೆಪ್ಪನನ್ನು ಕೇಳಿದ.

"ಅವರುಗಳೆಲ್ಲಿಂದ ಬರುತ್ತಿದ್ದಾರೆ."

"ಮಹಡಿಯ ಮೇಲೆ ಮ್ಯೂಸಿಯಂ ಇದೆ. ನೋಡಿಕೊಂಡು ಹಿಂತಿರುಗುತ್ತಿದ್ದಾರೆ ?"

"ಅಲ್ಲೇನಿದೆಯೋ ?"

ಇನ್ನು ಶಂಕರ ಅದನ್ನು ನೋಡುವುದಕ್ಕೇ ಹೊರಡುತ್ತಾನೆಯೋ ? ಅದರಲ್ಲಿ ಆಸಕ್ತಿಯುಂಟಾಗದಂತೆ ಎಚ್ಚರಿಕೆಯಿಂದ ಹೇಳಿದ.

"ಏನಿದೆ ? ಕತ್ತೀ, ಗುರಾಣಿ, ಕಬ್ಬಿಣದ ಅಂಗಿಗಳಿವೆ. ಇತರ ಕಡೆ ಇರುವಂತಹುದೇ ! ಬೀಜಾಪುರದ ಸುಲ್ತಾನರ ಕೆಲವು ಪಠಗಳೂ ಅವರು ಉಪಯೋಗಿಸುತ್ತಿದ್ದ ಪಾತ್ರೆ ಪಡಗಗಳೂ ಇವೆ, ಅಷ್ಟೇ."

ಬೀಜಾಪುರದ ಸುಸುಲ್ತಾನರ ಪಠಗಳಿವೆ. ಎಲ್ಲಾದರೂ ಒಂದು ಕಡೆ ರಂಭಾವತಿಯ್ದು ; ಪಠವೂ ಇದ್ದುಬಿಟ್ಟರೆ ! ಮುರಿಗೆಪ್ಪ ಎಷ್ಟೇ ಉತ್ಸಹ ರಹಿತವಾಗಿ ಹೇಳಿದರೂ ಶಂಕರನ ಆಸಕ್ತಿ ಕೆರಳಿತು.

"ನಾವೂ ನೋಡಿಕೊಂಡು ಹೋಗೋಣ."

"ಇನ್ನೊಂದು ಸಾರಿ ಬರೋಣ, ಹೊತ್ತಾಗಿವೆ."

"ಇಲ್ಲ. ಇಷ್ಟು ದೂರ ಬಂದಿದ್ದೇವೆ. ಇನ್ನು ಹತ್ತು ನಿಮಿಷ. ಬೇಗ ಮುಗಿಸಿ ಬಿಡೋಣ".

ಮುರಿಗೆಪ್ಪನಿಗೆ ಸ್ನೇಹಿತನನ್ನು ಬಿಟ್ಟು ಹೋಗುವುದು ಇಷ್ಟ ವಿರಲಿಲ್ಲ ವೆಂದು ಕಾಣುತ್ತದೆ. ಬಹಳ ದಿನಗಳ ಮೇಲೆ ಸಿಕ್ಕಿದವನು ಮತ್ತೆ ಅಡ್ಡಿ ಹೇಳಲಿಲ್ಲ.

ಮಹಡಿಯ ಮೇಲೆ ಮ್ಯೂಸಿಯಂನಲ್ಲಿ ಕೂತುಹಲ ಜನಕವಾದ ಎಷ್ಟೋ ಸಾಮಗ್ರಿಗಳಿದ್ದವು. ಕನಕ ಅದೆಲ್ಲವನ್ನೂ ಈಕ್ಷಿಸುತ್ತಿದ್ದಳು. ಅವುಗಳು ಏನೇ ನೆಂಬುದನ್ನು ಮುರಿಗೆಪ್ಪ ಓದಿ ತನಗೆ ತಿಳಿದಷ್ಟು ಹೇಳಿಕೊಂಡು ಬರುತ್ತಿದ್ದ.

ಶಂಕರ ಪಠಗಳಲ್ಲಿ ರಂಭಾವತಿಯನ್ನು ಹುಡುಕಲು ತೊಡಗಿದ.

ಅತ್ತ ಕಡೆ ಗೋಡೆಯ ಮೇಲೆ ಎರಡು ಮೂರು ಭಂಗಿಗಳಲ್ಲಿ ರಂಭಾವ ತಿಯ ಚಿತ್ರ ಪಠವಿತ್ತು.

ಎಂತಹ ರೂಪವತಿಯವಳು.

ಅಂತಹ ಹೆಣ್ಣಿಗಾಗಿ ಲಂಕಾ ದ್ವೀಪಕ್ಕಲ್ಲ, ಸಪ್ತ ದ್ವೀಪಕ್ಕೆ ಬೇಕಾದರೂ ಹೋಗಿಬರಬಹುದು. ರಾಜ್ಯವನ್ನೇ ಬೇಕಾದರೂ ತೃಣೀಕರಿಸಬಹುದಾ ದಂತಹ ರಮಣಿಯನ್ನು ಆದಿಲ್‌ಷಹಾ ಅಷ್ಟೊಂದು ಪ್ರೀತಿಸಿದ್ದರಲ್ಲಿ ಶಂಕ ರಪ್ಪನಿಗೆ ಅಚ್ಚರಿ ಏನೂ ಕಂಡು ಬರಲಿಲ್ಲ.

# ೧೫

ಮುರಿಗೆಪ್ಪ ಬಿಡವೇ ಬಲಾತ್ಕಾರಮಾಡಿ ಕನಕ-ಶಂಕರರನ್ನು ತನ್ನ ಮನೆಗೆ ಕ ರೆ ದು ಕೊ ೦ ಡು ಹೋದ. ರೈಲ್ವೆಸ್ಟೇಷನ್ ರಸ್ತೆಯಲ್ಲಿ ದೊಡ್ಡ ಕಾಂಪೌಂಡಿನಲ್ಲಿ ದೊಡ್ಡ ಮನೆಯವನದು.

ಗೋಲ್‌ಗುಂಬಜ್‌ನಿಂದ ನಡೆದುಕೊಂಡೇ ಬಂದರು. ಮನೆಗೆ ಬಂದು ಸೇರುವ ವೇಳೆಗೆ ಏಳು ಗಂಟೆಯಾಗಿದ್ದಿತು. ಊಟಮಾಡಿ ಕೊಂಡೇ ಹೋಗಬೇಕೆಂದು ಹಠಮಾಡಿದ. ಮೊದಲೇನೋ ಶಂಕರ ಬೇಡವೆಂದ. ಹೋಟಲಿನಲ್ಲಿ ಊಟ ಮಾಡುವವರು ಎಲ್ಲಿ ಮಾಡಿದರೇನು ? ಅನಂತರ ಒಪ್ಪಿಕೊಂಡ.

ಕೆಲಸದವಳನ್ನು ಕರೆದು ಮುರಿಗೆಪ್ಪ ಹೇಳಿದ.

"ಈ ದಿನ ಭಾಕರಿ ಬೇಡ. ಅನ್ನವನ್ನೇ ಮಾಡಿಬಿಡು."

ಯಾವ ವಿಧವಾಗಿಯೂ ಅವರ ಮನೆಯ ಏರ್ಪಾಟಿಗೆ ಅಡಚಣೆಯನ್ನು ಉಂಟು ಮಾಡುವುದು ಶಂಕರನಿಗೆ ಇಷ್ಟವಿರಲಿಲ್ಲ.

"ನಮಗೆ ಯಾವುದಾದರೂ ಆಗುತ್ತದೆ"

"ಬೇಡಪ್ಪ. ನೀವು ಮೈಸೂರು ಜನ. ಭಾಕರಿ ತಿಂದರೆ ನಿಮಗೆ ಸರಿ ಹೋಗುವುದಿಲ್ಲ. ಅನ್ನವನ್ನೇ ಮಾಡಿಸಿಬಿಡುತ್ತೇನೆ."

"ನೀನೇನು ಎಲ್ಲಿಯವನಂತೆಯೋ ಮಾತನಾಡುತ್ತೀಯೆ ? ದಾವಣಗೆರೆಯವನು ನೀನು. ಮೈಸೂರಿಗೇ ಸೇರಿದವನಲ್ಲವೇ ?"

"ಇರಬಹುದು, ಆದರೂ ನಾವು ದಾವಣಗೆರೆಯವರು ಹುಬ್ಬಳ್ಳಿಯ ಜನದಂತೆಯೇ ?"

ಅದೇನಾದರೂ ಇರಲಿ. ಅನ್ನ ಬೇಡ. ಮಾಮೂಲಿನಂತೆ ಭಾಕರಿಯನ್ನೇ ಮಾಡಿಸಿಬಿಡು. ನಾವು ಅದನ್ನೆಂದೂ ತಿಂದಿಲ್ಲ. ಈ ದಿನ ಅದೇ ಊಟ ಮಾಡಿ ನೋಡುತ್ತೇವೆ."

ಭಾಕರಿಯನ್ನೇ ಮಾಡಹೇಳಲು ಮುರಿಗೆಪ್ಪ ಒಳಗೆ ಹೋದ.

ಆಗ ಒಬ್ಬಳೇ ಇದ್ದ ಕನಕಳಿಗೆ ಶಂಕರ ಹೇಳಿದ.

"ನಿನಗೆ ಭಾಕರಿ ಆಗುತ್ತದೋ?"

"ಯಾವುದು ಬೇಕಾದರೂ ಆಗುತ್ತದೆ.''

"ಹಾಗಾದರೆ ನೀನು ಎಂದೂ ಭಾಕರಿ ತಿಂದವಳಲ್ಲವೆಂದು ನಾನು ಹೇಳಿದ್ದು ಸುಳ್ಳಾಯಿತು."

ಕನಕ ನಕ್ಕಳು. ಅನಂತರ ಅಂದಳು.

''ಇದೇನು, ನಿಮ್ಮ ಸ್ನೇಹಿತರ ಮನೆಯಲ್ಲಿ ಹೆಂಗಸರು ಮಕ್ಕಳಾರೂ ಇರುವಂತೆ ಕಂಡು ಬರುವುದಿಲ್ಲವಲ್ಲ."

ಮುರಿಗೆಪ್ಪ ವಾಪ್ಸು ಬಂದನಂತರ ಶಂಕರ ಅವನ ಯೋಗ 'ಕ್ಷೇಮ ವಿಚಾರಿಸಿದ. ದಾವಣಗೆರೆಯಲ್ಲಿರ ಬೇಕಾದವ ಬೀಜಾಪುರಕ್ಕೆ ಬಂದುದು ಹೇಗೆಂದು ವಿಚಾರಿಸಿದ.

ಅವನುಹಳೆಯ ಕತೆ ಎಲ್ಲವನ್ನೂ ಹೇಳಿದ.

ಮುರಿಗೆಪ್ಪ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟು ಸಿಕ್ಕದೇ ಬೆಂಗಳೂರಿನಲ್ಲಿ ಬಿ. ಎಗೆ ಓದುತ್ತಿದ್ದನಷ್ಟೆ. ಆಗಲ್ರೇ ಅವನ ಮದುವೆ ಗೊತ್ತಾಯಿತು. ಬಾಗಲಕೋಟೆಯ ಶ್ರೀಮಂತರೊಬ್ಬರು ವರದಕ್ಷಿಣೆ ಸಹಿತ ಹೆಣ್ಣು ಕೊಡುವುದಾಗಿ ಹೇಳಿದರು. ಸಂಬಂಧ ಕುದುರಿತು. ಮದುವೆಗಾಗಿ ಬಂದವನು ಓದಲು ವಾಪ್ಸು ಹೋಗಲೇ ಇಲ್ಲ.

ಡಾಕ್ಟರಿಗೋ, ಇಂಜನೀಯರಿಗೋ ಓದುತ್ತಿದ್ದರೆ ಸರಿ. ಬರೀ ಬಿ.ಎ.ಗೆ ಯಾಕೆ ಓದಬೇಕೆಂದು ಅವನ ಮಾವ ಅಭಿಪ್ರಾಯ ಪಟ್ಟರು. ಓದುವುದ

ಕ್ಕಿಂತ ವ್ಯಾಪಾರ ಮಾಡಿ ಕೈತುಂಬಾ ಸಂಪಾದನೆ ಮಾಡುವುದು ಒಳ್ಳೆಯ ದೆಂದು ಅಳಿಯನ ಕಿವಿಯಲ್ಲಿ ಊದಿದರು.

ಎಲ್ಲದಕ್ಕಿಂತಲೂ ಹೆಚ್ಚಾಗಿ ಬಿಜಾಪುರದಲ್ಲಿದ್ದು ಕೊಂಡು ಅರಳೆ ವ್ಯಾಪಾರ ಮಾಡಿದರೆ ತಾವು ಸಹಾಯ ಮಾಡುವುದಾಗಿ ಹೇಳಿದರು.

ಅದಕ್ಕೇ ಕಾರಣವೂ ಸಹ ಇತ್ತು.

ಓದಿದ ಹುಡುಗನೆಂದೂ ಲಕ್ಷಣವಾಗಿದ್ದಾನೆಂದೂ ಮುರಿಗೆಪ್ಪನಿಗೆ ಹೆಣ್ಣು ಕೊಟ್ಟಿದ್ದರು. ಅಳಿಯನ ಮನೆಯವರು ಅವರ ಅಂತಸ್ಥಿಗೆ ತಕ್ಕಷ್ಟು ಶ್ರೀಮಂತರಲ್ಲ. ಆ ಮನೆಯಲ್ಲಿ ಮಗಳು ಹೋಗಿರುವುದು ಇಷ್ಟವಿರಲಿಲ್ಲ. ಮಗಳು ಅಳಿಯನನ್ನು ತಮ್ಮ ಮನೆಯಲ್ಲಿಟ್ಟು ಕೊಳ್ಳುವುದೂ ಚೆನ್ನಾಗಿರು ವುದಿಲ್ಲ. ಆದರಿಂದ ಬೀಜಾಪುರದಲ್ಲಿ ಅವನಿಗೆ ಅರಳೆಯ ವ್ಯಾಪಾರ ಹಚ್ಚಿ ದರು.

ಅವರಿಗೆ ಬಾಗಲಕೋಟೆ, ಗದಗಗಳಲ್ಲಿ ಜಿನ್ನಿಮಿಲ್ಲುಗಳಿದ್ದುದರಿಂದ ಅಳಿಯ ಬೀಜಾಪುರದ ಕಡೆ ಅರಳೆ ಕೊಳ್ಳುವುದು ಅವರಿಗೆ ಅನುಕೂಲ ವಾಗಿಯೇ ಇತ್ತು.

ಅಂತೂ ಈಗ ಮುರಿಗೆಪ್ಪನಿಗೆ ಮದುವೆಯಾಗಿದೆ. ಎರಡು ಮಕ್ಕಳಿವೆ.

ಸ್ನೇಹಿತ ಹೇಳಿದುದೆಲ್ಲವನ್ನೂ ಕೇಳಿದನಂತರ ಶಂಕರ ಅಂದ.

"ಮನೆಯವರೆಲ್ಲರೂ ಎಲ್ಲಿ ? ಒಬ್ಬರೂ ಕಾಣುವುದಿಲ್ಲವಲ್ಲ."

"ನನ್ನ ಹೆಂಡತಿ ಹೆರಿಗೆಗಾಗಿ ತವರಿಗೆ ಹೋಗಿದ್ದಾಳೆ. ಮಕ್ಕಳು ಅವಳ ಜೊತೆಯಲ್ಲಿ ಹೋಗಿವೆ."

ಅಡಿಗೆ ಆಗುವುದಕ್ಕೆ ಇನ್ನೂ ಅವಕಾಶವಿತ್ತು. ಅವಶ್ಯಕವೆಂದು ಕೊಳ್ಳುವ ಮಾತುಗಳು ಮುಗಿದು ಆಡುವವರೇ ಅನಾವಶ್ಯಕವೆಂದು ಕೊಳ್ಳುವ ಮಾತುಗಳು ಆರಂಭವಾದುವು. ವೀರಶೈವನಾದರೂ ಮುರಿಗೆಪ್ಪ ನಿಗೆ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟು ಸಿಕ್ಕದೇ ಹೋದುದು, ದಾವಣ ಗೆರೆಯಲ್ಲಿ ತಂದೆಯ ಮನೆಯಲ್ಲಿರಲು ಬೇಜಾರಾಗಿ ಹಟ ಮಾಡಿಕೊಂಡು ಕೆಲಸಕ್ಕೆ ಬಾರದ ಬಿ.ಎ. ಓದಲು ಮೊದಲು ಮಾಡಿದುದು ಮುಂತಾದ ಮಾತುಗಳು ಮೊದಲಾದುವು.

ಈ ಮಾತುಗಳಲ್ಲಿ ಕನಕಳಿಗೆ ಸ್ವಾರಸ್ಯ ಕಂಡುಬರಲಿಲ್ಲ. ಕೈಕಾಲು

ತೊಳೆದು ಕೊಳ್ಳಬೇಕೆಂದು ತೋರುತ್ತಲೂ ಎದ್ದು ಒಳಗೆ ಹೊರಟು ಹೋದಳು. ಹಾಗೆ ಹೋದವಳು ಪುನಃ ಬೇಗ ವಾಪ್ಸು ಬರಲಿಲ್ಲ.

ಮುರಿಗೆಪ್ಪ ಹೊಸ ಕಟ್ಟಿನಿಂದ ಬೀಡಿಯೊಂದನ್ನು ತೆಗೆದು ಹಚ್ಚಿಕೊಂಡು ಕೇಳಿದ.

"ನಿನ್ನ ವಿಷಯವೊಂದೂ ಹೇಳಲಿಲ್ಲವಲ್ಲಯ್ಯ! ನಿನಗೆಲ್ಲಿ ಮದುವೆಯಾಯಿತು. ಏನು ಕತೆ?''

ಕನಕಳಂತಹ ಹುಡುಗಿ ಜೊತೆಯಲ್ಲಿರುವಾಗ ನಿನ್ನ ಮದುವೆ ಎಲ್ಲಾಯಿತು ಏನು ಕತೆ ಎಂದು ಕೇಳುವುದು ಸ್ವಾಭಾವಿಕವಾಗಿತ್ತು.

"ನೀನು ಹೇಳಿದಂತೆ ಅದೊಂದು ಕತೆಯೇ ಆಗಿದೆ, ಮುರಿಗೆಪ್ಪ. ಈ ಬಿ. ಎ. ಮುಗಿಸಿದನಂತರ ನಾನು ಬೆಳಗಾಂನಲ್ಲಿ ಲಾ.ಗೆ ಓದುತ್ತಿದ್ದೆ ಮೊದಲ ವರ್ಷವಾದನಂತರ ರಜೆಯಲ್ಲಿ ಹೆಂಗಳೂರಿಗೆ ಹೋದೆ. ಅಲ್ಲಿ ಕನಕ ನನ್ನ ಕಣ್ಣಿಗೆ ಬಿದ್ದಳು. ಮೊದಲೇ ಬಿದ್ದಿದ್ದಳು. ಅನ್ನು—,ಬಿ. ಎ.ಗೆ ಓದುತ್ತಿದ್ದಾಗಲೇ ನನಗೂ ಆವಳಿಗೂ ಪರಿಚಯವಾಗಿತ್ತು. ಅವಳ ಮನೆಯಲ್ಲಿ ತಾಯಿತಂದೆಗಳು ಮಗಳಿಗೆ ಮದುವೆ ಮಾಡಲು ಓಡಿಯಾಡುತ್ತಿದ್ದರು. ಅಂತಹದ್ದರಲ್ಲಿ ನಾನು ಬೆಳಗಾವಿಗೆ ಹೊರಟುಹೋದರೆ ಏನಾದರೂ ಅನಾಹುತವಾಗಬಹುದೆಂದು ನಾನೂ ಕನಕಳೂ ಬೆಂಗಳೂರಿನಲ್ಲಿ ಆರ್ಯ ಸಮಾಜದ ರೀತಿಯಾಗಿ ಮದುವೆ ಮಾಡಿಕೊಂಡು, ಬೆಳಗಾವಿಗೆ ಹೊರಟು ಬಂದೆವು. ಅವಳ ತಂದೆಗೂ ನಮ್ಮ ತಂದೆಗೂ ಹೇಗೋ ವಿಚಾರ ಗೊತ್ತಾಗಿರಬೇಕು. ಅವರುಗಳಿಬ್ಬರೂ ಬೆಳಗಾವಿಗೆ ಬಂದು ಗಲಾಟೆ ಹಚ್ಚಿಬಿಟ್ಟರು. ನಾವಿಬ್ಬರೂ ಮೆಜಾರಿಟಿಗೆ ಬಂದವರು, ಖುದ್ದು ರಾಜಿಯಿಂದ ಮದುವೆ ಮಾಡಿಕೊಂಡು ಸಂಸಾರ ಮಾಡುತ್ತಿದ್ದೆವು. ಯಾರೇನು ಮಾಡಲಾಗುತ್ತದೆ. ಅಂತೂ ಊರಿನಲ್ಲಿ ರಂಪೋರಂಪಾಯಿತು. ಅಷ್ಟಾದ ಮೇಲೆ ನನಗೆ ಬೇಜಾರಾಗಿ ಬೆಳಗಾವಿನಿಂದ ಬಂದುಬಿಟ್ಟೆ. ಈ ವರ್ಷ ಹೇಗೋ ಕಳೆದು ಮುಂದಿನ ಬಾರಿ ಲಾ. ಮಾಡಿಕೊಂಡು ನಮ್ಮೂರಿಗೆ ಹೋಗಿ ಬೋರ್ಡು ಹಾಕಿಕೊಳ್ಳಬೇಕೆಂದಿದ್ದೇನೆ."

"ಒಳ್ಳೇ ರೊಮಾಂಟಿಕ್ ಆಗಿದೆಯಯ್ಯಾ, ವಿಷಯ."

ಎಂದು ಹೇಳುತ್ತಾ ಬೀಡೀ ತುಂಡಿನಲ್ಲಿ ಬರಬಹುದಾದಷ್ಟು ಹೊಗೆ

ಯನ್ನು ಓರಿ, ಅದನ್ನು ಬಿಸಾಟು, ಬೇರೊಂದನ್ನು ಕೈಗೆತ್ತಿಕೊಂಡ, ಮುರಿಗೆಪ್ಪ.

ಸ್ವಲ್ಪ ಹೊತ್ತು ಅವರಿಬ್ಬರಲ್ಲಿ ಯಾರೂ ಮಾತನಾಡಲಿಲ್ಲ.

ಒಳಗೆ ಹೋದ ಕನಕ ಕೆಲಸದವಳಿಗೆ ಸಹಾಯ ಮಾಡುತ್ತಿದ್ದಳೆಂದು ಕಂಡುಬರುತ್ತದೆ. ಯಾರಾದರೂ ಕೆಲಸ ಮಾಡುತ್ತಿದ್ದರೆ ನೋಡಿಕೊಂಡು ಸುಮ್ಮನಿರುವುದಕ್ಕೆ ಆಗುತ್ತದೆಯೇ? ಎಷ್ಟಾದರೂ ಹೆಣ್ಣು.

ಮಣೆಗಳ ಮುಂದೆ ಮೂರು ತಣಿಗೆಗಳನ್ನು ಹಾಕಿ, ತಳತಳನೆ ಬೆಳಗಿದ ತಾಲಿಗಳನ್ನು ನೀರು ತಂದಿಟ್ಟು, ಕನಕ ಹೊರಗೆ ಬಂದು ಗಂಡಸರನ್ನು ಊಟಕ್ಕೆ ಕರೆದರು.

ಶಂಕರಪ್ಪನೂ ಮುರಿಗೆಪ್ಪನೂ ಊಟಕ್ಕೆ ಕುಳಿತರು. ತಾನೂ ಅವರೊಡನೆ ಕುಳಿತುಕೊಳ್ಳ ಬೇಕಾಗಿದ್ದ ಕನಕ ಚಟ್ನೀ, ಉಪ್ಪಿನಕಾಯಿ, ಪಲ್ಯಗಳು, ಗೊಜ್ಜುಗಳನ್ನು ತಂದು ಅಗಲವಾದ ತಣಿಗೆಗಳ ಸುತ್ತಲೂ ಅಲಂಕಾರವಾಗಿ ಬಡಿಸಿದಳು.

ಅಷ್ಟು ಮಾಡಿ ಬಂದು ಕುಳಿತುಕೊಂಡ ಕನಕಳನ್ನು ಉದ್ದೇಶಿಸಿ ಮುರಿಗೆಪ್ಪ ಹೇಳಿದ.

"ನೀವೇನು ನಮ್ಮ ಮನೆಯುವರೇ ಆಗಿಬಿಟ್ಟ ಹಾಗೆ ಕಂಡುಬರುತ್ತದಲ್ಲ."

ಅಂತಹದೇನೂ ಇಲ್ಲ. ರುದ್ರಮ್ಮ ಭಾಕರಿ ಸುಡುತ್ತಿದ್ದರು. ಅವರಿಗೆ ಕೈ ಸೇರಿಪಿರಲಿಲ್ಲ. ಅದರಿಂದ ತಣಿಗೆಗಳನ್ನು ಹಾಕಿ, ಸ್ವಲ್ಪ ಬಡಿಸಿದೆ."

"ನೀವೇನು ನಮ್ಮ ಮನೆಯುವರೇ ಆಗಿಬಿಟ್ಟಿರಲ್ಲಾ" ಎಂದು ಮುರಿಗೆಪ್ಪ ಅಂದದ್ದು ಶಂಕರನಿಗೆ ಅಷ್ಟು ಸರಿಯಾಗಿ ತೋರಲಿಲ್ಲ ಆದರೆ ಆ ಮಾತಿಗೆ ತಪ್ಪು ಅರ್ಥ ಮಾಡುವಂತಿರಲಿಲ್ಲ. ಅದು ಕೇವಲ ಲೋಕಾರೂಢಿಯಾದ ಮಾತೇ ಆಗಿರಬಹುದು. ಕಷ್ಟಪಟ್ಟು ಯಾರಾದರೂ ಆ ಮಾತಿನಲ್ಲಿ ದೋಷವನ್ನು ಹುಡುಕಿದರೆ ಕನಕಳಂದ ಮಾತು ಆ ಕುಂದನ್ನು ನಿವಾರಿಸಿತ್ತು.

ರೊಟ್ಟೀ ಜೋಳದ್ದಾದರೂ ಮೃದುವಾಗಿ ಚೆನ್ನಾಗಿತ್ತು. ಮೂವರೂ ಕುಳಿತು ಊಟ ಮಾಡುತ್ತಿದ್ದರು. ಆಗ ಮುರಿಗೆಪ್ಪ ಕೇಳಿದ.

"ಈ ವರ್ಷ ಇಲ್ಲಿಯೇ ಇರುವುದೆಂದು ಮಾಡಿದ್ದೀಯಾ, ಶಂಕರ."

"ಹಾಗೇನು ಮಾಡಿಲ್ಲ. ಅಂತೂ ಈ ಬಾರಿ ಪರೀಕ್ಷೆಯಾಗಿ ಮುಂದಿನ ಬಾರಿ ಕಾಲೇಜು ತೆಗೆಯುವವರೆವಿಗೆ ಎಲ್ಲಿಯಾದರೂ ಕಾಲಕಳೆಯಬೇಕಾಗಿದೆ."

"ನೀನು ಮನಸ್ಸಿಗೇನೂ ಅಂದುಕೊಳ್ಳದಿದ್ದರೆ— — —"

"ಪರವಾಯಿಲ್ಲ, ಹೇಳು."

"ಈ ಒಂದು ವರ್ಷ ಎಲ್ಲಿಯಾದರೂ ಕಳೆಯಬೇಕು ಅಂತೀಯಲ್ಲ, ನಿಮ್ಮಪ್ಪ ಏನೂ ದುಡ್ಡು ಕೊಡುವುದಿಲ್ಲವೆಂಬುದು ಖಂಡಿತ. ನಿನ್ನ ಬಳಿ ಏನಾದರೂ ಇದೆಯೇನು?"

"ಸ್ವಲ್ಪ ಇದೆ. ಏನಾದರೂ ಮಾಡಿ ಸರಿಮಾಡಿಕೊಳ್ಳಬಹುದು."

"ಹಾಗಾದರೆ ನಾನೊಂದು ಸಲಹೆ ಮಾಡುತ್ತೇನೆ. ಸುಮ್ಮನೆ ಕುಳಿತು ತಿನ್ನುವ ಬದಲು ಯಾವುದಾದರೂ ದಂಧೆ ಮಾಡುವುದು ಒಳ್ಳೆಯದೆಂದು ನನಗೆ ಕಾಣುತ್ತದೆ."

ಅವನು ಹೇಳಿದುದು ಶಂಕರನಿಗೂ ಸರಿ ಎನ್ನಿಸಿತು. ಪಲ್ಯವನ್ನು ಬಾಯಲ್ಲಿಟ್ಟುಕೊಂಡಿದ್ದವನು ಅಗಿದು, ನುಂಗಿ ಹೇಳಿದ.

"ನೀನು ಹೇಳುವುದು ನಿಜ, ಅನ್ನು. ಆದರೆ ವ್ಯಾಪಾರ ಸಾಪಾರ ನನಗೆ ಅನುಭವವಿಲ್ಲವಲ್ಲಾ."

"ಅದಕ್ಕೆಲ್ಲಾ ಎಷ್ಟು ಅನುಭವ ಬೇಕು. ತನಗೆ ತಾನೇ ಅನುಭವವಾಗುತ್ತದೆ. ಅಷ್ಟಕ್ಕೂ ನಾನು ಹೇಳುತ್ತಿರುವ ವ್ಯಾಪಾರ ಏನು ಎಂದುಕೊಂಡಿದ್ದೀಯೆ ? ಸ್ನೋ, ಪೌಡರ್, ಹೇರಾಯಿಲ್, ಸೋಪು ಮುಂತಾದವುಗಳನ್ನು ಮಾರುವುದು. ಬಜಾರಿನಲ್ಲಿ ಸಣ್ಣ ಅಂಗಡಿ ಇದೆ. ಬೇಕಾದರೆ ನಾನು ಹೇಳಿ, ಕೊಡಿಸುತ್ತೇನೆ. ಅಂಗಡಿ ಇಟ್ಟು, ವ್ಯಾಪಾರ ಮೊದಲು ಮಾಡಿದ ಮೇಲೆ ಅವರಿವರಿಂದ ಸರಕು ಬೇಕಾದರೂ ಕೊಡಿಸುತ್ತೇನೆ. ಎಷ್ಟು ದಿನ ಬೇಕೋ ಅಷ್ಟುದಿನ ವ್ಯಾಪಾರಮಾಡು. ಬೇಡವಾದಾಗ ಮುಚ್ಚಿ ಹೊರಟು ಹೋಗಬಹುದು. ಆ ಸಾಮಾನುಗಳೇನೂ ಕೆಟ್ಟು ಹೋಗುವಂತಹದ್ದಲ್ಲ. ಯಾವತ್ತು ಮಾರಿದರೂ ಹಾಕಿದ ದುಡ್ಡು ಬರುತ್ತದೆ. ಸ್ವಲ್ಪ ವ್ಯಾಪಾರ ಚೆನ್ನಾಗಿ ನಡೆಯಿತೋ ಒಂದೋ ಎರಡೋ ಸಾವಿರ ಪಗಡಿ ಕೂಡಾ ಸಿಕ್ಕುತ್ತದೆ."

ಮುರಿಗೆಪ್ಪನ ಸಲಹೆ ಕನಕಳಿಗೆ ಬಹಳ ಸಮರ್ಪಕವಾಗಿ ಕಂಡಿತು. ಗಂಡಸರ ಎದುರು ಸಾಲಿನಲ್ಲಿ ಬೇರೆಯಾಗಿ ಕುಳಿತಿದ್ದವಳು ಶಂಕರನ ಮುಖ ನೋಡಿದಳು.

"ನೀನು ಹೇಳಿದುದನ್ನು ಆಲೋಚನೆ ಮಾಡುತ್ತೇನೆ, ಮುರಿಗೆಪ್ಪ. ಮೊದಲು ನಮಗೆ ಮನೆ ಬೇಕು. ಹೋಟೆಲಿನಲ್ಲಿರುವುದು ಬಹಳ ಖರ್ಚಾಗುತ್ತದೆ. ಅದರ ಮೇಲೆ ಸುಖವೂ ಇಲ್ಲ."

"ನಿಮಗೆ ಆಕ್ಷೇಪಣೆ ಇಲ್ಲದಿದ್ದರೆ ನಮ್ಮ ಮನೆ ಔಟ್ ಹೌಸೇ ಇದೆ. ಬಾಡಿಗೆಯೂ ಕಡಿಮೆ. ಇಪ್ಪತ್ತೈದು ರೂಪಾಯಿ. ಕಲೆಕ್ಟರ ಆಫೀಸಿನ ಗುಮಾಸ್ತೆ ಇದ್ದ. ವರ್ಗವಾಗಿ ಮೊನ್ನೆ ತಾನೇ ಮನೆ ಖಾಲೀ ಮಾಡಿದ.

ಊಟ ಮುಗಿಯಿತು. ಕನಕಳ ಸೂಚನೆಯಂತೆ ಶಂಕರ ಔಟ್ ಹೌಸ್ ನೋಡಲಪೇಕ್ಷೆ ಮಾಡಿದ. ಮುರಿಗೆಪ್ಪ ತೋರಿಸಿದ.

ಮುಂದುಗಡೆ ಎಕ್ಸ್‌ಪ್ಯಾಂಡೆಡ್ ಮೆಟಲ್ ಹಾಕಿದ ಸಣ್ಣ ವರಾಂಡ. ಒಳಗಡೆ ಹಾಲು, ಕೋಣೆ, ಅಡಿಗೆಮನೆ, ಬಚ್ಚಲು ಮನೆಗಳು. ಹಿಂದೆ ಸೌದೆ ಬೆರಣಿ ಇಟ್ಟುಕೊಳ್ಳಲು ಸಣ್ಣ ಸಾಗ.

ಒಳ್ಳೇ ಸಣ್ಣ ಕಾಟೇಜ್ ಇದ್ದ ಹಾಗಿತ್ತು, ಮನೆ.

ಮನೆಯನ್ನು ತೋರಿಸಿ ಹೊರಗೆ ಬರುತ್ತಾ ಮುರಿಗೆಪ್ಪ ಸ್ನೇಹಿತನಿಗೆ ಹೇಳಿದ.

"ನಾಳೆಯ ದಿನವೇ ಈ ಮನೆಗೆ ಬಂದುಬಿಡಯ್ಯಾ."

ಕನಕ ಶಂಕರರು ನಡೆದುಕೊಂಡೇ ಹೋಗುವುದಾಗಿ ಹೇಳಿ ಹೊರಟರು ಮುರಿಗೆಪ್ಪನೂ ಅಷ್ಟು ದೂರ ಬಂದು ಬೀಳ್ಕೊಂಡ.

ಇಬ್ಬರೇ ಸ್ವಲ್ಪ ದೂರ ನಡೆದು ಬಂದ ಮೇಲೆ ಕನಕ ಹೇಳಿದಳು.

"ನಿಮ್ಮ ಸ್ನೇಹಿತರು ಬಹಳ ಒಳ್ಳೆಯವರೆಂದು ಕಂಡುಬರುತ್ತದೆ."

"ಹೌದು. ಮುರಿಗೆಪ್ಪ ಒಳ್ಳೆಯ ಮನುಷ್ಯ."

"ನಿಜ. ಇಲ್ಲದಿದ್ದರೆ ನಿಮಗೆ ಇಷ್ಟೆಲ್ಲಾ ಸಹಾಯ ಮಾಡಲು ಮುಂದೆ ಬರುತ್ತಿದ್ದರೆ? ಸಮಯಕ್ಕಾಗುವವ ಸ್ನೇಹಿತ. ಆದಲ್ಲದೆ ಸಾವಿರ ಮಂದಿ ಸ್ನೇಹಿತರಿದ್ದರೂ ಫಲವೇನು?''

ಕನಕ ತನ್ನ ಸ್ನೇಹಿತನ ವಿಷಯ ಅಷ್ಟೊಂದು ಮಾತನಾಡುವುದಾ

ಗಲೀ, ಅವನನ್ನು ಮೆಚ್ಚಿಕೊಂಡು ಹೊಗಳುವುದಾಗಲೀ ಶಂಕರನಿಗೆ ಇಷ್ಟವಿರಲಿಲ್ಲ.

ಆದರೆ "ಅವನ ವಿಷಯ ನೀನೇಕೆ ಅಷ್ಟೊಂದು ಮಾತನಾಡುತ್ತೀ?" ಎಂದು ಹೇಳುವುದು ಚೆನ್ನೇ? ಗಂಡನಿಗೆ ಸಹಾಯ ಮಾಡುವ ಸ್ನೇಹಿತನ ಬಗ್ಗೆ ಹೆಂಡತಿಗೆ ಕೃತಜ್ಞತೆ ಇದ್ದರೆ ತಪ್ಪೆ?

ತಪ್ಪೇನಿಲ್ಲ. ಎಷ್ಟಾದರೂ ಆ ಮಾತು ಅಷ್ಟು ಹಿತವಾಗಿರಲಿಲ್ಲ.

## ೧೬

ಬಿಜಾಪುರಕ್ಕೆ ಬರದೇ ಇದ್ದಿದ್ದರೇ ಚೆನ್ನಾಗಿದ್ದಿತೆಂದು ಶಂಕರನಿಗೆ ತೋರಲಾರಂಭವಾಯಿತು.

ವಾಸ್ತವವಾಗಿ ಮುರಿಗೆಪ್ಪ 'ಶಂಕರನಿಗೆ ಬಹಳ ಸಹಾಯ ಮಾಡಿದ್ದ. ತನ್ನ ಮನೆಯ ಹಿಂದೆ ಔಟ್ ಹೌಸ್ ಬಾಡಿಗೆಗೆ ಕೊಟ್ಟಿದ್ದ. ಬಜಾರಿನಲ್ಲಿ ಅಂಗಡಿ ಕೊಡಿಸಿದ್ದ. ಅವರಿವರಿಗೆ ಹೇಳಿ ಸಾಮಾನು ಕೊಡಿಸಿದ್ದ. ಬೇಕಾದವರಿಗೆಲ್ಲಾ ಅದು ತನ್ನ ಅಂಗಡಿಯೇ ಎಂದೂ, ಅಲ್ಲಿಯೇ ಸಾಮಾನುಗಳನ್ನು ತೆಗೆದುಕೊಳ್ಳಬೇಕೆಂದೂ ಹೇಳುತ್ತಿದ್ದ.

ಇದನ್ನೆಲ್ಲಾ ಅವನು ಯಾಕೆ ಮಾಡುತ್ತಿದ್ದಾನೆ? ಕನಕಳ ಮೇಲಿನ ಆಸೆಯಿಂದ ಮಾಡಿದನೇ ಎಂದು ಮನಸ್ಸಿನಲ್ಲಿ ಸಂದೇಹದ ಮುಳ್ಳು ಚುಚ್ಚುತ್ತಲೇ ಇತ್ತು.

ಕೆಲವು ಬಾರಿ ತನ್ನ ಮನಸ್ಸಿನ ಭಾವನೆಗಳೆಲ್ಲವೂ ಭ್ರಾಂತಿ ಎನ್ನಿಸುತ್ತಿದ್ದವು. ಬಿಟ್ಟೀ ಮನೆ ಕೊಟ್ಟಿದ್ದನೇ? ಇಲ್ಲ, ಖಾಲೀ ಇದ್ದ ಮನೆಯನ್ನು ಬಾಡಿಗೆಗೆ ಕೊಟ್ಟಿದ್ದ. ತಾನು ಅಡ್ವಾನ್ಸ್ ಕೊಟ್ಟನಂತರವೇ ಅಂಗಡೀ ಸಿಕ್ಕಿದ್ದು. ಹೋಲ್‌ಸೇಲ್‌ನವರಿಗೆ ಶಿಫಾರಸು ಮಾಡಿದ್ದ. ಅವನ ಶಿಫಾರಸು ಇಲ್ಲದಿದ್ದರೂ ಕೊಟ್ಟ ಹಣಕ್ಕಿಂತ ಸ್ವಲ್ಪ ಹೆಚ್ಚು ಬೆಲೆಯ ಸರಕು

ಗಳನ್ನು ಅಂಗಡಿಗಳವರಿಗೆ ಕೊಟ್ಟೇಕೊಡುತ್ತಾರೆ. ಅವುಗಳೇನೂ ಅಂತಹ ದೊಡ್ಡ ಸಹಾಯುಗಳಲ್ಲ.

ಆದರೂ ಸಹಾಯ ಮಾಡಿದ್ದಾನಲ್ಲ, ಸ್ವಲ್ಪವಾದರೂ ಮಾಡಿದ್ದಾನಲ್ಲ. ಅದನ್ನು ತಾನೇ ಯಾಕೆ ಮಾಡಿದ? ಅವನ ತರಹ ನೋಡಿದರೆ ಸಂದೇಹ ಗ್ರಸ್ತವಾಗಿಯೇ ಇದೆ.

ಬಿಜಾಪುರಕ್ಕೆ ಬಂದ ನಾಲ್ಕೈದು ತಿಂಗಳುಗಳಲ್ಲಿ ಕನಕ ರೇಷ್ಮೆಯ ಎರಡು ಸೀರೆಗಳನ್ನು ಕೊಂಡಿದ್ದಳು. ಏಳೆಂಟು ಬ್ಲೌಸ್‌ಗಳನ್ನು ಹೊಲಿಸಿದ್ದಳು.

ಅವುಗಳನ್ನು ತಂದಾಗಲೆಲ್ಲ ಅವಳು ಗಂಡನಿಗೆ ತೋರಿಸಿದ್ದಳು. ಆಗೆಲ್ಲ ಅವುಗಳಿಗೆ ಹಣವೆಲ್ಲಿತ್ತು ಎಂದವನು ಕೇಳಿದ್ದ.

ಅದಕ್ಕೆಲ್ಲಾ ಒಂದೇ ಉತ್ತರ. ಮನೆ ಖರ್ಚಿಗೆ ಕೊಡುವ ಹಣದಲ್ಲಿ ಮಿಗಿಸಿ ತೆಗೆದುಕೊಂಡಿದ್ದೇನೆಂದೂ. ಇನ್ನೂ ಹೆಚ್ಚು ಮಾತನಾಡಿದರೆ" ನನ್ನ ಹತ್ತಿರ ಹಣವೇ ಇಲ್ಲ. ಭಿಕಾರಿ ಎಂದು ಕೊಂಡಿದ್ದೀರಾ" ಎಂದೂ ಎನ್ನುತ್ತಿದ್ದಳು.

ಮುರಿಗೆಪ್ಪನ ಅನುಗ್ರಹವೇ ಇವುಗಳಿಗೆಲ್ಲಾ ಮೂಲವೋ ಎಂದು ಒಮ್ಮೊಮ್ಮೆ ಸಂದೇಹ ಬರುತ್ತದೆ. ಸಂದೇಹವನ್ನು ಬೆಳಸುವ ಸನ್ನಿವೇಶಗಳೂ ಇವೆ.

ಶಂಕರನಂತೂ ಬೆಳಗಾಗ ಅಂಗಡಿಗೆ ಹೋದರೆ ಮಧ್ಯಾಹ್ನ ಮನೆಗೆ ಬರುತ್ತಾನೆ. ಊಟವಾಗಿ ಸ್ವಲ್ಪ ವಿಶ್ರಮಿಸಿಕೊಂಡಿದ್ದು ಅಂಗಡಿಗೆ ಹೊರಟು ಹೋಗುತ್ತಾನೆ. ಪುನಃ ಮನೆಗೆ ಬರುವುದು ರಾತ್ರಿ ಎಂಟೂವರೆ ಒಂಭತ್ತು ಗಂಟೆಗೆ.

ಮುರಿಗೆಪ್ಪ ಹಾಗಲ್ಲ. ಅವನು ದೊಡ್ಡ ವರ್ತಕ. ಸಹಸ್ರಾರು ರೂಪಾಯಿಗಳ ವ್ಯಾಪಾರ ಮಾಡುತ್ತಾನೆ. ಅವನಿಗೆ ಅಂಗಡಿ ಉಂಟು. ಆದರೆ ಅಂಗಡಿಯಲ್ಲಿರ ಬೇಕಾಗಿಲ್ಲ. ನೋಡಿಕೊಳ್ಳುವವರು ಎಷ್ಟೋ ಜನರಿದ್ದಾರೆ. ಅವನು ಅಂಗಡಿಯಲ್ಲಿದ್ದರೂ ಆಯಿತು. ಇಲ್ಲದಿದ್ದರೂ ಆಯಿತು. ಇದರ

ಮೇಲೆ ಅವನು ಊರಿನಲ್ಲಿಲ್ಲದಿರುವ ಪ್ರಮೇಯಗಳೂ ಉಂಟು. ಆರಳಿಗೆ ಅಡ್ವಾನ್ಸ್ ಮಾಡಲು ಹತ್ತಿರದ ಹಳ್ಳಿ ಊರುಗಳಿಗೆ ಹೋಗುತ್ತಾನೆ.

ಒಂದೊಂದು ಬಾರಿ ಎಂಟು ಹತ್ತು ದಿನಗಳಾದರೂ ಮುರಿಗೆಪ್ಪ ಶಂಕರನ ಕಣ್ಣಿಗೆ ಬೀಳುತ್ತಿರಲಿಲ್ಲ.

ಶಂಕರ ಅಂಗಡಿಯಲ್ಲಿಯೇ ಇರುವಾಗ, ಮುರಿಗೆಪ್ಪ ಅಂಗಡಿಯಲ್ಲಿಲ್ಲದಿರುವಾಗ ಮನೆಯಲ್ಲಿ ಏನೇನು ನಡೆಯುತ್ತದೆಯೋ? ಯಾರು ಬಲ್ಲರು.

ಈ ಸಂದೇಹ ಮನಸ್ಸಿನಲ್ಲಿ ಕೊರೆಯಲು ಆರಂಭ ಮಾಡಿದನಂತರ ಹೊತ್ತಿಲ್ಲದ ಹೊತ್ತಿನಲ್ಲಿ ಶಂಕರ ಹಠಾತ್ತನೆ ಮನೆಗೆ ಹೋಗಿ ನೋಡುತ್ತಿದ್ದುದೂ ಉಂಟು.

ಹಾಗೆ ಅವನು ಬಂದಾಗ ಕೆಲವು ಸಾರಿ ಕನಕ ವರಾಂಡದಲ್ಲಿ ಕುಳಿತು ಉಲ್ಲನ್ ಹೆಣೆಯುತ್ತಲೋ, ಪುಸ್ತಕ ಓದುತ್ತಲೋ ಇರುತ್ತಿದ್ದುದು ಉಂಟು. ಅವಸರವಸರವಾಗಿ, ಅಕಾರಣವಾಗಿ ಮನೆಗೆ ಬರುತ್ತಿದ್ದುದನ್ನೂ ಏನೇನೋ ಹೇಳಿ ಹೊರಟು ಹೋಗುತ್ತಿದ್ದುದನ್ನೂ ಅವಳೂ ಗಮನಿಸುತ್ತಿದ್ದಳು. ನಗುತ್ತಿದ್ದಳು. ಊರು ಲೂಟಿಯಾದನಂತರ ಬಂದು ಕೋಟೆ ಬಾಗಿಲು ಹಾಕುವ ಕಾವಲುಗಾರರನ್ನು ನೋಡಿ ನಗುವಂತೆ ನಗುತ್ತಿದ್ದಳು.

ಗಂಡನ ಮನಸ್ಸನ್ನು ಹುಳು ಕೊರೆಯಲು ಆರಂಭ ಮಾಡಿದೆ ಎಂದು ಅವಳಿಗೂ ಗೊತ್ತಿದ್ದಿರಬೇಕು ! ಇಲ್ಲದಿದ್ದರೆ ಆರೀತಿ ಯಾವಾಗಲೂ ನಗಲು ಹೇಗೆ ಸಾಧ್ಯ ?

ಮತ್ತೆ ಕೆಲವು ಬಾರಿ ಶಂಕರ ಬಂದಾಗ ಕನಕ ಮನೆಯಲ್ಲಿರುತ್ತಿರಲಿಲ್ಲ. ಮುರಿಗೆಪ್ಪನ ಮನೆಯಲ್ಲಿರುತ್ತಿದ್ದಳು. ಮನೆಯ ವರಾಂಡದಲ್ಲಿ ನಿಂತು ನಾಲ್ಕೈದು ಬಾರಿ "ಕನಕ-ಕನಕ" ಎಂದು ಕೂಗಿಕೊಂಡ ಮೇಲೆ ಅಲ್ಲಿಂದ ಹಿತ್ತಲು ಬಾಗಿಲಿನಲ್ಲಿ ಬರುತ್ತಿದ್ದಳು. ಹಾಗೆ ಬಂದಾಗಲೆಲ್ಲಾ ಅವಳು ಮುಖ ಗಂಟು ಹಾಕಿ ಮುನಿಸಿ ಕೊಂಡಿರುತ್ತಿದ್ದಳು.

ಬಂದು ಕೇಳುತ್ತಿದ್ದಳು.

"ಯಾಕೆ, ಹಾಗೆ ಕೂಗಿ ಕೊಳ್ಳುತ್ತೀರಿ ? ನಿಮಗೇನು ಬೇಕಾಗಿದೆ ?"

"ಏನೂ ಇಲ್ಲ. ಬಂದೆ. ಮನೆ ಬಾಗಿಲು ತೆರೆದು ಬಿದ್ದಿದೆಯಲ್ಲಾ. ನೀನಿಲ್ಲವಲ್ಲಾ—ಎಂದು ಕರೆದೆ."

"ಬಾಗಿಲು ತೆರೆದಿದ್ದರೇನಾಯಿತು? ನಿಮ್ಮ ಆಸ್ತಿಯನ್ನು ಯಾರೂ ದೋಚಿಕೊಂಡು ಹೋಗುವುದಿಲ್ಲ."

ಏನೋ ನೆವ ಹೇಳಿ, ಮನೆಯಿಂದ ಹೊರಗೆ ಹೋಗುವಾಗ ಸಮಾಧಾನ ದಿಂದ ಅವಳನ್ನು ಕೇಳುತ್ತಿದ್ದ.

"ಕನಕ. ಅಲ್ಲೇನು ಮಾಡುತ್ತಿದ್ದೆ?"

ಅವಳು ಸಮಾಧಾನದಿಂದಲೇ ಉತ್ತರ ಕೊಡುತ್ತಿದ್ದಳು.

"ಬೇಜಾರಾಯಿತು. ರುದ್ರಮ್ಮನೊಂದಿಗೆ ಮಾತನಾಡುತ್ತಾ ಇದ್ದೆ."

ಇನ್ನೇನು ಕೇಳಿಯಾನು? ಅಂಗಡಿಗೆ ಹೋಗುವಾಗ ಮನೆಯ ಮುಂದುಗಡೆ ಹೋಗಿ ಬಾಗಿಲು ತಟ್ಟಿ, ಕರೆಯುತ್ತಿದ್ದ. ಬಾಗಿಲು ತೆಗೆದ ರುದ್ರಮ್ಮನನ್ನು "ಮರಿಗೆಪ್ಪ ಇದ್ದಾನೆಯೇ?" ಎಂದು ಕೇಳುತ್ತಿದ್ದ. ಸಾಧಾರಣವಾಗಿ ಮುರಿಗೆಪ್ಪ ಇರುತ್ತಿರಲಿಲ್ಲ.

ಕನಕ ಏನಾದರೊಂದು ಸಾಮಾನು ತಂದಾಗಲೆಲ್ಲಾ ಅವಳ ಮೇಲೆ ಉರಿದುರಿದು ಬೀಳುತ್ತಿದ್ದ. ಮನೇ ಖರ್ಚಿಗೆ ಕೊಟ್ಟ ಹಣದಲ್ಲಿ ಉಳಿಸಿ ಕೊಂಡುಕೊಂಡು ತಂದೆನೆಂದು ಅವಳು ಹೇಳುತ್ತಿದ್ದುದರಿಂದ ದಿನಾ ಖರ್ಚಿಗೆ ಕೊಡುವ ಹಣವನ್ನು ಕಡಿಮೆ ಮಾಡ ತೊಡಗಿದ.

ಹಾಗಾದಾಗಲೆಲ್ಲಾ ಕನಕ ತಿರುಗಿ ಬೀಳುತ್ತಿದ್ದಳು. ಒಂದು ರೂಪಾಯಿ ಸಹ ಧಾರಾಳವಾಗಿ ಖರ್ಚು ಮಾಡದ ಬದುಕು ಯಾಕೆಂದು ರೇಗಿ ಹಟ ಮಾಡುತ್ತಿದ್ದಳು. ಹೆಂಗಸರ ಕಡೆಯ ಅಸ್ತ್ರವಾದ ಕಣ್ಣೀರು ತಂದು ಕೊಳ್ಳುತ್ತಿದ್ದಳು. ಅಳುತ್ತಿದ್ದಳು. ಮುನಿಸಿ ಕೊಳ್ಳುತ್ತಿದ್ದಳು.

ಅವಳನ್ನು ಸಮಾಧಾನ ಪಡಿಸಲು ಶಂಕರ ಒಂದಕ್ಕೆರಡಾಗಿ ಹಣ ಕೊಡ ಬೇಕಾಗುತ್ತಿತ್ತು. ಕನಕಳ ಕೋಪ, ಅಸಮಾಧಾನವನ್ನು ಉಪಶಮನ ಮಾಡಬೇಕಾದರೆ ಹಣವನ್ನು ಚೆಲ್ಲಬೇಕಾಗಿತ್ತು.

ಮುರಿಗೆಪ್ಪನಿಗೂ ಕನಕಳಿಗೂ ಸಂಬಂಧವಿರಬಹುದೆಂಬ ಸಂದೇಹವು ಬರುತ್ತಲೇ ಅವಳನ್ನು ಉದ್ಧಾರ ಮಾಡುವುದು ಅಸಂಭವವೆಂದು ಶಂಕರನಿಗೆ ಕಾಣ ತೊಡಗಿತು.

ಇವಳಿಗಾಗಿ ತಾಯಿ ತಂದೆಗಳನ್ನು ತೊರದಿದ್ದ. ಪಿತ್ರಾರ್ಜಿತವಾದ ಆಸ್ತಿಯನ್ನು ತೃಣಕ್ಕಿಂತಲೂ ಕಡೆಯಾಗಿ ನೋಡಿದ್ದ. ಭವಿಷ್ಯವನ್ನು ರೂಪಿ

ಸುವಂತಹ ತನ್ನ ಓದು ಬರಹವನ್ನು ಕಡೆಗಣಿಸಿದ್ದ. ಕೈಯಲ್ಲಿದ್ದ ಹಣ ದಲ್ಲಿ ಸಾವಿರಾರು ರೂಪಾಯಿಗಳು ಕರಗಿಹೋಗಿದ್ದವು.

ತಾನು ಇಷ್ಟೆಲ್ಲವನ್ನೂ ಮಾಡಿದ್ದು ಯಾತಕ್ಕಾಗಿ? ಕೇವಲ ಭೋಗ ಕ್ಕಾಗಿಯೇ ಅಲ್ಲ. ಹಾಗಿದ್ದಿದ್ದರೆ, ವಾಸುದೇವನಂತೆ ಮಾಡಿದ್ದಿದ್ದರೆ ಇಷ್ಟು ಹಣವಿರುವಾಗ ಎಷ್ಟು ಮಂದಿ ಹೆಣ್ಣುಗಳನ್ನು ಕೂಡಬಹುದಿತ್ತು. ಮೋಹ ದಿಂದ ಅಲ್ಲ. ಕನಕಳನ್ನು ಉದ್ಧಾರ ಮಾಡುವುದಕ್ಕಾಗಿ, ಪತಿತಳಾಗಿದ್ದವ ಳನ್ನು ಮೇಲೆತ್ತುವುದಕ್ಕಾಗಿ. ಅವಳನ್ನು ನೋಡಿದಾಗ ಒಂದು ಬಗೆಯ ಅಭಿ ಮಾನ ತಲೆದೋರಿತ್ತು. ನಿಜ. ಆದರೆ ಬೀದಿಯಲ್ಲಿ ಹೋಗುತ್ತಾ ಎಷ್ಟೋ ಜನರನ್ನು ನೋಡುತ್ತೇವೆ. ಅವರಲ್ಲಿ ಕೆಲವು ಮಂದಿಯ ಮೇಲೆ ಅಕಾರಣ ವಾಗಿ ಅಭಿಮಾನ ಉಂಟಾಗುತ್ತದೆ. ಆದ ಮಾತ್ರಕ್ಕೆ ಆ ಕೆಲವು ಮಂದಿಗೆಲ್ಲ ರಿಗಾಗಿಯೂ ಸ್ವಾರ್ಥತ್ಯಾಗ ಮಾಡುತ್ತೇವೆಯೇ?.

ಕನಗಳಿಗಾಗಿ ಅವನು ಮಾಡಿದ್ದು ತ್ಯಾಗವೇ! ಅಷ್ಟು ಮಾಡಿದರೂ ಅವಳು ತೃಪ್ತಿಕರವಾಗಿ ನಡೆದುಕೊಳ್ಳುವುದಿಲ್ಲ. ಅದೆಲ್ಲವೂ ಮನಸ್ಸಿಗೆ ಬೇಜಾ ರಾಗಿದೆ. ಆಗಾಗಿನ ಅವಳ ನಡೆನುಡಿಗಳು ಅಸಮಾಧಾನವನ್ನು ಉಂಟು ಮಾಡುತ್ತವೆ.

ಎಷ್ಟೋ ಬಾರಿ ಅವಳನ್ನು ಬಿಟ್ಟುಬಿಡಬೇಕೆಂದು ಶಂಕರನಿಗೆ ತೋರು ತ್ತಿತ್ತು. ಕೆಲವು ಸಲವಂತೂ ನಿರ್ಧರವನ್ನೇ ಮಾಡುತ್ತಿದ್ದ. ಆದರೂ ಬಿಟ್ಟಿರಲಿಲ್ಲ, ಬಿಡಲಾಗಲಿಲ್ಲ.

ಏಕೆ? ಅದಕ್ಕೆ ಒಂದು ಕಾರಣವೂ ಇದ್ದಿತು.

ಇತ್ತೀಚಿಗೆ ಕನಕಳಲ್ಲಿ ಮತ್ತಷ್ಟು ಬದಲಾವಣೆಯಾಗಿತ್ತು. ಬೆಳಗಾಂ ನಲ್ಲಿ ಇದ್ದಾಗಲೇ ಅವಳಲ್ಲಿ ಉತ್ಸಾಹವು ಮಾಯವಾಗುತ್ತಿತ್ತು. ಈಗಲಂತೂ ಉತ್ಸಾಹರಹಿತೆಯಾದ ಕನಕಳನ್ನು ನೋಡುವುದಂತೂ ಅಸಾಧ್ಯವಾಗಿತ್ತು.

ಸಾಧಾರಣವಾಗಿ ನಮಗೆ ಬೇಕಾದುದು ತನಗೆ ತಾನೇ ಸಿಕ್ಕುವುದರಲ್ಲಿ ಸುಖ. ಕೇಳಿ ಪಡೆಯುವ ಸುಖದಲ್ಲಿ ರುಚಿ ಇರುವುದಿಲ್ಲ. ಯಾವುದರಲ್ಲಿ ಹೇಗಾದರೂ ಆಗಲಿ, ರತಿಯಲ್ಲಂತೂ ಅದು ನಿಜ.

ಎತ್ತಿಕೊಂಡಿರುವ ಮಗು ನಕ್ಕರೆ ಚೆಂದ. ಅದು ನಗುವುದಿಲ್ಲ, ನಾವು ನಕ್ಕರೆ ಕೆಲ ಮಕ್ಕಳು ನಗುತ್ತವೆ. "ಅಚ್ಚೀ ಕಳ್ಳ, ನಗು" ಎಂದರೂ ಮತ್ತೆ

ಕೆಲವು ಮಕ್ಕಳು ನಗುವುದಿಲ್ಲ. ಎರಡು ಕೆನ್ನೆಗಳನ್ನೂ ಒತ್ತಿ, ನಕ್ಕಿತೆಂದು ಕೊಳ್ಳಬೇಕು.

ಹಾಗೆ ತನಗೆ ಬೇಕಾದುವನ್ನು ಶಂಕರ ಕೇಳತೊಡಗಿದ. ಮೊದಲು ಅದೂ ಸಿಕ್ಕಿದಂತಾಗುತ್ತಿತ್ತು. ಬರುತ್ತ ಬರುತ್ತಾ ಅದೂ ದುರ್ಲಭವಾಯಿತು.

ಶಂಕರನಿಗೆ ಇಪ್ಪತ್ತುನಾಲ್ಕು ಇಪ್ಪತ್ತೈದು ವರ್ಷಗಳು. ಯೌವನ. ಆದರಿಂದ ದೇಹ ಸುಖ ಬೇಕು ಎನ್ನುತ್ತಿತ್ತು. ದಿನವೂ ರಾತ್ರಿಯಾದೀತೇ ಎಂದು ಹಾ ತೊರೆಯುತ್ತಿದ್ದ. ಎಷ್ಟೋ ಉತ್ಸಾಹದಿಂದ ಅವಳನ್ನು ಸವಿಾಪಿಸುತ್ತಿದ್ದ. ಅವಳು ಸ್ವಾಧೀನಳಾಗುತ್ತಿದ್ದಳು. ಅನಂತರ ಉತ್ಸಾಹ ತೀರಿದಾಗ ರತಿ ನೀರಸವಾಗಿ ಕಾಣುತ್ತಿತ್ತು. ದೇಹ ದಣಿದಿದ್ದರೂ ಮನಸ್ಸು ಅತೃಪ್ತವಾಗಿಯೇ ಉಳಿಯುತ್ತಿತ್ತು.

ಈ ಅತೃಪ್ತಿ ಪುನಃ ಪುನಃ ರತಿಯು ಬೇಕು ಎಂಬ ಬಯಕೆ ಚಿಗುರುವಂತೆ ಮಾಡುತ್ತಿತ್ತು.

ಒಂದು ದಿನ ರಾತ್ರಿ ದೀಪವಾರಿಸಿ ಕನಕ ಬಂದು ಮಗ್ಗುಲಲ್ಲಿ ಮಲಗಿಕೊಂಡಿದ್ದಳು.

ಮಲಗುವುದಕ್ಕೆ ಬರುವಾಗ ಅವಳು ದೀಪವಾರಿಸುವುದು ಮೊದಲಾಗಿ ಬಹಳ ದಿನಗಳಾಗಿದ್ದುವು. ರತಿ ಕಾಲದಲ್ಲಿ ಅವನ ಮುಖ ನೋಡಬೇಕೆನ್ನುವ ಮತ್ತು ತನ್ನ ಮುಖ ಅವನು ನೋಡಲೀ ಎನ್ನುವ ಬಯಕೆ ಅವಳಲ್ಲಿ ಮಾಯವಾಗಿತ್ತು. ಆ ಮನೆಯಲ್ಲಿರಬೇಕಾದರೆ ದಿನವೂ ಅವನಿಗೊಮ್ಮೆ ದೇಹವನ್ನು ಒಪ್ಪಿಸಬೇಕು, ಒಪ್ಪಿಸುತ್ತಿದ್ದಳು. ಅವಳಿಗಿದ್ದ ಆಸಕ್ತಿಯು ಅಷ್ಟೆ. ನಿರಾಸಕ್ತಳಾದ ಅವಳು ರೂಮಿಗೆ ಬರುತ್ತಿದ್ದಂತೆಯೇ ದೀಪವಾರಿಸಿ ಬರುತ್ತಿದ್ದಳು.

ಶಂಕರ ಅವಳ ಕಂಚುಕದ ಗಂಟು ಸಡಲಿಸಿದ. ಮಾಮೂಲಾಗಿ ಸುಮ್ಮನಿದ್ದಳು. ಬಳಿಗೆಳೆದುಕೊಂಡ. ಸುಮ್ಮನಿದ್ದಳು.

ಕನಕ ತೋಳುಗಳನ್ನು ತನ್ನ ದೇಹದ ಸುತ್ತಲೂ ಹಾಕಿ ಹಿಡಿದುಕೊಳ್ಳಲಿ ಎಂದು ಅವನಿಗಾಸೆ. ಅವನೇ ಅವಳ ತೋಳೊಂದನ್ನು ತೆಗೆದು ತನ್ನ ಬೆನ್ನ ಮೇಲೆ ಹಾಕಿದ. ಕ್ಷಣಕಾಲ ಅಲ್ಲಿದ್ದು ತೋಳು ಕೆಳಗುರುಳಿತು.

ಆಗಲೇ ಶಂಕರನಿಗೆ ಬೇಜಾರಾಯಿತು. ಅವಳ ಕಡೆ ಬೆನ್ನು ತಿರುಗಿಸಿ ಮಲಗಿ ಬಿಡೋಣವೇ ಎನ್ನಿಸಿತು. ಆದರೆ ಮೈನ ಬಿಗಿತ, ಮನಸ್ಸಿನ ಆಸೆಗಳು ಅದಕ್ಕವಕಾಶ ಕೊಡಲಿಲ್ಲ ಅವಳ ಕೈಗಳೆರಡನ್ನೂ ತೆಗೆದುಕೊಂಡು ತನ್ನ ಎದೆಯ ಮೇಲಿಟ್ಟುಕೊಂಡ.

ಕನಕ ನೋಯಿಸುವಂತೆ ಅವನ ಕುಚ ಪ್ರದೇಶವನ್ನು ಮರ್ದಿಸಲಿಲ್ಲ ವಕ್ಷಸ್ಥಳವನ್ನು ಸ್ಪರ್ಶಿಸಿದಂತೆ ಮಾಡಿ ಕೈಗಳನ್ನು ಸಡಿಲ ಬಿಟ್ಟಳು.

ಶಂಕರನಿಗೆ ಅಪಮಾನವಾದಂತಾಯಿತು ಆದರೆ ರತಿಯನ್ನು ಮುಂದು ವರಿಸುವುದು ಅವನಿಗೆ ಬೇಕಾಗಿತ್ತು. ಅವಳು ಪ್ರಚೋದಿತಳಾಗಿಲ್ಲ ಪ್ರಚೋದಿಸಿದರೆ ಸರಿ ಹೋಗುತ್ತದೆ ಎಂದುಕೊಂಡ.

ಯಾವುವೋ ಕೆಲವು ಕಾಮಶಾಸ್ತ್ರದ, ಪುಸ್ತಕ ಪತ್ರಿಕೆಗಳನ್ನು ಅವನು ಓದಿದ್ದ. ಹೆಂಗಸು ಪ್ರಚೋದಿತಳಾಗಲು ಏನು ಮಾಡಬೇಕೆಂಬುದನ್ನು ತಕ್ಕ ಮಟ್ಟಿಗೆ ತಿಳಿದುಕೊಂಡಿದ್ದ.

ಹೆಂಗಸು ಶೃತಿ ಮಾಡಿದ ವೀಣೆಯ ತಂತಿಯಂತೆ ಆ ತಂತಿಯ ಕೆಲ ಭಾಗಗಳನ್ನು ಕೆಲವು ಬಗೆಯಾಗಿ ಸ್ಪರ್ಶಿಸಿದರೆ ರಾಗಲಹರಿಯು ಏಳುತ್ತದೆ ಹಾಗೆಯೇ ಹೆಂಗಸಿನ ದೇಹದ ಕೆಲ ಪ್ರದೇಶಗಳನ್ನು ಕೆಲ ಬಗೆಗಳಲ್ಲಿ ಮುಟ್ಟಿದರೆ ಅವಳಲ್ಲಿ ರತ್ಯಾಸಕ್ತಿಯು ಉಂಟಾಗುತ್ತದೆ ಎಂದು ಕೇಳಿದ್ದ

ಹಾಗೆ ಶಂಕರ ಕನಕಳನ್ನು ಸ್ಪರ್ಶಿಸ ತೊಡಗಿದ ಅವಳು ಮೈ ಕೊಡವಿದಂತೆ ಮಾಡಿ ಪ್ರತಿರೋಧವನ್ನು ತೋರಿದಳು ತನ್ನ ಉತ್ಸಾಹದಲ್ಲಿ ಅವನು ನಿಲ್ಲಿಸಲಿಲ್ಲವೋ ಅಥವಾ ಬೇಕೆಂದೇ ಮುಂದುವರಿಸಿದನೋ ಅಂತೂ ಸ್ಪರ್ಶ ನಿಲ್ಲಲಿಲ್ಲ.

ಕನಕ ಅವನ ಕೈಗಳೆರಡನ್ನೂ ತನ್ನ ಕೈಗಳಿಂದ ಹಿಡಿದು ತೆಗೆದು ಹಾಕಿ "ಬೇಡಿ" ಎಂದಳು.

"ಯಾಕೆ, ಕನಕ."

"ಯಾಕೂ ಇಲ್ಲ ನನ್ನನ್ನು ಹಾಗೆಲ್ಲಾ ಮುಟ್ಟಬೇಡಿ".

"ಯಾಕೆ?".

"ಯಾಕೋ ನನಗದೆಲ್ಲಾ ಸರಿಹೋಗುವುದಿಲ್ಲ "

"ಹಾಗಲ್ಲ. ರತಿ ಪೂರ್ವದಲ್ಲಿ ನೀನೂ ಪ್ರಚೋದಿತಳಾಗಬೇಕು".

"ಅದೇನು ಪರವಾಯಿಲ್ಲ, ಬಿಡಿ".

"ನನ್ನ ಮಾತು ಕೇಳು, ಕನಕ. ರತಿಯು ದ್ವಿಮುಖವಾದುದು ಅದರಿಂದ ಇಬ್ಬರಿಗೂ ಸುಖವಾಗಬೇಕು. ಇಲ್ಲದಿದ್ದರೆ ಪೂರ್ಣವಾಗುವುದಿಲ್ಲ".

"ಅದೆಲ್ಲ ಬೇಡ".

"ಅಂದರೆ ಬೇಡ ಎನ್ನುತ್ತೀಯಾ?".

"ಬೇಡ ಎನ್ನುವುದಿಲ್ಲ. ನಿಮಗೆ ಬೇಕಾದ್ದು ಮಾಡಿಕೊಳ್ಳಿ".

"ಹಾಗಾದರೆ ನಿನಗೆ ಸುಖವಾಗುವುದಿಲ್ಲ, ಕನಕ".

"ನಿಮ್ಮ ಸುಖ ನೋಡಿ ಕೊಳ್ಳಿ. ನಾನೇನು ಬೇಡವೆನ್ನುತ್ತೇನೆಯೆ? ಅದಕ್ಕಿಂತ ನಿಮಗೇನು ಬೇಕು?".

ಅವನಿಗೆ ಅಷ್ಟೇ ಅಲ್ಲ. ಇನ್ನಷ್ಟು ಬೇಕಾಗಿತ್ತು. ಅದು ಸಿಕ್ಕುವುದಿಲ್ಲವೆಂದವಳು ಸ್ಪಷ್ಟವಾಗಿ ಹೇಳಿದ್ದಳು.

ಮನಸ್ಸಿನಲ್ಲಿ ಎಷ್ಟೇ ಆಸೆಯಿದ್ದರೂ ಅವಳೊಡನಿರಲು ಅವನಿಂದ ಆಗಲಿಲ್ಲ.

ಈ ಘಟನೆಯಾದನಂತರ ಬೇಕಾದ ಸುಖವನ್ನು ಪಡೆಯಲೇ ಬೇಕೆಂದು ನಿರ್ಧರಿಸಿದ. ಕೈಯಲ್ಲಿ ಹಣವಿರುವಾಗ ಏನು ಸಿಕ್ಕುವುದಿಲ್ಲ? ಹಣದಿಂದ ಸುಖವನ್ನು ಕೊಂಡುಕೊಳ್ಳಲು ನಿರ್ಧರಿಸಿದ.

ಉಪಲೀಬುರಜ್ ಬಳಿ ಸುಖ:ಬೆಲೆಗೆ ಸಿಗುವುದೆಂದು ಕೇಳಿದ್ದ. ಕತ್ತಲಾದನಂತರ ಅತ್ತ ಕಡೆಗೆ ಸುಳಿದಾಡಲು ತೊಡಗಿದ. ಒಂದೆರಡು ದಿನಗಳು ಓಡಿಯಾಡಿದ. ಬಾಗಿಲಲ್ಲಿಯೇ ನಿಂತಿರುವ ಬೀದಿಯ ಹೆಣ್ಣುಗಳನ್ನು ನೋಡಿದ. ಕಣ್ಣು ಹಾರಿಸಿ ಕರೆದರೂ ಹೋಗಲು ಹೆದರಿಕೆಯಾಗಿತ್ತು. ಹೋಗಿರಲಿಲ್ಲ.

ವಾಸುದೇವ ಎಷ್ಟು ಧೈರ್ಯವಾಗಿ ಹೋಗುತ್ತಿದ್ದ.

ಮೂರನೆಯ ದಿನವೋ ನಾಲ್ಕನೆಯ ದಿನವೋ ಶಂಕರ ಅಲ್ಲಿ ಸುಳಿದಾಡುವಾಗ ಏಳೂವರೆ ಗಂಟೆಯಾಗಿತ್ತು. ಒಂದು ಮನೆಯ ಬಾಗಿಲು ತೆರೆದಿತ್ತು. ಅಕ್ಕಪಕ್ಕ, ಎದುರುಗಡೆಗಳಲ್ಲಿ ಹುಡುಗಿಯರಾರೂ ನಿಂತಿರಲಿಲ್ಲ.

ಬಾಗಿಲು ತೆರೆದಿದ್ದ ಮನೆಯ ಜಗುಲಿಯ ಮೇಲೆ ಮುದುಕಿಯೊಬ್ಬಳು ಕುಳಿತಿದ್ದಳು. ಅವಳ ಮಗಳು ಎಂದು ಕಾಣುತ್ತದೆ. ತಾಯಿಯ ಹಿಂದೆ ನಿಂತಿದ್ದಳು. ಶಂಕರ ಆವಳ ಕಡೆ ನೋಡಿದ. ಅವಳು ನಕ್ಕು ನಾಚಿಗೆಯನ್ನು ತೋರಿ, ಒಳಗೆ ಹೊರಟುಹೋದಳು ಹೋಗಲೋ ಬೇಡವೋ ಎಂದು ಮನಸ್ಸು ಹಿಂದೆ ಮುಂದೆ ಎಳೆದಾಡುವುದರಲ್ಲಿ ಒಂದು ಹೆಜ್ಜೆ ಮುಂದಿಡುವುದು ತಪ್ಪಿದ.

ತಪ್ಪಿದ ಹೆಜ್ಜೆ ಸರಿಪಡಿಸಿಕೊಂಡು ಮುಂದಿಡುವುದರಲ್ಲಿ ಮುದುಕಿ "ಬಾಪ್ಪ" ಎಂದು ಕರೆದಳು.

ಶಂಕರ ;ಹಿಂದೆಮುಂದೆ ನೋಡಿದ. ಯಾರೂ ಕಂಡುಬರಲಿಲ್ಲ. ಆ ಮನೆಯನ್ನು ಪ್ರವೇಶಿಸಿದ.

ಅವನು ಒಳಗೆ ಹೋಗುತ್ತಲೇ ಮುದ ಕಿ ಮೇಲೆದ್ದು ಬಾಗಿಲು ಸರಿಸಿ ಹೇಳಿದಳು.

"ನಾವು ಮರ್ಯಾದಸ್ಥರು. ನೀವು ಸಂಕೋಚ ಪಡಬೇಕಾಗಿಲ್ಲ."

ಶಂಕರ ಸುತ್ತಲೂ ನೋಡಿದ ಅವನು ನಿಂತಿದ್ದುದು ಸಣ್ಣ ನಡುವೆ. ಎಡಗಡೆ ಪಕ್ಕದಲ್ಲಿ ಅಡಿಗೆಯ ಮನೆಯಲ್ಲಿಯೋ ಬಚ್ಚಲು ಮನೆ? ಬೆಳಗಿದ ಪಾತ್ರೆಗಳು ಕಂಡುಬರುತ್ತಿದ್ದವು ಎದುರು ಕೋಣೆಯ ಹೊಸಲಿನ ಮೇಲೆ ನಕ್ಕು ಹೋದವಳು ನಿಂತಿದ್ದಳು.

"ನೀನೇನು ರಾತ್ರಿಯಲ್ಲಾ ಇರುತ್ತೀಯೋ ಹೇಗಪ್ಪಾ"

ಮುದುಕಿಯ ಪ್ರಶ್ನೆಗೆ ಶಂಕರ ಹೇಗೆ ಉತ್ತರ ಕೊಟ್ಟನೋ ಅವನಿಗೇ ಗೊತ್ತಾಗಲಿಲ್ಲ.

"ಇಲ್ಲ. ನಾನು ಮನೆಗೆ ಹೋಗಬೇಕು."

"ಸರಿ. ಹಾಗಾದರೆ ಐದು ರೂಪಾಯಿ ಕೊಡು."

ಶಂಕರ ಹುಡುಗಿಯ ಕಡೆ ನೋಡಿದ. "ಮುದುಕಿ ಕೇಳಿದ್ದು ಕೊಟ್ಟು ಬಳಿಗೆ ಬಾ" ಎಂದು ಕರೆಯುವಂತಿತ್ತು ಅವಳ ದೃಷ್ಟಿ.

ಜೇಬಿಗೆ ಕೈ ಹಾಕಿ ಐದು ರೂಪಾಯಿ ನೋಟು ತೆಗೆದು ಅವಳ ಕೈಗೆ ಕೊಟ್ಟು ಹುಡುಗಿಯ ಕಡೆ ಹೋದ ಕೋಣೆಯನ್ನು ಪ್ರವೇಶಿಸಿದೊಡನೆಯೇ ಅವಳು ಬಾಗಿಲು ಹಾಕಿಕೊಂಡಳು.

ಕೋಣೆಯ ಬಹು ಭಾಗವನ್ನೆಲ್ಲಾ ಆವರಿಸಿದಂತೆ ಒಂದು ಚಪ್ಪರ ಗಾಲು ಮಂಚ. ಅದರ ಮೇಲೆ ಹಾಸಿಗೆ

ಬಂದ ಗಿರಾಕಿ ಹಾಸಿಗೆಯ ಮೇಲೆ ಕುಳಿತಿರುತ್ತಾನೆಂದುಕೊಂಡು ಹುಡುಗಿ ತಿರುಗಿದಳು. ಅವನು ನಿಂತಲ್ಲಿಯೇ ನಿಂತಿದ್ದ.

ಅವಳು ಕೈ ಹಿಡಿದು ಕರೆದುಕೊಂಡು ಹೋಗಿ ಮಂಚದ ಮೇಲೆ ಅವನನ್ನು ಕೂರಿಸಿ, ತಾನೂ ಪಕ್ಕದಲ್ಲಿ ಕುಳಿತುಕೊಂಡಳು.

"ನಿಮಗೆ ಬಹಳ ಸಂಕೋಚವೆಂದು ಕಂಡುಬರುತ್ತದೆ. ನೀವೇನು ಸಂಕೋಚ ಪಡಬೇಕಾಗಿಲ್ಲ."

ಶಂಕರ ಏನೋ ಮಾತನಾಡಬೇಕೆಂದು ಪ್ರಯತ್ನ ಪಡುತ್ತಿರುವಾಗಲೇ ಅವಳು ಕೇಳಿದಳು.

"ನೀವು ತಪ್ಪು ತಿಳಿದುಕೊಳ್ಳದಿದ್ದರೆ ನಾನೊಂದು ಮಾತು ಹೇಳಬೇಕು.''

''ಹೇಳು— —''

"ನೀವು ಕೊಟ್ಟ ಹಣ ಅಮ್ಮ ತೆಗೆದುಕೊಂಡಳು. ಅವಳಿಗೆ ಬಹಳ ದುರಾಸೆ. ಒಂದು ಕಾಸನ್ನೂ ನನ್ನ ಖರ್ಚಿಗೆ ಕೊಡುವುದಿಲ್ಲ. ನೀವೇನಾದರೂ ದಯಮಾಡಿ ನನಗೆ ಕೊಟ್ಟರೆ ಸಂತೋಷ.''

ಪುನಃ ಹಣ! ಮುದುಕಿಯ ಹತ್ತಿರವೇ ಹಣದ ವ್ಯವಹಾರ ಮುಗಿದು ಹೋಯಿತೆಂದುಕೊಂಡು ಒಳಗೆ ಬಂದರೆ ಪುನಃ ಇಲ್ಲಿ ಇದೇ ಮಾತು. ಈ ಹಾಳು ಪ್ರಪಂಚದಲ್ಲಿ ಹಣದ ಮಾತಲ್ಲದೇ ಬೇರೇನೂ ಇಲ್ಲವೇ ಇಲ್ಲವೋ ಏನೋ?

ಕೂಡಲೇ ಶಂಕರ ಏನೂ ಹೇಳದುದನ್ನು ನೋಡಿ ಅವಳು ಹೇಳಿದಳು

"ನೀವು ಕೂಡಲೇ ಬೇಕೆಂದು ಬಲಾತ್ಕಾರವಿಲ್ಲ. ನೀವು ಕೊಡದೇ ಇದ್ದರೂ ಪರವಾಯಿಲ್ಲ"

ಆ ಮಾತು ಸ್ವಲ್ಪ ಸಮಾಧಾನವನ್ನು ಉಂಟುಮಾಡಿತು.

"ನಿನಗೆ ಎಷ್ಟು ಬೇಕು?"

"ಎಷ್ಟಾದರೂ ಕೊಡಿ ನಿಮ್ಮ ಇಷ್ಟ."

ಜೇಬಿಗೆ ಕೈ ಹಾಕಿ ಶಂಕರ ಎರಡು ರೂಪಾಯಿ ತೆಗೆದು ಕೊಟ್ಟ. ಅವಳು ಎಷ್ಟೋ ಸಂತೋಷದಿಂದ ಅದನ್ನು ಸ್ವೀಕರಿಸಿ, ನೋಟುಗಳಾದರೂ ಸೊಂಟಕ್ಕೆ ಸಿಕ್ಕಿಕೊಂಡಳು.

ಆ ಹುಡುಗಿ ಅವನ ಹೆಗಲ ಮೇಲೆ ಕೈ ಹಾಕಿಕೊಂಡೇ ಕುಳಿತಿದ್ದಳು; ತನ್ನ ತೊಡೆ ಅವನ ತೊಡೆಗೆ ತಗಲುವಂತೆ ಕುಳಿತಿದ್ದಳು. ಶಂಕರ ಮುಂದು ವರಿಯಲಿ ಎಂದು ಪ್ರತೀಕ್ಷೆ ಮಾಡುತ್ತಾ ಕುಳಿತುಕೊಂಡಳು.

ಇನ್ನೇನು ತಾನೇ ಮಾಡಿಯಾಳು?

ಶಂಕರ ಸುಖವನ್ನು ಕೊಳ್ಳಲು ಬಂದಿದ್ದ. ಆದರೆ ಸುಖವನ್ನು ಪಡೆಯಲು ದೇಹ ಸಿದ್ಧವಾಗಿರಲಿಲ್ಲ.

ಪಕ್ಕದಲ್ಲಿ ಕುಳಿತಿರುವವಳು ಏನೆಂದು ಕೊಳ್ಳುತ್ತಾಳೆಯೋ? ಪತ್ತೇ ಕೊಡದೆ ಏನಾದರೂ ಮಾತನಾಡಿಸುತ್ತಾ ಸ್ವಲ್ಪ ಕಾಲವಾದರೂ ಕಳೆದು ನೋಡಬೇಕು.

"ನಿನ್ನ ಹೆಸರೇನು?"

"ಶ್ಯಾಮಲ."

ಅಂತೂ ಈ ಹುಡುಗಿಯರ ಹೆಸರುಗಳು ಚೆನ್ನಾಗಿರುತ್ತವೆ ಎಂದುಕೊಂಡ. ಹಾಗೆಂದರೆ ಶ್ಯಾಮಲ ಚೆನ್ನಾಗಿರಲಿಲ್ಲವೆಂದಲ್ಲ. ಚೆನ್ನಾಗಿಯೇ ಇದ್ದಳು.

"ಹೊರಗಡೆ ಇರುವುದು ನಿಮ್ಮಮ್ಮನೋ?".

"ಹೌದು, ನಮ್ಮಮ್ಮ."

"ನಿಮ್ಮದು ಯಾವೂರು".

"ಹತ್ತಿರದಲ್ಲಿ ಒಂದು ಹಳ್ಳಿ".

ಧೈರ್ಯ ತಂದುಕೊಂಡು ಕೇಳಿದ.

"ಹಳ್ಳಿಯಲ್ಲಿ ಸಾಕಷ್ಟು ದುಡ್ಡು ಬರುವುದಿಲ್ಲವೆಂದು ಇಲ್ಲಿಗೆ ಬಂದರೇನೋ?".

"ಅಲ್ಲ ನಾವು ಈ ಕಸುಬಿನವರಲ್ಲ. ಹಳ್ಳಿಯಲ್ಲಿ ನನಗೆ ಮದುವೆ

ಯಾಗಿತ್ತು. ನನ್ನ ಗಂಡ ಇಲ್ಲಿಗೆ ಕರೆತಂದು ಎರಡು ದಿನ ಸಂಸಾರ ಮಾಡು ತ್ತಿದ್ದ. ಅವನು ಓಡಿ ಹೋದ ಮೇಲೆ ವಿಧಿ ಇಲ್ಲದೇ ಹೀಗೆ — — —".

ಶಂಕರ ಶ್ಯಾಮಲೆಯ ಮುಖವನ್ನು ನೋಡಿದ. ನಿಜ ಹೇಳುತ್ತಿರುವ ಮುಗ್ಧ ಮುಖದಂತಿತ್ತದು.

ಇನ್ನೇನು ಮಾತನಾಡುವುದು? ಮಾತು ಮುಗಿದು ಹೋಯಿತು.

ಏನು ಮಾಡುವುದೆಂದು ಶಂಕರ ನೋಡುತ್ತಿರುವಾಗ ಶ್ಯಾಮಲ ಕೇಳಿ ದಳು.

"ಎಲೆ ಅಡಿಕೆ ಹಾಕುತ್ತೀರಾ?".

"ಹೂಂ"

ಅಡಿಕೆ ಕತ್ತರಿಸಿ ಕೈಗೆ ಕೊಟ್ಟಳು ಅವಳ ಕೈ ತಗುಲಿ ಅದು ಎಷ್ಟೋ ಮೃದುವಾಗಿರುವಂತೆ ಕಂಡಿತು. ಸುಣ್ಣ ಹಚ್ಚಿ, ನಾಲ್ಕೈದು ಎಲೆಗಳನ್ನು ಕೊಟ್ಟಳು. ಅನಂತರ ಕಪ್ಪಗಿದ್ದ ಯಾವುದೋ ಪದಾರ್ಥವನ್ನು ತೆಗೆದು ಕೊಟ್ಟು "ತಿನ್ನಿ" ಎಂದಳು.

"ಇದೇನು?"

ನಗುತ್ತಾ ಅಂದಳು.

"ನಾನು ಏನೇನೋ ತಿನ್ನಿಸಿ ಬಿಡುತ್ತೇನೆ ಅಂದು ಕೊಂಡೀರಿ ಏನು ಇಲ್ಲ. ಕಾಚು ತಿನ್ನಿ".

ಅವನೆಂದೂ ಕಾಚು ತಿಂದಿರಲಿಲ್ಲ.

"ಇದನ್ನು ಯಾಕೆ ತಿನ್ನುವುದು ?"

ಶ್ಯಾಮಲ ಕೈ ಬೆರಳಿಂದ ಅವನ ತುಟಿಯನ್ನು ಹಿಡಿದು ನುಲುಚಿ ಅಂದಳು.

"ಈ ತುಟಿಗಳು ಕೆಂಪಗಾಗುವುದಕ್ಕೆ."

ಅವಳೇ ಕಾಚು ತಿನ್ನಿಸಿದಳು. ಸುಮ್ಮನೆ ಕುಳಿತಿರುವವನನ್ನು ಸಮೀಪಿಸಿ ಕೆಂಪಗಾಗಿದ್ದ ಕೆಂದುಟಿಯನ್ನು ಕಚ್ಚಿ ಚುಂಬಿಸಿದಳು.

ಇನ್ನು ಶಂಕರ ಸಿದ್ಧವಾಗಿರಲಿಲ್ಲ.

ಶ್ಯಾಮಲೆ ಶಂಕರನನ್ನು ಹಾಸಿಗೆಯ ಮೇಲೆ ಮಲಗಿಸಿ ಆಲಂಗಿಸಿ ಹಿಡಿದುಕೊಂಡು ಮಲಗಿದಳು

ಅವನು ಮಲಗಿದ್ದ. ಹಾಗೆ ಮಲಗಿರುವುದು ಸುಖವಾಗಿತ್ತು.

ಎಷ್ಟು ಹೊತ್ತು ಕಳೆಯಿತೋ ಗೊತ್ತಿಲ್ಲ.

ಹೊರಗಡೆ ಮುದುಕಿ "ಶ್ಯಾಮಲಾ, ಶ್ಯಾಮಲಾ" ಎಂದು ಕೂಗಿದಳು.

ಶ್ಯಾಮಲೆ ಹೊರಗೆದ್ದು ಹೋಗಿ ಮಾತನಾಡಿಕೊಂಡು ಬಂದಳು.

"ಏನದು?"

"ನಾನು ಹೇಳಲಿಲ್ಲವೇ ? ನಮ್ಮಮ್ಮ ತಾಟಕಿ ಎಂದು. ಯಾಕೆ ಇಷ್ಟು ಹೊತ್ತು ಎನ್ನುತ್ತಾಳೆ".

ಶಂಕರ ಎದ್ದು ಕುಳಿತುಕೊಂಡು ನಿರಾಶೆಯಿಂದ ಹೇಳಿದ.

" ನಾನು ಹೋಗಲೇ?."

"ಹೋಗಬೇಡಿ. ಅವಳ ಬಾಯಿಗೆ ಇನ್ನೇನಾದರೂ ಹಾಕಿ ಬಿಡೋಣ."

"ಎಷ್ಟು ಕೊಡಬೇಕು ?"

"ನನಗೆ ನಿಮ್ಮನ್ನು ಕೇಳಲು ನಾಚಿಕೆಯಾಗುತ್ತದೆ, ಆದರೆ ವಿಧಿಯಿಲ್ಲ. ಇನ್ನೊಂದೈದು ಬಿಸಾಕಿ ಬಿಡಿ. ಬಾಯಿ ಮುಚ್ಚಿಕೊಂಡು ಬಿದ್ದಿರುತ್ತಾಳೆ."

ಅವನು ಐದು ರೂಪಾಯಿ ತೆಗೆದುಕೊಟ್ಟ. ಅವಳು ಹೊರಗೆ ಹೋಗಿ ಅದನ್ನು ತಾಯಿಯ ಬಳಿ ಕೊಟ್ಟು ಪುನಃ ಬಂದು ಬಾಗಿಲು ಹಾಕಿಕೊಂಡಳು.

ಶಂಕರ ಈ ಬಾರಿ ಧೈರ್ಯದಿಂದ ಪ್ರಯತ್ನಿಸ ಬೇಕೆಂದುಕೊಂಡ. ಅವಳು ಪುನಃ ಬಂದು ಮಲಗುತ್ತಲೇ ತಾನೇ ಆಲಂಗಿಸಿದ. ಸ್ಥನದ ಮೇಲೆ ಕೈ ಹಾಕಿದ. ಚುಂಬಿಸಿದ.

ಇಲ್ಲ. ಅವನಿಂದ ರತಿ ಸಾಧ್ಯವಾಗಲಿಲ್ಲ.

"ನಿಮಗೆ ಇದು ಹೊಸದೆಂದು ಕಾಣುತ್ತದೆ".

"ಹೌದು. ನಾನು ಹೀಗೆ ಬಂದುದು ಇದೇ ಮೊದಲು".

ಮೊದಲಬಾರಿ ಪ್ರಯತ್ನಿಸುತ್ತಿರುವವನನ್ನು ಗಾಬರಿಗೊಳಿಸುವುದು ಶ್ಯಾಮಲಿಗೆ ಸರಿತೋರಲಿಲ್ಲ. ಇಲ್ಲದಿದ್ದರೆ ಹಿಂದೆ ವಾಸುದೇವನ ಜೊತೆಯಲ್ಲಿ

ಹೋಗಿದ್ದಾಗ ವಿಮಲ ಸರೋಜಿಯರು ಮಾಡಿದಂತೆ ಮಾಡಬಹುದಾಗಿತ್ತು.

ಕನಕಳ ಶರೀರವನ್ನು ಸ್ಪರ್ಶಿಸುತ್ತಿದ್ದಂತೆ ಶ್ಯಾಮಲೆಯನ್ನು ಮುಟ್ಟಿದ. ಅವಳಂತೆ ಇವಳು ಆತಂಕಪಡಿಸಲಿಲ್ಲ. ನಾಚಿಕೆ ಬಿಟ್ಟು ತನ್ನ ಬೆನ್ನಿನ ಮೇಲೆ ಅವಳ ತೋಳು ಹಾಕಿಕೊಂಡ. ಶ್ಯಾಮಲ ಆಲಂಗಿಸಿದಳು. ಎದೆಯ ಮೇಲೆ ಕೈಯಿಟ್ಟುಕೊಂಡ. ಅವನ ಮನದಿಚ್ಛೆಯಂತೆ ಸ್ಪರ್ಶಿಸಿದಳು.

ಆದರೂ ಶಂಕರ ರತಿಗೆ ಸಿದ್ಧವಾಗಲಿಲ್ಲ.

ಇನ್ನು ಇಲ್ಲಿ ಕುಳಿತಿರುವುದು ಪ್ರಯೋಜನವಿಲ್ಲ. ತನಗೆ ಪುಂಸತ್ವವೇ ಹೋರಟು ಹೋಗಿದೆಯೋ ಏನೋ ? ದೀಪ ಉರಿಯುತ್ತಿದ್ದ ಆ ಕೋಣೆ ಶಂಕರನಿಗೆ ಕತ್ತಲೇ ಕೋಣೆಯಂತೇಭಾಸವಾಯಿತು.

ಎದ್ದು ನಿಂತುಕೊಂಡು ಹೇಳಿದ.

"ನಾನಿನ್ನು ಹೊರಡುತ್ತೇನೆ."

ಹೊರಡುವುದಲ್ಲದೆ ಇನ್ನೇನೂ ಸಾಧ್ಯವಿಲ್ಲವೆಂದು ಶ್ಯಾಮಲೆಯೂ ಅರ್ಥ ಮಾಡಿದ್ದಳು.

"ಇನ್ನೊಂದು ದಿನ ಯಾವಾಗಲಾದರೂ ಬರುತ್ತೀರಾ ?"

"ಹೂ !"

ಅವಳು ಶಂಕರನನ್ನು ಆಲಂಗಿಸಿ, ಮುತ್ತಿಟ್ಟು ಕಿವಿಯಲ್ಲಿ ಹೇಳಿದಳು.

"ಮೊದಲ ದಿನ ಇದೇ ರೀತಿ. ಹೆದರಿ ಕೊಳ್ಳಬೇಡಿ."

ಆರಾತ್ರಿ ಮನೆಗೆ ಬರುವ ವೇಳೆಗೆ ಹೊತ್ತಾಗಿತ್ತು. ಮಾಮೂಲಾಗಿ ಬರುವುದಕ್ಕಿಂತಲೂ ಒಂದು ಗಂಟೆ ಸಾವಕಾಶ ವಾಗಿತ್ತು.

ಕಾದಿದ್ದ ಕನಕ ಕೇಳಿದಳು.

"ಈ ದಿನ ಬಹಳ ಗೊತ್ತಾಯಿತಲ್ಲವೇ ?"

"ಯಾರೋ ಸ್ನೇಹಿತರು ಸಿಕ್ಕಿದರು. ಮಾತನಾಡುತ್ತಾ ಹಾಗೇ ತಿರುಗಿಕೊಂಡು ಬಂದೆ."

"ಸರಿ. ಊಟಕ್ಕೇಳಿ."

ಊಟವಾಯಿತು. ಶಂಕರ ಹೋಗಿ ಮಲಗಿಕೊಂಡ. ಕನಕಳೂ ಬಂದಳು. ಬರುತ್ತಾ ದೀಪವಾರಿಸಿ ಬಂದು ಪಕ್ಕದಲ್ಲಿ ಮಲಗಿಕೊಂಡಳು.

ಅವನ ಮನಸ್ಸಿನಲ್ಲಿ ಬಗೆಬಗೆಯ ಆಲೋಚನೆಗಳು ಬಂದುವು. ಹೆಂಗಸು ಪಕ್ಕದಲ್ಲಿ ಮಲಗಿದ್ದಾಳೆ. ಆದರೇನು ಪ್ರಯೋಜನ. ತನಗೆ ಪುಂಸತ್ವವೇ ಇಲ್ಲ. ಈ ಹಾಳು ಹೆಂಗಸಿನಿಂದ ತನ್ನ ಜೀವನವೇ ವ್ಯರ್ಥವಾಯಿತು.

ಆ ಆಲೋಚನೆ ಒಂದು ಕ್ಷಣಮಾತ್ರ. ಪರೀಕ್ಷಿಸಿ ನೋಡೋಣವೆಂದು ತೋರಿತು. ಕನಕಳನ್ನು ಮುಟ್ಟಿದ. ಸುಮ್ಮನಿದ್ದಳು.

ಅವನಿಗೇ ಆಶ್ಚರ್ಯವಾಯಿತು. ಸ್ವಪ್ನದಂತೆ ಭಾಸವಾಯಿತು.

ಕನಕಳ ದೇಹ ಮೈಗೆ ತಗುಲುತ್ತಲೂ ಉತ್ಸಾಹ ಉಂಟಾಯಿತು. ರತ್ಯಾನಂತರದಲ್ಲಿ ಶಂಕರನಿಗೆ ಧೈರ್ಯವಾಯಿತು.

ತನ್ನ ಪುಂಸತ್ವ ಲೋಪವಾಗಿಲ್ಲವೆಂದು ಗೊತ್ತಾಗುತ್ತಲೇ ಶಂಕರ ಪುನಃ ಉಪ್ಲೀಬುರಜ಼ನ ಕಡೆ ಹೋದ. ಶ್ಯಾಮಲಿಯ ಮನೆಗೆ ಹೋಗಲಿಲ್ಲ. ಅಲ್ಲಿ ಹೋಗುವುದಕ್ಕೆ ನಾಚಿಕೆಯಾಯಿತು. ಬೇರೆಬೇರೇ ಮೂರು ನಾಲ್ಕು ಮನೆಗಳಿಗೆ ಹೋದ. ಅಲ್ಲೆಲ್ಲಾ ಹೆಚ್ಚುಕಡಿಮೆ ಶ್ಯಾಮಲೆಯ ಮನೆಯಲ್ಲಿ ಆದಂತೆಯೇ ಆಯಿತು.

ಕನಕ! ಹಾಳು ಕನಕ. ಅವಳಲ್ಲದೇ ಮತ್ತಾವಹೆಂಗಸಿನಿಂದಲೂ ಅವನಿಗೆ ಪ್ರಯೋಜನವಿಲ್ಲ. ಬೇಕಾಗಿದ್ದರೂ ಬೇಡದಿದ್ದರೂ ಈ ಹಾಳು ಹೆಂಗಸನ್ನೇ ಕಟ್ಟಿಕೊಂಡು ಬಾಳಬೇಕಾಗಿದೆ.

ಇಲ್ಲದಿದ್ದರೆ ಸನ್ಯಾಸ ತೆಗೆದುಕೊಳ್ಳಬೇಕು. ಸನ್ಯಾಸ ತೆಗೆದು ಕೊಳ್ಳಲು ಅವನು ತಯಾರಾಗಿರಲಿಲ್ಲ.

ಎಷ್ಟೋಬಾರಿ ಕನಕಳನ್ನು ಬಿಟ್ಟು ಹೊರಟು ಹೋಗಬೇಕೆಂದು ಶಂಕರನಿಗೆ ತೋರುತ್ತಿತ್ತು. ಆದರಿಂದ ಅವನು ಹೋಗಿರಲಿಲ್ಲ.

# ೧೭

ಒಂದು ದಿನ ರಾತ್ರಿ ಮಾಮೂಲಾಗಿ ಅಂಗಡಿಯ ಬಾಗಿಲನ್ನು ಹಾಕಿಕೊಂಡು ಮನೆಗೆ ಬಂದ. ಮನೆಯಲ್ಲಿ ದೀಪಗಳು ಉರಿಯುತ್ತಿದ್ದವು. ಮುಂಬಾಗಿಲು ಸೇರಿಸಿತ್ತು. ಬಾಗಿಲು ಸರಿಸಿಕೊಂಡು ಒಳಗೆ ಹೋದ. ಯಾರೂ ಇರಲಿಲ್ಲ.

ಕನಕ ಎಲ್ಲಿಗೆ ಹೋಗಿದ್ದಾಳೆ ?

ಹಾಗೆ ಕನಕ ಎಷ್ಟೋ ದಿನಗಳು ಮನೆಯಲಿಲ್ಲದುದು ಅಭ್ಯಾಸವಾಗಿತ್ತು. ಆಗೆಲ್ಲಾ ಅವನು "ಕನಕ-ಕನಕಾ" ಎಂದು ಕೂಗಿಕೊಂಡಿದ್ದ. ಕೆಲವು ಬಾರಿ ಅವನು ಕರೆದ ನಿಮಿಷದೊಳಗಾಗಿ ಬರುತ್ತಿದ್ದಳು. ಮತ್ತೆ ಕೆಲವು ಬಾರಿ "ಓ, ಬಂದೆ" ಎನ್ನುತ್ತಿದ್ದಳು. ಹಾಗೆಂದವಳು ಬರುವುದು ಎರಡು ನಿಮಿಷವಾಗುತ್ತಿತ್ತು.

ಈ ದಿನವೂ ಹಾಗೆಯೇ ಕರೆಯಬೇಕೆಂದು ತೋರಿತು. 'ಕರೆಯುವುದು ಬೇಡ-ಎಷ್ಟು ಹೊತ್ತಿಗೆ ಬರುತ್ತಾಳೆಯೋ ನೋಡೋಣ" ವೆಂದು ತೋರಿತು. ಅವನು ಕರೆಯಲಿಲ್ಲ. ಅವಳು ಬರುವುದು ಹತ್ತು ಹದಿನೈದು ನಿಮಿಷಗಳಾದುವು.

ಆದರೆ ಅದು ಹತ್ತು ಹದಿನೈದು ಗಂಟೆಗಳಂತೆ ಶಂಕರನಿಗೆ ಭಾಸ ವಾಯಿತು.

ವರಾಂಡದಲ್ಲಿಯೇ ಕಾದು ನಿಂತು ಕೊಳ್ಳುವುದು ಅವನಿಗೆ ಸರಿಯಾಗಿ ಕಂಡುಬರಲಿಲ್ಲ. ಒಳಗೆ ಹಜಾರದಲ್ಲಿ ಹೋಗಿ ನಿಂತುಕೊಂಡ. ಕಿಟಕಿಯಲ್ಲಿ ಬಟ್ಟೆಯ ಪರದೆಯ ಸಂದಿಯಲ್ಲಿ ನೋಡುತ್ತಾ ನಿಂತುಕೊಂಡ.

ಬಲು ಹೊತ್ತು ಕಾದುನಿಂತ ಮೇಲೆ ಮುರಿಗೆಪ್ಪನ ಮನೆಯ ಹಿಂದಿನ ವರಾಂಡಕ್ಕೆ ಕನಕ ಬಂದಳು. ಇನ್ನೇನು ಬರುತ್ತಾಳೆ ಎಂದು ಕೊಂಡಿದ್ದಾಗ ನಿಂತುಕೊಂಡಳು. ಶಂಕರ ನಿರೀಕ್ಷಿಸಿಯೇ ಇರಲಿಲ್ಲ. ಅವಳ ಹಿಂದೆ ಮುರಿಗೆಪ್ಪನೂ ಬಂದ. ಕನಕ ವಾಪ್ಸುಬರುವ ಮೊದಲು ಅವಳನ್ನು ಬರಸೆಳೆದು ಅಪ್ಪಿ ಮುತ್ತಿಟ್ಟ.

ಇಷ್ಟು ಹೊತ್ತು ಕನಕ ಒಡನಿದ್ದರೂ ಅವನಿಗೆ ತೃಪ್ತಿಯಾಗಿರಲಿಲ್ಲ ವೆಂದು ಕಂಡುಬರುತ್ತದೆ.

ಇನ್ನೂ ಅದನ್ನು ನೋಡಲಾಗಲಿಲ್ಲ. ಇನ್ನೂ ಅಲ್ಲಿ ನಿಂತಿರಲಾಗಲಿಲ್ಲ.

ಅವನ ತಲೆ ತಿರುಗಿದಂತಾಯಿತು. ಕಣ್ಣು ಕತ್ತಲೆ ಕಟ್ಟಿಕೊಂಡು ಬಂದು ಹಾಗಾಯಿತು.

ಅಲ್ಲಿಂದ ಬಂದು ಹಜಾರದಲ್ಲಿಯೇ ಇದ್ದ ಕುರ್ಚಿಯಮೇಲೆ ಕುಳಿತು ಕೊಂಡ. ಸುಮ್ಮನೆ ಕುಳಿತು ಕೊಳ್ಳುವುದು ಚೆನ್ನಾಗಿರುವುದಿಲ್ಲವೆಂದು ಸಿಗರೇಟು ಹಚ್ಚಿಕೊಂಡ.

ಮನೆಯಲ್ಲಿ ರುದ್ರಮ್ಮ ಇದ್ದಾಳೆಯಲ್ಲ. ಅವಳಿರುವಾಗ ಮುರಿಗೆಪ್ಪನಿಗೆ ಎಲ್ಲಿಯ ಧೈರ್ಯ? ಹೆಂಡತಿ ತವರು ಮನೆಯಿಂದ ಬಂದೊಡನೆಯೇ ರುದ್ರಮ್ಮ ಹೇಳಿಬಿಡುತ್ತಾಳೆಂದು ಹೆದರಿಕೆ ಇಲ್ಲವೆ? ಅದನ್ನು ಯೋಚಿಸಲು ಅವಕಾಶವಾಗಲಿಲ್ಲ.

ಅನಂತರ ಕನಕ ಬರುವುದು ಹೆಚ್ಚು ಹೊತ್ತಾಗಲಿಲ್ಲ. ಬೇಗ ಬಂದಳು.

ಅವಳು ಹೋಗುವಾಗ ಮುಂದಿನ ಬಾಗಿಲು ಸೇರಿಸಿಕೊಂಡು ಹೋಗಿದ್ದಳು. ಈಗದು ತೆರೆದಿದ್ದುದನ್ನು ನೋಡಿದೊಡನೆಯೇ ಶಂಕರ ಬಂದಿರ

ಬಹುದೆಂದು ಅವಳಿಗೆ ಸಂದೇಹ ಬಂದಿತು. ಒಳಗೆ ಬಂದು ನೋಡಿದೊಡ ನೆಯೇ ಸಂದೇಹ ಸ್ಥಿರವಾಯಿತು.

ಬಂದವಳೇ ಕೇಳಿದಳು.

"ಓಹೋ ! ಈ ದಿನ ಬೇಗ ಬಂದು ಬಿಟ್ಟಿದ್ದೀರಿ?".

ಶಂಕರ ಅದಕ್ಕೇನೂ ಉತ್ತರ ಹೇಳಲಿಲ್ಲ. ಆದರೆ ಅವಳ ಕಡೆ ನೋಡಿದ.

ಕನಕ ಬಳಿಯ ಜಾರ್ಜೆಟ್ ಸೀರೆಯನ್ನು ಉಟ್ಟಿದ್ದಳು. ಆ ಬಟ್ಟೆ ಸೊಳ್ಳೆ ಪರದೆಯಂತೆ ಜಾಳು ಬಟ್ಟೆ. ಅನೇಕ ಸುತ್ತುಗಳನ್ನು ಸುತ್ತಿಕೊಂಡಿ ರದಿದ್ದರೆ ಸೊಂಟದ ಕೆಳಗಿನ ಭಾಗವೆಲ್ಲವೂ ಆ ಜಾಳು ಬಟ್ಟೆಯಲ್ಲಿ ಕಂಡು ಬರುತ್ತಿದ್ದಿತೋ, ಏನೋ? ಆದರೆ ಭುಜದ ಮೇಲೆ ಇದ್ದುದು ಒಂದು ಪದರವು ಮಾತ್ರ. ಹಾಕಿಕೊಂಡಿದ್ದ ಅದೇ ಬಟ್ಟೆಯ ಬ್ಲೌಸ್ ಸ್ಪಷ್ಟವಾಗಿ ಕಂಡು ಬರುತ್ತಿತ್ತು. ಬ್ಲೌಸ್ ಮತ್ತು ಕಟ್ಟಿದ್ದ ಸೀರೆಯು ನಡುವಿನ ಕಡೆ ಪ್ರದೇಶವು ಇಣಕಿ ನೋಡುತಿತ್ತು.

ಅವಳು ನಗುತ್ತಿದ್ದರೂ ಕಟ್ಟಿ ಕೊಂಡಿದ್ದ ಬಿಳುಪು ಬಣ್ಣದ ಸೀರೆಯಂ ತೆಯೇ ಮುಖವು ಬಿಳಿಚಿಕೊಂಡಿತ್ತು. ಸೀರೆಯ ಬಿಳುಪು ಮುಖದ ಮೇಲೆ ಯೂ ಪ್ರತಿ ಬಿಂಬಿಸಿರಬೇಕು.

ಶಂಕರನ ಸೂಕ್ಷ್ಮವಾದ ಕಣ್ಣುಗಳು ಮತ್ತೊಂದು ಅಂಶವನ್ನು ಗಮ ನಿಸಿದುವು. ಅದು ಬ್ಲೌಸ್‌ನೊಳಗಿನಿಂದ ಕಂಡು ಬರುತ್ತಿದ್ದ ಚಚ್ಚೌಕವಾದ ಯಾವುದೋ ಪದಾರ್ಥ. ಯಾರೇ ನೋಡಿದರೂ ಅದು ನೋಟೆಂದು ಹೇಳ ಬಹುದಾಗಿತ್ತು. ಅಷ್ಟಗಲ ಇರುವ ಅದು ನೂರು ರೂಪಾಯಿ ನೋಟೇ ಆಗಿರ ಬೇಕು.

ಅವಳು ಕೇಳಿದ ಪ್ರಶ್ನೆಗೆ ಉತ್ತರಕೊಡುವ ಬದಲು ಪ್ರಶ್ನೆಯನ್ನೇ ಕೇಳಿದ.

"ಎಲ್ಲಿ ಹೋಗಿದ್ದೆ."

ಅವನ ಧ್ವನಿಯು ಉದ್ರೇಕ ಪೂರ್ಣವಾಗಿತ್ತು. ಅವಳು ಶಾಂತವಾಗಿ ಉತ್ತರ ಕೊಟ್ಟಳು.

[೨೮]

"ರುದ್ರಮ್ಮನೊಂದಿಗೆ ಮಾತನಾಡುತ್ತಿದ್ದೆ. ನೀವು ಬಂದು ಎಷ್ಟು ಹೊತ್ತಾಯಿತು."

"ನಾನು ಯಾವಾಗ ಬಂದರೆ ನಿನಗೇನು? ನೀನು ಅವರ ಮನೆಗೆ ಹೋಗ ಬೇಡವೆಂದು ನಿನಗೆಷ್ಟು ಬಾರಿ ಹೇಳಿಲ್ಲ".

"ಇಲ್ಲಿ ಕುಳಿತು-ಕುಳಿತು ಬೇಜಾರಾದರೆ ಏನು ಮಾಡಬೇಕು? ಹೋಗಿ ಆ ಹೆಣ್ಣು ಹೆಂಗಸೊಡನೆ ಮಾತನಾಡುತ್ತಾ ಕುಳಿತುಕೊಂಡರೆ ಏನು ಗಂಟು ಹೋಗುವುದೋ ನನಗೆ ಅರ್ಥವಾಗುವುದಿಲ್ಲ.

"ನಿನಗೇಕೆ ಅರ್ಥವಾಗುವುದಿಲ್ಲ. ಎಲ್ಲಾ ಅರ್ಥವಾಗುತ್ತದೆ. ನಿನ್ನ ಬ್ಲೌಸ್‌ನಲ್ಲಿರುವುದೇನು?"

ಕನಕ ನೋಡಿಕೊಂಡಳು. ಮುರಿಗೆಪ್ಪ ಕೊಟ್ಟ ನೋಟನ್ನು ಬ್ಲೌಸ್ ನೊಳಗೆ ಹಾಕಿಕೊಂಡಳು. ಅಲ್ಲಿ ಹಾಕಿಕೊಂಡಿರದಿದ್ದರೆ ಚೆನ್ನಾಗಿತ್ತು. ಆದರೆ ಈ ಮನುಷ್ಯ ಚಿತ್ರಗುಪ್ತರಂತೆ ಇಲ್ಲಿ ಬಂದು ಕಾದು ಕುಳಿತಿರುತ್ತಾ ನೆಂದು ಯಾರಿಗೆ ತಾನೇ ಗೊತ್ತಿತ್ತು?

"ಅದೇ! ಸಾಯಂಕಾಲ ಪೇಟೆಗೆ ಹೋಗಬೇಕೆಂದುಕೊಂಡೆ. ಅದರಿಂ ದಲೇ ಅಲಂಕಾರ ಮಾಡಿಕೊಂಡು, ಹಣ ಕೂಡಾ ತೆಗೆದಿಟ್ಟುಕೊಂಡೆ. "ಬೇಜಾರು ನೀನೂ ಬಾ" ಎಂದು ರುದ್ರಮ್ಮನನ್ನು ಕರೆದೆ. ಬರುತ್ತೇನೆಂದಿ ದ್ದವಳು ಯಾಕೋ ಬರುವುದಿಲ್ಲವೆಂದಳು. ಮೊದಲು ತೆಗೆದಿಟ್ಟು ಕೊಂಡಿದ್ದ ನೋಟು ಇನ್ನೂ ಅಲ್ಲಿಯೇ ಇದೆ."

"ಬೆಳಿಗ್ಗೆ ಮೂರು ಕಾಸೂ ಇಲ್ಲವೆಂದು ಹತ್ತು ರೂಪಾಯಿ ತೆಗೆದು ಕೊಂಡೆಯಲ್ಲಾ."

"ನೀವು ಕೇಳುವುದೆಲ್ಲಾ ಹೀಗೆಯೇ. ಮನೇ ಖರ್ಚಿಗೆ ಹಣವಿಲ್ಲ ವೆಂದು ಕೇಳಿ ತೆಗೆದುಕೊಂಡೆ. ಹಾಗೆಂದ ಮಾತ್ರಕ್ಕೆ ನನ್ನ ಬಳಿ ಮೂರು ಕಾಸೂ ಇರುವುದಿಲ್ಲವೇ?"

"ಹಾಗಲ್ಲ, ಕನಕ— —"

"ಇನ್ನು ಹೇಗೆ?"

ಇನ್ನು ಹೇಗೆಂದು ಅವನು ಹೇಳುವುದರಲ್ಲಿ ಕನಕ ಅವನ ಮುಖವನ್ನು

ನೋಡಿದಳು. ತಪ್ಪು ಮಾಡಿದವರು ಸಿಕ್ಕಿಬಿದ್ದಂತೆ ಆಯಿತವಳಿಗೆ. ಅದ ರಿಂದ ಅಪಮಾನವಾಯಿತು. ಅದರೊಂದಿಗೆ ದುಃಖ ಬಂದಿತು.

ಕಟ್ಟಿಕೊಂಡಿದ್ದ ಕೊರಳು ಸರಿಮಾಡಿಕೊಳ್ಳುತ್ತಾ ಹೇಳಿದಳು

"ನೀವು ಇಲ್ಲದ ಸಂದೇಹಗಳನ್ನು ಗಂಟು ಹಾಕಿಕೊಂಡು ಪೇಚಾಡು ತ್ತೀರಿ. ಹೊತ್ತಾಯಿತು, ಏಳೀ ಅಂದ್ರೆ. ಊಟ ಮಾಡೋಣ."

"ಮಾಡೋಣ, ಸ್ವಲ್ಪ ನಿಂತುಕೋ. ಆ ನೋಟು ಎಲ್ಲಿಯದು ಹೇಳು."

"ಎಲ್ಲಿಯದು, ನನ್ನ ಹತ್ತಿರ ಇದ್ದದ್ದೇ."

"ಅಲ್ಲ, ಮುರಿಗೆಪ್ಪ ನಿನಗೆ ಕೊಟ್ಟ. ಹೌದೋ ಇಲ್ಲವೋ."

"ನಿಮ್ಮನ್ನು ಸಂಶಯ ಪಿಶಾಚಿ ಹಿಡಿದು ಬಾಧಿಸುತ್ತಿದೆ."

"ಇದುವರೆವಿಗೆ ಸಂಶಯ ಪಿಶಾಚಿ ಹಿಡಿದು ಬಾಧಿಸುತ್ತಿತ್ತು. ಆದರೆ ಈ ದಿನ ಸಂಶಯ ಹೋಗಿ ದೃಢವಾಯಿತು. ನೀನು ಇಷ್ಟು ಹೊತ್ತೂ ಮುರಿಗೆಪ್ಪನೊಂದಿಗೆ— — — —"

"ಈ ಹಾಳು ಗಂಡಸರು ಯಾವಾಗಲೂ ಹೀಗೇ. ಸಂಶಯ, ಸಂಶ— — — —

"ಇನ್ನು ಸುಳ್ಳು ಹೇಳಿ ಪ್ರಯೋಜನವಿಲ್ಲ. ನೀನು ವರಾಂಡದಲ್ಲಿ ಬರುತ್ತಿರುವಾಗ— — —ಅಬ್ಬಾ. ನಾನೇ ನೋಡಿದೆ."

ಅವನು ಹೇಳಿದಂತೆ ಇನ್ನು ಮುಚ್ಚಿಡುವುದು ಪ್ರಯೋಜನವೇ ಇರ ಲಿಲ್ಲ. ಶಂಕರ ನೋಡಿಬಿಟ್ಟಿದ್ದಾನೆ. ಏನು ಮಾಡುವುದು, ಏನು ಹೇಳು ವುದು. ಯಾವುದೂ ಕನಕಳಿಗೆ ತೋರಲಿಲ್ಲ.

ಅವಳು ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡಳು. ಕ್ಷಣಕಾಲ ಹಾಗೆ ನಿಂತಿದ್ದು ಸರಸರನೆ ಮಲಗುವ ಮನೆಗೆ ಹೋದಳು. ಅವಳು ಹಾಸಿ ಗೆಯ ಮೇಲೆ ಬಿದ್ದುಕೊಂಡ ಶಬ್ದ ಹೊರಗೆ ಕೇಳಿಸಿತು.

ಶಂಕರ ಬಹಳಹೊತ್ತು ಅಲ್ಲಿ ಕುಳಿತಿದ್ದ. ಸಿಗರೇಟಿನ ಮೇಲೆ ಸಿಗರೇಟು ಸೇದುತ್ತಿದ್ದ. ಅದರ ಹೊಗೆಯಂತೆ ಅವನ ತಲೆಯಲ್ಲಿ ವಿಪುಲವಾದ ಆಲೋ ಚನೆಗಳು ಬಂದುವು. ಹಾಳು ಕನಕಳನ್ನು ಅಲ್ಲಿಯೇ ಬಿಟ್ಟು, ಬಿಟ್ಟು ದೂರ ವಾಗಿ ಎಲ್ಲಿಯಾದರೂ ಹೊರಟು ಹೋಗೋಣವೆಂದು ತೋರಿತು.

ಹಾಗೆಯೇ ಎದ್ದು ಹೊರಟು ಹೋಗುತ್ತಿದ್ದನೋ ಏನೋ ? ಆದರೆ ಅಷ್ಟರಲ್ಲಿ ಒಳಗಿನಿಂದ, ಮಲಗುವ ಮನೆಯ ಒಳಗಿನಿಂದ, ಒಂದು ಶಬ್ದ ಕೇಳಿಸಿತು

ಕನಕ ಬಿಕ್ಕಿ ಬಿಕ್ಕಿ ಅಳುವ ಶಬ್ದ ಕೇಳಿಸಿತು

ಎದ್ದು ಹಜಾರದ ದೀಪವಾರಿಸಿದ. ಮಲಗುವ ಮನೆಯಲ್ಲಿಯೂ ದೀಪ ವಿರಲಿಲ್ಲ. ಹಾಸಿಗೆಯ ಮೇಲೆ ಹೋಗಿ ಕುಳಿತುಕೊಂಡ.

ಶಂಕರ ತನ್ನನ್ನು ಸಮಾಧಾನ ಮಾಡುತ್ತಾನೆಂದು ಕೊಂಡಳು, ಕನಕ. ಆದರವನು ಸಮಾಧಾನ ಮಾಡಲಿಲ್ಲ. ಸುಮ್ಮನೆ ಕುಳಿತುಕೊಂಡ.

ಕನಕ ಅಳುತ್ತಲೇ ಇದ್ದಳು. ಆ ಅಳುವ ಧ್ವನಿಯನ್ನು ಶಂಕರ ಕೇಳು ತ್ತಿದ್ದ. ಆಧ್ವನಿಯು ಅವನಿಗೆ ಹಿತಕರವಾಗಿತ್ತು. ಅವಳು ನೋವಿನಿಂದ ಅಳುತ್ತಿದ್ದಾಳೆಂಬುದು ಅವನಿಗೆ ಸಂತೋಷಕರವಾಗಿತ್ತು.

ಅವಳು ತನ್ನನ್ನು ಎಷ್ಟೋ ಗೋಳು ಗುಟ್ಟಿಸಿದ್ದಾಳೆ. ಅವಳು ಗೋಳು ಗುಟ್ಟಲಿ. ಅಳಲಿ, ಚೆನ್ನಾಗಿ ಅಳಲಿ.

ಅವಳು ಬಿಕ್ಕಿ ಅಳುವ ಧ್ವನಿಯು ಅವನಿಗೆ ಹಿತಕರವಾಗಿತ್ತು.

ಆ ಮನೆಯಲ್ಲಿ ಮಲಗಲು ಬೇರೆ ಸ್ಥಳವಿಲ್ಲದುದರಿಂದ ಶಂಕರ ಅದೇ ಹಾಸಿಗೆಯ ಮೇಲೆ ಮಲಗಿದ್ದ. ಅವಳು ಅಲ್ಲಿ ಮೊದಲೇ ಬಿದ್ದು ಕೊಂಡಿ ದ್ದಳು

ಬೆಳಗಾಗ ಶಂಕರನಿಗೆ ಎಚ್ಚರವಾದ ನಂತರವೂ ಕನಕಳು ಎದ್ದಿರಲಿಲ್ಲ. ಸಾಧಾರಣವಾಗಿ ಅವಳು ಶಂಕರನಿಗಿಂತ ಮೊದಲೇ ಏಳುತ್ತಿದ್ದಳು. ಆಕಸ್ಮಾತ್ ಒಂದೊಂದು ದಿನ ಅವಳಿಗಿಂತ ಮೊದಲು ಶಂಕರನಿಗೆ ಎಚ್ಚರ ವಾಗಿದ್ದರೆ ಕನಕಳನ್ನು ಕೂಗುತ್ತಿದ್ದನು. ಅವಳು ಒಲೆ ಹತ್ತಿಸಿ, ಕಾಸಿದ ನೀರಿಗೆ ಪುಡಿಹಾಕಿ, ಹಾಲು ಕಾಯುವುದಕ್ಕಿಟ್ಟು ಗಂಡನನ್ನು ಎಬ್ಬಿಸು ತ್ತಿದ್ದಳು. ಆದರೆ ಈದಿನ ಶಂಕರ ಬೇಗ ಎಚ್ಚರವಾದರೂ ಮಾಮೂಲಿನಂತೆ ಅವಳನ್ನು ಎಬ್ಬಿಸಲಿಲ್ಲ ಅವಳು ಎದ್ದು ಕಾಫೀ ಮಾಡುತ್ತಾಳೆಯೇ ಎಂದು ಸ್ವಲ್ಪಹೊತ್ತು ನೋಡಿದ. ಅವಳಲ್ಲಿ ಏಳುವ ಸೂಚನೆಗಳು ಕಂಡುಬರದೇ ಇರುವುದನ್ನು ಗಮನಿಸಿ ಎದ್ದು ಹೊರಗೆ ಹೊರಟು ಹೋದ.

ಕನಕ ಕಾಫೀ ಮಾಡಿಟ್ಟುಕೊಂಡು ಕಾದಿದ್ದರೂ ಅವನು ಬರಲಿಲ್ಲ. ಎಲ್ಲೋ ಹೊರಗಡೆ ಹೋಟಲಿನಲ್ಲಿ ಚಹಾ ಕುಡಿದೇ ಅಂಗಡಿಗೆ ಹೊರಟು ಹೋಗಿದ್ದ.

ಮಧ್ಯಾಹ್ನ ಅವನು ಮನೆಗೆ ಬರುವ ವೇಳೆಗೆ ಅಡಿಗೆಯಾಗಿತ್ತು. ಕನಕ ಬಡಿಸಿದಳು. ಆದರೆ ಯಾರೊಬ್ಬರೂ ಮಾತನಾಡಲಿಲ್ಲ.

ಅ ದಿನ ಬೆಳಗಾಗ ಕನಕ ಹಾಸಿಗೆಯ ಮೇಲೆ ಮಲಗಿದ್ದ ಹಾಗೆಯೇ ಶಂಕರ ಹೊರಗೆ ಹೊರಟುಹೋಗಿದ್ದನಷ್ಟೆ. ಅವನು ಪುನಃ ಮನೆಗೆ ಬಂದುದು ಮಧ್ಯಾಹ್ನ ಊಟಕ್ಕೆ.

ಆಗಿನಿಂದಲೇ ಕನಕಳಲ್ಲಿ ಒಂದು ಬದಲಾವಣೆಯಾಗಿತ್ತು. ಆಗ ಗಮನಿಸದಿದ್ದರೂ ಒಂದೆರಡು ದಿನಗಳಲ್ಲಿಯೇ ಅದು ಅವನ ಗಮನಕ್ಕೆ ಬರದಿರಲು ಸಾಧ್ಯವಾಗಲಿಲ್ಲ.

ಕನಕ ಮೊದಲಿನಂತೆ ಸಿಲ್ಕ್ ಸೀರೆಗಳನ್ನೂ, ಬೆಲೆ ಬಾಳುವ ಜಾರ್ಜೆಟ್ ಸೀರೆಗಳನ್ನೂ ಉಡುತ್ತಿರಲಿಲ್ಲ. ಸಾಧಾರಣವಾದ ವಾಯಿಲ್ ಸೀರೆಗಳನ್ನು ಉಡುತ್ತಿದ್ದಳು. ಲಾಂಗ್ ಕ್ಲಾತ್‌ನ ಬಿಳಿಯ ರವಿಕೆಗಳನ್ನು ತೊಟ್ಟುಕೊಳ್ಳುತ್ತಿದ್ದಳು. ಅಲಂಕರಿಸಿಕೊಳ್ಳುವುದರಲ್ಲಿ ಸಹ ಆಸಕ್ತಿಯನ್ನು ತೋರುತ್ತಿರಲಿಲ್ಲ. ಶಂಕರ ಬರುವ ಹೊತ್ತಿನಲ್ಲಿ ಮನೆಯಲ್ಲಿ ಇರದೇ ಇರುತ್ತಿರಲಿಲ್ಲ.

ಶಂಕರ ಆವಳನ್ನು ಸರಿಯಾಗಿ ಗಮನಿಸಿದನೋ ಇಲ್ಲವೋ? ಸರಿಯಾಗಿ ನೋಡಿದ್ದರೆ ಕನಕ ಬಾಯಿ ಮುಚ್ಚಿಕೊಂಡು ಒಳಗೇ ಯಾತನೆಯನ್ನು ಅನುಭವಿಸುತ್ತಿರುವುದು ಕಂಡುಬರದೇ ಇರುತ್ತಿರಲಿಲ್ಲ.

ಅದರಿಂದ ಶಂಕರನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಸಂಸಾರ ಮಾಡುವ ಹೆಂಗಸು ಹಾಗೇ ಇರಬೇಕೆಂದುಕೊಳ್ಳುತ್ತಿದ್ದ.

ಗಂಡಹೆಂಡಿರಂತೆ ಇದ್ದರೂ ಅವರುಗಳಲ್ಲಿ ಮಾತುಕತೆ ಮುಂತಾದುವುಗಳೇನೂ ಇರಲಿಲ್ಲ.

ಶಂಕರ ಕನಕಳನ್ನು ಮಾತನಾಡಿಸಲೇ ಬೇಕಾಗಿ ಬಂದಿತು. ಸುಮಾರು ವಾರದೊಳಗಾಗಿ ಅಂತಹದೊಂದು ಪ್ರಸಂಗವು ನಡೆಯಿತು.

ಅ ಕ್ಷಣವೇ ಮನೆಗೆ ಹೋರಟು ಹೋಗಬೇಕೆಂದು ತೋರಿತು. ಆದರೆ

ಅವಳು ಮನೆಯಲ್ಲಿ ಇರುತ್ತಾಳೆಯೋ ಇಲ್ಲವೋ? ಬೇಗ ಹೋಗುವುದು ಪ್ರಯೋಜನವಿಲ್ಲ. ಮಾಮೂಲು ಹೊತ್ತಿಗೆ ಮನೆಗೆ ಹೊಗಬೇಕೆಂದುಕೊಂಡ.

ಮಾಮೂಲು ಹೊತ್ತಿಗೆ ಅಂಗಡಿ ಮುಚ್ಚಲು ನಿರ್ಧರಿಸಿದರೂ ಸಹ ಬೇಗನೇ ಮುಚ್ಚಿ ನೇರವಾಗಿ ಮನೆಗೆ ಹೋದ. ಕನಕ ಮನೆಯಲ್ಲಿದ್ದಳು.

ಅವಳು ವಾಯಿಲ್ ಸೀರೆಯನ್ನೇ ಉಟ್ಟುಕೊಂಡಿದ್ದಳು. ಅಲಂಕಾರ ಮಾಡಿಕೊಂಡಿರಲಿಲ್ಲ. ಆದರೂ ಅವಳು ಎಂದಿನಂತೆ ಇರಲಿಲ್ಲ. ಮೊದಲಿನಂತೆ ಅವಳ ಮುಖವು ಚಿಂತಾಕ್ರಾಂತವಾಗಿರಲಿಲ್ಲ. ಸಂಕಟ ಪಡುತ್ತಿರುವ ಭಾವವು ಕಂಡು ಬರುತ್ತಿರಲಿಲ್ಲ ಖುಷಿಯಾಗಿ ನಗು ನಗುತ್ತಿದ್ದಳು. ವಾಯಲ್ ಸೀರೆಯೇ ಎಷ್ಟು ಚೆನ್ನಾಗಿ ಕಂಡು ಬರುತ್ತಿದ್ದಿತು. ಅಲಂಕಾರವಿಲ್ಲದಿದ್ದುದು ಕುಂದಾಗಿರಲಿಲ್ಲ. ಅಲಂಕಾರದಲ್ಲಿ ಅನಾಸಕ್ತಳಾದ ಸ್ವಾಭಾವಿಕ ಸುಂದರಿಯಂತೆ ಕಾಣುತ್ತಿದ್ದಳು.

ಅವಳಲ್ಲಿ ಅಗಿದ್ದ ಬದಲಾವಣೆಯು ಶಂಕರನ ಮನಸ್ಸಿಗೆ ಮುಳ್ಳು ಚುಚ್ಚಿದಂತೆ ಚುಚ್ಚುತ್ತಿತ್ತು. ಇವಳಲ್ಲಿ ಇಷ್ಟೊಂದು ಬದಲಾವಣೆಯಾಗಲು ಅದೇ ಕಾರಣವೇನು?

ವಾರದನಂತರ ಅವನೇ ಕನಕಳನ್ನು ಮಾತನಾಡಿಸಿದ.

"ಈ ದಿನ ಬೆಳಗಾಗ ಎಲ್ಲಿ ಹೋಗಿದ್ದೆ, ಕನಕ?"

"ಎಲ್ಲಿಗೂ ಹೋಗಿಲ್ಲವಲ್ಲ."

"ಅಲ್ಲ, ಎಲ್ಲೋ ಹೊರಗಡೆ ನಿನ್ನನ್ನು ನೋಡಿದ ಹಾಗಾಯಿತು."

"ಚೆನ್ನಾಯಿತು. ಯಾರನ್ನೋ ನೋಡಿ ನಾನೆಂದುಕೊಂಡಿದ್ದೀರಿ. ನಾನು ಬೆಳಗಿನಿಂದ ಹೊಸಲಿನಿಂದ ಆಚೆಗೆ ಕೂಡ ಹೋಗಿಲ್ಲ."

ಕನಕ ಸುಳ್ಳು ಹೇಳುತ್ತಿದ್ದಾಳೆ. ಶಂಕರ ಅವಳು ಗಾಡಿಯಲ್ಲಿ ಹೋಗುತ್ತಿರುವುದನ್ನು ನೋಡಿದ. ಯಾರೋ ಷೇವಿಂಗ್ ಕ್ರೀಂ ಕೇಳಿದರು. ಅಂಗಡಿಯಲ್ಲಿರಲಿಲ್ಲ. ಆಚೆ ಬೀದಿಯಿಂದ ತಂದುಕೊಡಬೇಕಾಗಿತ್ತು. ತೆಗೆದುಕೊಂಡು ಬರುವಾಗ ಟಾಂಗಾದಲ್ಲಿ ಕನಕ ಹೋಗುತ್ತಿರುವುದನು ನೋಡಿದ. ಅವಳೊಂದಿಗೆ ಒಬ್ಬ ಗಂಡಸು ಕುಳಿತ್ತಿರುವುದನ್ನು ನೋಡಿದ. ಇಬ್ಬರೂ ನಗುತ್ತಾ ಹೋಗುತ್ತಿರುವುದನ್ನು ನೋಡಿದ. ಕೂಗಿ ಗಾಡಿಯನ್ನು ನಿಲ್ಲಿಸಿ ಅವರಿಬ್ಬರನ್ನೂ ಹಿಡಿಯಬೇಕೆಂದು ತೋರಿತ್ತು.

ಆದರೆ ಕೂಗಿ ನಿಲ್ಲಿಸುವುದಕ್ಕಿಂತ ಗಾಡೀ ಬಹಳ ದೂರವಾಗಿತ್ತು.

“ನಾನು ನಿನ್ನನ್ನು ನೋಡಿದೆ, ಕನಕ. ನೀನು ಶಿವಣ್ಣನೊಂದಿಗೆ ಗಾಡಿಯಲ್ಲಿ ಕುಳಿತು ಹೋಗುತ್ತಿದೆ.”

ಹೌದು, ನಿಜ. ಅವಳು ಗಾಡಿಯಲ್ಲಿ ಕುಳಿತು ಶಿವಣ್ಣನೊಂದಿಗೆ ಹೋಗುತ್ತಿದ್ದಳು. ಶಿವಣ್ಣನ ತಂದೆ ಸತ್ತು ಹೋಗಿದ್ದರು ಅಂಗಡೀ ಆಸ್ತೀ ಪಾಸ್ತಿಗೆ ಅವನೇ ಯಜಮಾನನಾಗಿದ್ದ. ದಿನ ವಾರಗಳನ್ನು ಮಾಡಿಕೊಂಡು ನೇರವಾಗಿ ಕನಕಳನ್ನು ಹುಡುಕಿಕೊಂಡು ಬಂದಿದ್ದ ಅಂಗಡಿಯಲ್ಲಿರಬೇಕಾದ ಶಂಕರ ಬೀದೀ ತಿರುಗುತ್ತಿರುತ್ತಾನೆಂದು ಅವಳು ನೆನೆಸಿರಲಿಲ್ಲ. ಹಾಗೇನಾದರೂ ತೋರಿದ್ದರೆ ಖಂಡಿತವಾಗಿ ಪೇಟೀ ಬೀದಿಯಲ್ಲಿ ಹೋಗಲು ಒಪ್ಪುತ್ತಿರಲಿಲ್ಲ.

“ಇಲ್ಲ. ನಾನು ಹೇಳಿದಂತೆ ನೀವು ಯಾರನ್ನೋ ನೋಡಿ ತಪ್ಪು ತಿಳಿದುಕೊಂಡಿರಬೇಕು. ಇಷ್ಟಕ್ಕೂ ಶಿವಣ್ಣ ಈ ಊರಿಗೆ ಬಂದಿದ್ದಾನೆಂಬುದು ಸಹ ನನಗೆ ಗೊತ್ತಿಲ್ಲ. ಆ ದಿನ ನಮ್ಮ ಮನೆಯಲ್ಲಿ ಅವನನ್ನು ನೋಡಿದ್ದುದೇ ಪುನಃ ನೋಡಿಯೇ ಇಲ್ಲ.”

“ಹಾಗಾದರೆ ನಾನು ನೋಡಿದ್ದೇ ಸುಳ್ಳು ಎನ್ನುತ್ತೀಯೇನು ?”

“ಸುಳ್ಳೋ ನಿಜವೋ. ಅದೊಂದೂ ನನಗೆ ಗೊತ್ತಿಲ್ಲ. ನನ್ನ ಮಟ್ಟಿಗೆ ನಾನು ಧರ್ಮದಿಂದ ಇದ್ದೇನೆ ನಾನು ಇರುವುದನ್ನು ನೋಡಿದರೆ ನಿಮಗೆ ಅರ್ಥವಾಗುವುದಿಲ್ಲವೇನು ? ಇರುವುದರಲ್ಲಿಯೇ ಸರಿಮಾಡಿಕೊಂಡು ಸಂತೋಷವಾಗಿರೋಣವೆಂದು ನಗುನಗುತ್ತಾ ಇದ್ದರೆ ಈ ದಿನ ಹೊಸ ಜಗಳ ತೆಗೆದಿರಿ ನಾನು ನಗುನಗುತ್ತಾ ಇರುವುದು ನಿಮಗೆ ಇಷ್ಟವಿಲ್ಲವೇನು ?”

ಕವಿಗಳು ಹೃದಯಾಂತರಾಳ ಎನ್ನುತ್ತಾರಲ್ಲಾ. ಹಾಗೆ ಅಮಾತು ಹೃದಯಾಂತರಾಳದಿಂದ ಬರುತ್ತಿದ್ದ ಹಾಗೆ ಶಂಕರನಿಗೆ ಭಾಸವಾಯಿತು. ಕನಕ ಹೇಳುತ್ತಿರುವುದೇ ನಿಜವೇನೋ ತಾನು ಯಾರನ್ನೋ ನೋಡಿ ಕನಕ ಎಂದುಕೊಂಡನೇನೋ ಎಂದು ತೋರಿತು.

ಇಲ್ಲ, ಇಲ್ಲ. ಮರುಕ್ಷಣವೇ ಮನಸ್ಸಿನ ಎಲ್ಲಾ ಕಡೆಗಳಿಂದಲೂ ಸತ್ಯವು ನುಗ್ಗಿ ಒಂದು ಕಣ್ಣು ಬಿಡಿಸಿದಂತೆ ಆಯಿತು.

“ಹಾಗಾದರೆ ನನಗೆ ಕಣ್ಣೇ ಇಲ್ಲವೆನ್ನುತ್ತೀಯಾ ?”

ಕನಕ ಇಲ್ಲವೆಂದೇ ಸಾಧಿಸ ಬೇಕೆಂದಿದ್ದಳು ನೂರೆಂಟು ಬಗೆಯಾಗಿ ಶಂಕರನನ್ನು ನಂಬಿಸಲು ಯೋಚಿಸುತ್ತಿದ್ದಳು "ಇಲ್ಲ" ವೆಂಬ ಶಬ್ದವೇ ಅವಳ ನಾಲಿಗೆಯ ತುದಿಯಲ್ಲಿ ಸುಳಿದಾಡುತ್ತಿತ್ತು. ಇದ್ದಕ್ಕಿದ್ದ ಹಾಗೆಯೇ ಅವಳಿಗೆ ಕೋಪಬಂದಿತು ತಾನು ಮನವಮುಟ್ಟುವಂತೆ ಹೇಳಿದ ಮಾತು ಸಹ ವಿಫಲವಾದುದರಿಂದ ಅವಳಿಗೆ ಹಾಗಾಗಿರಬೇಕು

"ಹಾಗಾದರೆ ಅದು ನಿಜ. ನಾನು ಶಿವಣ್ಣನೊಂದಿಗೆ ಗಾಡಿಯಲ್ಲಿ ಹೋಗುತ್ತಿದ್ದುದು ನಿಜ. ಅದಕ್ಕೆ ಈಗೇನು ಮಾಡಬೇಕು ?"

ಶಂಕರನಿಗೆ ಏನು ಹೇಳಬೇಕೋ ಅರ್ಥವಾಗಲಿಲ್ಲ. ಏನೂ ತೋರದೆ ಹೇಳಿದ.

"ಹೀಗೆಂದರೆ ಏನು ಅರ್ಥ ?''

''ನಾನು ಕೇಳುತ್ತಿರುವುದೂ ಅದನ್ನೇ! ನನಗೆ ಜೀವನದಲ್ಲಿ ಏನು ಸುಖವಿದೆ ಎಂದು ನಾನು ಸನ್ಯಾಸಿಯಂತೆ ಇರಬೇಕು. ನನಗೆ ತೋರಿದಂತೆ ಮಾಡುತ್ತೇನೆ.''

"ರಾಮರಾಮ. ನಾನು ಮಾಡಿದ ತ್ಯಾಗವೆಲ್ಲವೂ ಬೂದಿಯಲ್ಲಿ ಮಾಡಿದ ಹೋಮದಂತೆ ವ್ಯರ್ಥವಾಯಿತಲ್ಲ."

"ತ್ಯಾಗ. ತ್ಯಾಗ. ಆ ತ್ಯಾಗದಿಂದ ಪ್ರಯೋಜನವೇನು? ನಾನು ಈ ಹಾಳು ಮನೆಯಲ್ಲಿ ಮುಸುರೆ ತಿಕ್ಕಿಕೊಂಡು, ನೆಲ ಸಾರಿಸಿಕೊಂಡು ದುಡಿಯುತ್ತಿದ್ದೇನೆ. ತ್ಯಾಗ ಮಾಡಿದವರಾರು? ಈ ತ್ಯಾಗದಿಂದ ನನಗೇನು ಸುಖವಾಗಿದೆ?"

ಅವಳು ಮಾತನಾಡಿದಳು. ಆಡಿದ ಮಾತು ಮುಗಿದಂತೆ ಕಂಡು ಬರಲಿಲ್ಲ. ಮುಂದುವರಿಸುವ ಧೋರಣೆಯಲ್ಲಿಯೇ ಮಾತು ನಿಂತಿತ್ತು. ಶಂಕರನಿಗೆ ಮಾತನಾಡುವುದಕ್ಕೆ ಏನೂ ಇರಲಿಲ್ಲ. ಅದರಿಂದ ಅವಳು ಹೇಳುವುದನ್ನೇ ಕೇಳ ತೊಡಗಿದ.

''ಈ ಮನೆಯಲ್ಲಿ ಹೀಗಿರಲು ನನಗೆ ಬೇಜಾರು. ಅದರಿಂದ ನನಗೆ ತೋರಿದಾಗ ಹೊರಗೆ ಹೋಗುತ್ತೇನೆ. ಈ ದಿನವೂ ಹಾಗೆಯೇ ಹೋಗಿದ್ದೆ. ನಿಜ. ಅವನೊಡನೆಯೇ, ಶಿವಣ್ಣನೊಡನೆಯೇ. ನಾವು ನಗುತ್ತಿದ್ದೆವೆಂದು ಹೇಳಿದೆಯಲ್ಲಾ ಅದೂ ನಿಜ. ಈ ನಮ್ಮ ಸಂಸಾರ–ನೀನು ಮಾಡಿದೆನೆಂದು

ಹೇಳುವ ತ್ಯಾಗ ಇವುಗಳ ವಿಷಯ ಕುರಿತು ಮಾತನಾಡುತ್ತಿದೆವು. ಆಗ ನಗು ಬಂದಿತು. ನಕ್ಕೆವು. ಇದನ್ನೆಲ್ಲಾ ನೋಡಿ ನಗದೇ ಮಾಡುವು ದೇನು?,"

ಶಂಕರ ಕಂಗಾಲಾಗಿ ಅವಳ ಕಡೆ ನೋಡತೊಡಗಿದ.

"ಬೆಳಗಾಂನಲ್ಲಿ ನೀನು ಸಂದೇಹಪಟ್ಟದ್ದು ಸರಿ. ನಾನು ಹೋಗಿದ್ದಾಗ ನೀನು ಯಾವನೋ ಸ್ನೇಹಿತನೊಂದಿಗೆ ಹೊರಗೆ ಹೋಗಿದ್ದೆ ಯಲ್ಲಾ. ಬರುವ ವೇಳೆಗೆ ನನ್ನ ಬಳಿ ಶಿವಣ್ಣ ನಿಂತಿದ್ದ. ನನಗೆ ಅವನು ಐದು ರೂಪಾಯಿ ಕೊಡುತ್ತಿದ್ದ. ಅವನು ನನ್ನೊಂದಿಗಿದ್ದನೇನೊ ಎಂದು ನೀನು ಕಡೆಯವರೆವಿಗೆ ಸಂದೇಹಿಸುತ್ತಲೇ ಇದ್ದೆ. ನಾನು ಏನು ಏನೋ ಹೇಳಿ ಅದನ್ನು ಸರಿ ಮಾಡಿದೆ. ಈಗ ಹೇಳುತ್ತೇನೆ, ಕೇಳು. ಅವನು ಆ ದಿನ ನನ್ನೊಂದಿಗೆ ಮಲಗಿದ್ದ. ನಾನವನಿಗೆಷ್ಟೋ ಸುಖ ಕೊಟ್ಟೆ. ಆದರಿಂದ ಅವನು ನನಗೆ ಐದು ರೂಪಾಯಿ ಭಕ್ಷೀಸ್ ಆಗಿ ಕೊಟ್ಟ. ನೀನು ನೋಡಿದ್ದು ಅದನ್ನು.

ಪಟಪಟನೆ ಕಲ್ಲುಗಳಿಂದ ಹೊಡೆದಂತೆ ಆ ಮಾತುಗಳವನನ್ನು ಘಾತಿ ಸಿದುವು. ಅವನ ಮನಸ್ಸಿನಲ್ಲಿ ಅನಿರ್ವಚನೀಯವಾದ ಯಾತನೆಯಾದಂತೆ ಆಯಿತು.

ಅವರುಗಳಿಬ್ಬರೂ ಇಷ್ಟೊಂದು ದಿನಗಳು ಒಟ್ಟಿಗೆ ಇದ್ದರು. ಕನಕಳನ್ನು ಉದ್ಧಾರ ಮಾಡುವುದಕ್ಕಾಗಿ ಶಂಕರ ತನ್ನ ಸರ್ವಸ್ವವನ್ನೂ ತ್ಯಾಗ ಮಾಡಲು ಸಿದ್ಧವಾಗಿದ್ದ. ಅಂತಹವನಿಗೆ ಕಡೆಯಲ್ಲಿ ಸಿಕ್ಕಿದ್ದೇನು?

ಅದೆಲ್ಲದಕ್ಕಿಂತಲೂ ಮುಖ್ಯವಾದುದೊಂದು ವಿಷಯವಿತ್ತು. ತಾನು ಯಾವುದನ್ನು ಪವಿತ್ರವೆಂದು ಭಾವಿಸುತ್ತಿದ್ದನೆಯೋ ಅಂತಹದ್ದರ ವಿಷಯ ದಲ್ಲಿ ಅವಳಿಗೆಷ್ಟು ತಿರಸ್ಕಾರವಿದೆ!

ಏನು ಮಾಡಬೇಕು. ಏನು ಮಾಡಬೇಕು- ಎಂಬುದು ಇನ್ನೂ ಅವನಿಗೆ ಗೊತ್ತಾಗಲಿಲ್ಲ.

ಅವನ ಮೌನ ಅವಳನ್ನು ಮತ್ತಷ್ಟು ಕೆರಳಿಸಿತು. ಕೂಗುತ್ತಾ ಹೇಳಿದಳು.

"ನಿನ್ನೊಂದಿಗೆ ಕ್ಷಣ, ಒಂದು ಕ್ಷಣ ಇರುವುದು ನನಗೆ ಎಷ್ಟು ಕಷ್ಟವಾಯಿತೆಂಬುದನ್ನು ಬಲ್ಲೆಯಾ?"

ಬಹಳ ದುಃಖದಿಂದ, ಕಷ್ಟದಿಂದ ಶಂಕರ ಅಂದ.

"ಕನಕ. ನಿನ್ನ ದಮ್ಮಯ್ಯ. ಇನ್ನಾದರೂ ಮಾತು ನಿಲ್ಲಿಸು. ನಾನಿನ್ನು ಕೇಳಲಾರೆ. ನನ್ನ ಕಿವಿಗಳಿಗೆ ಕಾಸಿದ ಸೀಸವನ್ನು ಹುಯ್ಯುತ್ತಿರುವಂತೆ ಇದೆ."

"ನೀನು ಕೇಳಲಾರೆ, ಹೌದು. ಎಲ್ಲರೂ ಸತ್ಯವನ್ನೇ ಕೇಳಬೇಕು ಎನ್ನುತ್ತಾರೆ. ಆದರೆ ಸತ್ಯವನ್ನು ಹೇಳಿದಾಗ ಯಾರಿಗೂ ಅದು ಬೇಡ. ಯಾರೂ ಅದನ್ನು ಕೇಳಲಾರರು."

"ಇನ್ನು ನಿನ್ನ ಮಾತು ನಿಲ್ಲಿಸುತ್ತೀಯೋ ಇಲ್ಲವೋ?"

ಈ ಬಾರಿ ಆಡಿದ ಮಾತು ಕಠೋರವಾಗಿತ್ತು. ಆಜ್ಞೆ ಮಾಡುವಂತಿತ್ತು.

ಆದರಿಂದ ಕನಕ ದುರುಗುಟ್ಟಿಕೊಂಡು ನೋಡಿದಳು. ಅವನೂ ದುರುಗುಟ್ಟಿಕೊಂಡು ನೋಡಿದ.

"ನಿಲ್ಲಿಸದೇ ಇದ್ದರೆ ಏನು ಮಾಡುತ್ತೀಯೆ?"

"ಮೂರೂ ಬಿಟ್ಟು ನಿಂತವರಿಗೆ ಮಾಡುವುದೇನು? ನನ್ನ ನಿನ್ನ ಋಣಾನುಬಂಧವು ತೀರಿತೆಂದು ಕಂಡುಬರುತ್ತದೆ."

"ಹೌದು. ಅಷ್ಟೇ. ಅಷ್ಟೇ."

"ಈ ಪಾಳು ಮನೆಯಿಂದ ಎಲ್ಲಿಯಾದರೂ ಹೊರಟುಹೋಗುತ್ತೇನೆ, ನೀನೇ ಇರು."

"ನಾನೇಕೆ ಇರಬೇಕು? ನಾನು ಹೋಗುತ್ತೇನೆ. ನೀನೇ ಬೇಕಾದರೆ ಇರು."

ಆ ಮಾತನ್ನವಳು ಹೇಳಿದ ಮೇಲೆಯೂ ತಡೆದುಕೊಳ್ಳಲಾಗಲಿಲ್ಲ.

"ಹಾಗಾದರೆ ಹೋಗು. ಈ ಕ್ಷಣವೇ ಇಲ್ಲಿಂದ ಹೊರಟುಹೋಗು."

"ಆಗಲಿ, ಹೊರಟುಹೋಗುತ್ತೇನೆ. ಇನ್ನೊಂದು ನಿಮಿಷವೂ ಈ ಮನೆಯಲ್ಲಿರುವುದಿಲ್ಲ."

ಹಾಗಾದರೆ ಹೊರಟುಹೋಗುತ್ತಾಳೆ. ಕನಕ ಹೊರಟುಹೋಗುತ್ತಾಳೆ. ಪ್ರಪಂಚದಲ್ಲಿ ತನಗಿರುವವಳು ಇವಳೊಬ್ಬಳೇ ಹೆಣ್ಣು. ಅಂತಹ ಹೆಣ್ಣು ಹೊರಟು ಹೋಗುತ್ತಾಳೆ.

"ಹೊರಟು ಹೋಗುತ್ತೀಯೆ ? ಹೊರಟು ಹೋಗುತ್ತೇನೆ ಎನ್ನಲು ನಿನಗೆಷ್ಟು ಧೈರ್ಯ ? ತಿಳಿದುಕೋ. ನಾನು ನಿನ್ನ ಗಂಡ. ನಿನಗಾಗಿ ಸಾವಿರಾರು ರೂಪಾಯಿ ಖರ್ಚುಮಾಡಿದ್ದೇನೆ. ಸುಮ್ಮನೆ ನೀನು ಹೊರಟು ಹೋಗಲು ಬಿಟ್ಟುಬಿಡುತ್ತೇನೆ—ಎಂದುಕೊಂಡಿದ್ದೀಯಾ ?"

ಕನಕಳಿಗೆ ಹುಚ್ಚು ನಗುಬಂದಿತು. ನಗುತ್ತಾ ಅಂದಳು.

"ಗಂಡ ! ಗಂಡ! ಸಾವಿರಾರು ರೂಪಾಯಿ ಖರ್ಚುಮಾಡಿದ್ದೀಯೆ ? ಯಾರಿಗಾಗಿ ಮಾಡಿದೆ? ನಿನಗಾಗಿ ಮಾಡಿಕೊಂಡೆ. ಧರ್ಮಕ್ಕಾಗಿ ಮಾಡಿದೆಯಾ ? ಸುಖಪಡಲಿಲ್ಲವೆ ?"

ಈಟಿಯಲ್ಲಿ ಇರಿದಂತಾಯಿತು, ಅವನಿಗೆ. ಆದರೂ ಹೇಳಿದ.

"ಹೂಂ. ಹೋಗುತ್ತೀಯೆ ? ಎಲ್ಲಿಗೆ ಹೋಗುತ್ತೀಯೆ ?"

ಆಗ ಕನಕಳಿಗೆ ಒಂದು ಬಗೆಯಾಗಿ ಹೆದರಿಕೆಯೇ ಆಯಿತು. ಈ ಶಂಕರ ಮೆತ್ತಗಿದ್ದವನು ಎಷ್ಟೊಂದು ಜೋರಾಗಿ ಹೋಗಿದ್ದಾನೆ. ಇವನಿಗೆ ಲಂಗಿಲ್ಲ, ಲಗಾಮಿಲ್ಲ. ಶಿವಣ್ಣ ಮರಿಗೆಪ್ಪ ಇವರುಗಳಂತಲ್ಲ. ಓದು ಬಲ್ಲವನು ಮದುವೆ ಮಾಡಿಕೊಂಡದ್ದು ಉಂಟು ಎಂದು ಸಾಧಿಸಿ ಬಿಟ್ಟರೆ ? ಆ ದಿನ ಬೆಳಗಾವಿನಲ್ಲಿ ಊಟಕ್ಕೆ ಬಂದಿದ್ದ ಆ ಇಬ್ಬರು ಸ್ನೇಹಿತರನ್ನು ಕರೆಸಿ ಸಾಕ್ಷಿ ಹೇಳಿಸಿದರೆ ?

ಹೆಂಡತಿ ಗಂಡನೊಂದಿಗೆ ಸರಿಯಾಗಿ ಸಂಸಾರ ಮಾಡದಿದ್ದರೆ ಕೋರ್ಟಿನವರು ಹೆಂಡತಿಯನ್ನು ಗಂಡನಿಗೆ ಒಪ್ಪಿಸುತ್ತಾರೆಂದೂ, ಪೋಲೀಸಿನವರು ಹೆಂಡತಿಯನ್ನು ಹಿಡಿದುಕೊಂಡು ಬಂದು ಗಂಡನ ಮನೆಯಲ್ಲಿ ಬಿಡುತ್ತಾರೆಂದೂ ಕೇಳಿದ್ದಳು.

ಸಮಯ ಬಂದರೆ ಶಿವಣ್ಣ ಸಹಾಯ ಮಾಡಬಹುದು. ಆದರೆ ಅವನು ಬುದ್ಧಿ ಇಲ್ಲದವನು. ಮರಿಗೆಪ್ಪನ ಸಹಾಯ ಸಿಕ್ಕುವುದೆಂದು ನಂಬಿಕೊಳ್ಳುವುದಕ್ಕಿಲ್ಲ ಅವನಿಗೆ ಹೆಂಡತಿ ಮಕ್ಕಳಿದ್ದಾರೆ. ಹತ್ತಿರದಲ್ಲಿಯೇ ಬಾಗಲು

ಕೋಣೆಯಲ್ಲಿ ಅವನ ಮಾವ ಇದ್ದಾರೆ. ಅವನು ಪ್ರತ್ಯಕ್ಷವಾಗಿ ತನಗೆ ಸಹಾಯ ಮಾಡ ವುದಿಲ್ಲ.

ತನ್ನನ್ನು ಈಗ ತಾನೇ ಉಳಿಸಿಕೊಳ್ಳಬೇಕು.

ಏನಾದರೂ ಮಾತನಾಡಿ ಶಂಕರನನ್ನು ರೇಗಿಸಿ ಹೊರಗೆ ಹೊರಟು ಹೋಗಬೇಕು

ಇಲ್ಲದಿದ್ದರೆ ತನಗೆ ಬಿಡುಗಡೆಯೇ ಇಲ್ಲ.

"ನಾನು ಎಲ್ಲಿಹೋದರೆ ನಿನಗೇನು ? ಆದರೂ ನಿನಗೆ ಬೇಕಾದರೆ ಹೇಳುತ್ತೇನೆ, ಕೇಳು. ಇಲ್ಲಿಯೇ ಇರುವ ಮುರಿಗೆಪ್ಪನೊಂದಿಗೆ ಇರುತ್ತೇನೆ. ಅಥವಾ ಈಗ ತಾನೇ ಬೆಳಗಾವಿನಿಂದ ಬಂದಿರುವ ಶಿವಣ್ಣನ ಜೊತೆಯಲ್ಲಿ ಹೋಗುತ್ತೇನೆ"

ತಾನು ಹೇಳಿದುದು ಸಾಲದು ಎಂದವಳಿಗೆ ತೋರಿತು. ಅವನೇನೋ ಮಾತನಾಡಲು ಹೋಗುತ್ತಿದ್ದಾನೆಂದು ತೋರಿತು. ಅದರಿಂದ ಮುಂದಿನ ಮಾತು ಹೇಳಿದಳು.

"ನೀನು ಅದೇನೋ ಸುಖಬೇಕು-ಸುಖಬೇಕು ಎಂದು ಕೇಳುತ್ತಿದ್ದೆ ಯಲ್ಲಾ. ಆ ಸುಖ ಅವರಿಗೆ ಕೊಟ್ಟಿದ್ದೇನೆ ಅವರ ಬಳಿಗೆ ಹೋಗುತ್ತೇನೆ. ಅಂತಹ ಸುಖ ಶಿವಣ್ಣನಿಗೆ ಕೊಟ್ಟುದರಿಂದಲೇ ಆ ದಿನ ಅವನು ನನಗೆ ಐದು ರೂಪಾಯಿ ಕೊಟ್ಟಿದ್ದು."

ಶಂಕರ ಏನೋ ಮಾತನಾಡಲು ಪ್ರಯತ್ನ ಪಡುತ್ತಿದ್ದುದು ನಿಜ. ಆದರೆ ಕನಕ ಈ ಮಾತು ಹೇಳಿದನಂತರ ಅವನಿಂದ ಮಾತನಾಡಲು ಸಾಧ್ಯ ವಾಗಲಿಲ್ಲ

"ಮುರಿಗೆಪ್ಪ ನನಗೆ ನೂರು ನೂರು ರೂಪಾಯಿಗಳ ನೋಟುಗಳನ್ನು ಸುಮ್ಮನೆ ಕೊಡುತ್ತಿದ್ದ ಎಂದು ಕೊಂಡಿದ್ದೀಯೇನು? ಬುದ್ಧಿ ಇಲ್ಲವೇ ಶಿವಣ್ಣ ಬೆಳಗಾವಿನಿಂದ ಇಷ್ಟು ದೂರ ಬಂದಿದ್ದಾನೆ ಎಂದು ಕೊಂಡಿದ್ದೀಯೇನು? ಅವರಿಗೆ ನಾನು ಸರಿಯಾದ ಸುಖ ಕೊಡುತ್ತೇನೆ. ಅದ್ದರಿಂದ ಅವರು ನನಗಾಗಿ ಸಾಯುತ್ತಾರೆ. ಅವರ ಸಮೀಪಕ್ಕೆ ಹೋದಾಗ ನನಗೂ ಹಾಗೆಯೇ ಆಗುತ್ತದೆ. ನಿನ್ನ ಬಳಿ ಇದ್ದಾಗ ಒಂದು ಬಾರಿಯೂ ನನಗೆ ಹಾಗಾಗಿಲ್ಲ.

ಹೆಂಗಸರನ್ನು ತೃಪ್ತಿ ಪಡಿಸುವ ಚೈತನ್ಯ ನಿನಗಿಲ್ಲ. ಸಮ್ಮನೆ ಚಪಲ ಪಡುತ್ತೀಯೋ.?"

ಮಾತನಾಡಿ, ಆಡಿ ಅವಳ ಎದೆಯಲ್ಲಿ ಉಸಿರು ಮುಗಿದು ಹೋಗಿದಿದ್ದರೆ ಹೇಗೆ ಉಸಿರೆಳೆದುಕೊಳ್ಳಬೇಕೋ ಹಾಗೆ ಬೇಗ ಬೇಗ ಉಸಿರೆಳೆದುಕೊಂಡಳು. ಎರಡು ಗಳಿಗೆಗಳ ಕಾಲ ಅವಳ ಬಾಯಿ ಎದೆಗಳು ತಿದಿಯಂತೆ ಕೆಲಸ ಮಾಡಿದುವು.

ಹಾಗೆ ಉಸಿರು ಎಳೆದುಕೊಂಡುದರಿಂದ ಅವಳಿಗೆ ಮಾತನಾಡುವ ಚೈತನ್ಯವು ಬಂದಿತು. ಬಂದೊಡನೆಯೇ ಮಾತನಾಡ ತೊಡಗಿದಳು.

"ಅಷ್ಟೇ ಅಲ್ಲ. ನನ್ನ ದೇಹದ ಯಾವ ಯಾವ ಭಾಗಗಳನ್ನು ಹೇಗೆ ಹೇಗೆಮುಟ್ಟಲು ಅಪೇಕ್ಷೆ ಪಟ್ಟರೂ ಅದಕ್ಕೆ ಒಪ್ಪಿಕೊಳ್ಳುತ್ತಿದೆ. ಅಷ್ಟೇ ಅಲ್ಲ. ಅವರು ಎಲ್ಲೆಲ್ಲಿ ನಾನು ಮುಟ್ಟಬೇಕೆಂದು ಅಪೇಕ್ಷೆ ಪಡುತ್ತಿದ್ದರೋ ಅಲ್ಲೆಲ್ಲಾ ಮುಟ್ಟುತ್ತಿದ್ದೆ. ರತಿ ಕಾಲದಲ್ಲಿ ನಾನು ಸತ್ತ ಹೆಣದಂತೆ ಬಿದ್ದುಕೊಂಡಿರುತ್ತಿರಲಿಲ್ಲ. ರತಿಯಲ್ಲಿ ಗಂಡು ಹೇಗೆ ಚೈತನ್ಯಮಯವಾಗಿರ ಬಲ್ಲನೋ ಹಾಗೆಯೇ ಹೆಂಗಸೂ ಇರಬಲ್ಲಳು. ಹಾಗೇ ಇರುತ್ತಿದ್ದೆ. ಆದರಿಂದ ಅವರಿಗೆ ಸುಖವಾಗುತ್ತಿತ್ತು. ಹೆಣ್ಣಿನಲ್ಲಿರಬೇಕಾದ ಪ್ರತಿಕ್ರಿಯೆ ನನ್ನಲ್ಲಿ ಸತ್ತು ಹೋಗಿದೆ ಎಂದು ಕೊಳ್ಳಬೇಡ. ಅದು ಸತ್ತಿಲ್ಲ. ಅವರಿಗೆ ಅದು ಇತ್ತು. ನಿನಗೆ ಅದು ಇರಲಿಲ್ಲ."

ದನಗಳಿಗೆ ಹಾಕುವ ಜೋಳದ ಕಡ್ಡಿಯನ್ನು ತುಂಡು ತುಂಡಾಗಿ ಕುಡುಗೋಲಿನಿಂದ ಕೊಚ್ಚುತ್ತಾರೆ. ಹಾಗೆ ತನ್ನ ದೇಹವನ್ನು ಕೊಚ್ಚುತ್ತಿರುವಂತೆ ಆವನಿಗೆ ಭಾಸವಾಯಿತು.

ಅವಳು ಹೇಳುತ್ತಿರುವುದಷ್ಟೂ ನಿಜವೆಂದು ಒಂದುಗಳಿಗೆ ತೋರುತ್ತಿತ್ತು. ಅವಳು ಹೇಳುತ್ತಿರುವುದಷ್ಟೂ ಸುಳ್ಳೆಂದೂ ತನ್ನನ್ನು ನೋಯಿಸಲು ಹಾಗೆ ಮಾತನಾಡುತ್ತಿದ್ದಾಳೆಂದೂ ಮತ್ತೊಂದು ಗಳಿಗೆ ತೋರುತ್ತಿತ್ತು.

ಕನಕಳ ಮಾತಿನ ಝುರಿಯು ಅಲ್ಲಿಗೇ ನಿಲ್ಲಲಿಲ್ಲ.

"ಇನ್ನು ಅವರಿಗೆಷ್ಟೋ ಮಾಡುತ್ತೇನೆ. ನಿನಗೆ ಗೊತ್ತೇಇಲ್ಲದ, ನಿನಗೆ ಎಂದೆಂದಿಗೂ ಸಿಕ್ಕದ ಸುಖಗಳನ್ನು ಅವರಿಗೆ ಕೊಡುತ್ತೇನೆ.

ಅವಳ ಮುಖವು ಕೆಂಪಾಗಿತ್ತು. ಶರೀರವು ಕಂಪಿಸುತ್ತಿತ್ತು. ಎಷ್ಟು ಮಾತನಾಡಿದರೂ ಅವಳ ಕೋಪವು ಆರಿರಲಿಲ್ಲ. ಇನ್ನೂ ಮಾತನಾಡ ಬೇಕೆಂದಿದ್ದಳು. ಆಡಲು ಏನೂ ತೋರಲಿಲ್ಲ. ಸುಮ್ಮನೆ ನಿಂತಿದ್ದರೆ ಸಪ್ಪೆಯಾದೀತು ಎಂದುಕೊಂಡಳೋ ಏನೋ, ಹೊರಗೆ ಹೊರಟು ಹೋದಳು.

ಶಂಕರ ನಿಂತಿದ್ದಲ್ಲಿಯೇ ಕುಳಿತುಕೊಂಡ. ಅವನ ಮೈಗೆ, ಮನಸ್ಸಿಗೆ ಸಿಡಿಲು ಬಡಿದಂತಾಯಿತು. ಏನೂ ತೋರಲಿಲ್ಲ. ತೋರಿದುದೆಲ್ಲವೂ ಸಮಸ್ಯಾ ಪೂರಿತವಾಗಿಯೇ ಇದ್ದವು

ಕನಕ ಹೊರಟು ಹೋಗುತ್ತಾಳೆ. ಜೀವನದಲ್ಲಿ ತನಗೆ ಸಿಕ್ಕಿರುವುದು ಒಂದೇ ಹೆಣ್ಣು. ಐದು, ಹತ್ತು ರೂಪಾಯಿಗೆ ಒಬ್ಬ ಹೆಣ್ಣು ಸಿಗುತ್ತದೆ. ಅಥವಾ ಇವಳನ್ನು ಪಡೆದಂತೆ ಇನ್ನೊಬ್ಬಳನ್ನು ಪಡೆಯಬಹುದು. ಆದರೆ ಅದೊಂದೂ ಪ್ರಯೋಜನವಿಲ್ಲ. ಇವಳೊಬ್ಬಳ ವಿನಾ ಉಳಿದ ಹೆಂಗಸರೆಲ್ಲರೂ ತನ್ನ ಭಾಗಕ್ಕೆ ಹೆಣ್ಣುಗಳೇ ಅಲ್ಲ.

ಅಂತಹ ಕನಕ ಹೊರಟು ಹೋಗುತ್ತಿದ್ದಾಳೆ. ಅವಳನ್ನು ಹಾಗೆ ಬಿಡಕೂಡದು ಅವಳಿಗೆ ದಮ್ಮಯ್ಯ ಗುಡ್ಡೆಯಾದರೂ ಹಾಕಬೇಕು. ಅವಳ ಕಾಲಿಗೆ ಬಿದ್ದಾದರೂ ಕರೆದುಕೊಂಡು ಬರಬೇಕು. ತನ್ನ ಸರ್ವಸ್ವವನ್ನು ಒಪ್ಪಿಸಿಯಾದರೂ ಅವಳ ಅನುಗ್ರಹವನ್ನು ಪಡೆಯಬೇಕು.

ಆ ಭಾವನೆಯು ಬಂದನಂತರ ಶಂಕರನಿಂದ ಒಂದು ಗಳಿಗೆಯೂ ಕುಳಿತುಕೊಳ್ಳಲಾಗಲಿಲ್ಲ ಹೋಗಿ ಅವಳನ್ನು ಕರೆದುಕೊಂಡು ಬರಬೇಕೆಂದು ಮೇಲೆದ್ದ. ಅವನು ಮುಂದೆ ಹೋಗಬೇಕು.

ಅಷ್ಟರಲ್ಲಿ ಕನಕಳೇ ವಾಪ್ಸುಬಂದಳು. ಬಿರುಗಾಳಿಯಲ್ಲಿ ಹೊಡೆದ್ಕೊಂಡು ಹೋದ ಗಾಳೀಪಟ ಇದ್ದಕ್ಕಿದ್ದಂತೆಯೇ ಸಿಕ್ಕಿದ ಹುಡುಗನಂತಾಯಿತು, ಶಂಕರನ ಸ್ಥಿತಿ. ಕನಕ ಪುನಃ ಬಂದಳು.

ಶಂಕರ ಎದ್ದು ನಿಂತಿದ್ದವನು ಕುಳಿತುಕೊಂಡ

ಕನಕಳೊಬ್ಬಳೇ ಬರಲಿಲ್ಲ ಬರುವಾಗ ಮುರಿಗೆಪ್ಪನ ಮನೆಯ ಆಳನ್ನೂ ಕರೆದುಕೊಂಡು ಬಂದಿದ್ದಳು.

ಬಂದವಳು ಮಲಗುವ ಮನೆಗೆ ಹೋದಳು.

ಯಾಕೆ ಬಂದಳು, ಯಾಕೆ ಅಲ್ಲಿ ಹೋದಳು ಎಂದು ಯೋಚಿಸುತ್ತಿರು ವಂತೆಯೇ ಒಳಗಡೆ ಪೆಟ್ಟಿಗೆಗಳನ್ನು ಎಳೆದ, ಬಾಗಿಲುಗಳನ್ನು ತೆಗೆದು, ಸಾಮಾನುಗಳನ್ನು ತೆಗೆಯುವ ಶಬ್ದಗಳು ಕೇಳಿಬಂದಿತು.

ತನ್ನ ಸಾಮಾನುಗಳೆಲ್ಲವನ್ನೂ ತೆಗೆದುಕೊಂಡು ಹೋಗಲು ಬಂದಿದ್ದಾಳೆ.

ಈಗೇನು ಮಾಡುವುದು ? ಒಳಗೆ ಹೋಗಿ ಕನಕಳನ್ನು ಸಮಾಧಾನ ಪಡಿಸುವುದೆ ? ಒಳಗೆ ಅವಳೊಬ್ಬಳೇ ಇದ್ದಾಳೆ. ಆಳು ಹೊರಗಡೆಯೇ ನಿಂತಿದ್ದಾನೆ.

ಶಂಕರ ಕನಕಳ ಬಳಿಗೆ ಹೋಗಲು ಮೇಲೇಳುವುದರೊಳಗಾಗಿ ಅವನ ಮನಸ್ಸಿಗೆ ಒಂದು ಭಾವನೆ ಬಂದಿತು.

ಕನಕ ಅವಳಿಗೆ ಚೈತನ್ಯವಿಲ್ಲವೆಂದಿದ್ದಾಳೆ ತನಗೆ ಚೈತನ್ಯವಿಲ್ಲವೆ? ಕನಕಳಲ್ಲದ ಯಾವಳೂ ಅವನಿಗೆ ಹೆಣ್ಣಾಗಲಾರಳೇ. ?

ಇಲ್ಲ. ತನ್ನ ಜೀವನವು ಘೋರ ಕಾರ್ಗತ್ತಲೆಯಲ್ಲ.

ಅವನಿಗೊಂದು ಮಹಾ ಸತ್ಯವು ಗೋಚವಾಯಿತು. ವಾಸುದೇವ ಆ ಮನೆಗೆ ಕರೆದುಕೊಂಡು ಹೋಗಿದ್ದ. ಆ ದಿನ ಒಬ್ಬಳಾದ ನಂತರ ಒಬ್ಬಳಂತೆ ಇಬ್ಬರು ಹುಡುಗಿಯರು ಬಂದಿದ್ದರು. ಅವರೊಂದಿಗೆ ಮಲಗಲಾಗಲಿಲ್ಲ.

ಆದರೇನು ಮಾರನೆಯ ದಿನ ರಾತ್ರಿ ಕನಕ ಬಂದಾಗ ಅವಳೊಡನೆ ಮಲಗವುದು ಸಾಧ್ಯವಾಯಿತು.

ಈಗ ಬಿಜಾಪುರಕ್ಕೆ ಬಂದನಂತರ, ಕನಕಳೊಡನೆ ಅಸಮಾಧಾನವಾದಾಗ ಶ್ಯಾಮಲೆಯ ಒಳಗೆ ಹೋಗಿದ್ದ. ಉಪಲಿಬುರಜ್‌ನಲ್ಲಿ ಇನ್ನೂ ಒಂದೆರಡು ಮನೆಗಳಿಗೆ ಹೋಗಿದ್ದ ಅವರೊಡನೆ ಯಾರೊಂದಿಗೂ ಇರಲಾಗಲಿಲ್ಲ.

ಆದರೆ ಅದೇ ಕನಕಳೊಂದಿಗೆ ಮಲಗಿದ್ದಾಗ ಸರಿ ಹೋಯಿತು.

ಈ ಕಾರಣಗಳಿಂದ ಕನಕಳೊಬ್ಬಳೇ ತನ್ನ ಭಾಗಕ್ಕೆ ಈ ಪ್ರಪಂಚದಲ್ಲಿ ಏಕ ಮಾತ್ರ ಹೆಣ್ಣು ಎಂದುಕೊಂಡಿದ್ದ.

ಈಗ ಮಹಾಸತ್ಯ ಗೋಚರವಾಯಿತು. ಬೆಳಗಾವಿನಲ್ಲಿ ವಾಸುದೇವ ಕರೆದುಕೊಂಡು ಹೋಗಿದ್ದ ಮನೆಯಲ್ಲಿ ತನ್ನ ಬಳಿಗೆ ಬಂದ ಇಬ್ಬರು ಹುಡು

ಗಿಯರೂ ಅಪರಿಚಿತಸ್ಥರು. ಮೂರನೆಯ ದಿನ ಕನಕಳನ್ನು ನೋಡಿದಾಗ ಅವಳು ಹೊಸಬಳು. ಅಪರಿಚಿತಸ್ಥಳು. ಅವಳೊಡನೆ ಇರಲು ಸಾಧ್ಯ ವಾಯಿತು.

ಚೈತನ್ಯವಿಲ್ಲದೇ ಇದ್ದುದರಿಂದ ತಾನು ವಿಫಲವಾಗಿರಲಿಲ್ಲ. ಆ ಹುಡುಗಿಯವರೊಡನೆ ಪರಿಚಯವಿರವಿಲ್ಲ. ಆಗ ಸಾಕಷ್ಟು ಸಾವಕಾಶವಿರ ಲಿಲ್ಲ. ಆದರಿಂದ ತಾನು ಚೈತನ್ಯರಹಿತನಂತಿದ್ದ. ಕನಕಳೊಡನೆ ಚೆನ್ನಾಗಿ ಪರಿಚಯವಾದನಂತರ ಅವಳನ್ನು ಪ್ರೀತಿಸಿದ್ದ. ಇಡೀ ರಾತ್ರಿಯೇ ಸಾವ ಕಾಶವಾಗಿ ಮುಂದಿತ್ತು. ಅದರಿಂದ ಅವಳೊಡನೆ ಇರುವುದು ಸಾಧ್ಯವಾ ಯಿತು

ಶ್ಯಾಮಲೆಯೊಂದಿಗೆ ಇದ್ದಾಗ ಬೇಕಾದಷ್ಟು ಅವಕಾಶವಿತಲ್ಲ, ಇತ್ತು. ನಿಜ, ಅವಳನ್ನು ಪ್ರೀತಿಸುವಾಗ ಅಪರಿಚಿತಸ್ಥಳನ್ನು ಬೀದಿಯ ಹೆಣ್ಣನ್ನು ಪ್ರೀತಿಸುವಂತೆ ಪ್ರೀತಿಸಲು ಪ್ರಯತ್ನ ಪಟ್ಟಿದ್ದ. ಪ್ರೇಯಸಿಯನ್ನು ಪ್ರೀತಿಸು ವಂತೆ ಪ್ರೀತಿಸಿರಲಿಲ್ಲ.

ಹಾಗೆ ಪ್ರೀತಿಸಿದ್ದರೆ ಆ ದಿನವೂ ಸಾಧ್ಯವಾಗುತ್ತಿದ್ದಿತೋ ಏನೋ. ?

ಉಸಲೀಬಜಾರ್‌ನಲ್ಲಿ ಮತ್ತಿಬ್ಬರು ಹೆಣ್ಣುಗಳ ಮನೆಗೆ ಹೋಗಿ ದ್ದಾಗ ಅವರ ಸಮೀಪದಲ್ಲಿ ಕುಳಿತಿದ್ದ.

ಅವರೊಂದಿಗಿರಲು ಹೋಗಿದ್ದ. ಸ್ವಲ್ಪ ಹೊತ್ತು ಪಕ್ಕದಲ್ಲಿ ಕುಳಿತಿದ್ದ. ಎಷ್ಟು ಹೊತ್ತು ಸುಮ್ಮನೆ ಕುಳಿತಿರುವುದು? ಏನಾದರೂ ಮಾಡಬೇಕಲ್ಲ. ಅವ ರನ್ನು ಆಲಂಗಿಸೋಣ, ಚುಂಬಿಸೋಣ ಅವರ ಸ್ತನಗಳನ್ನು ಸ್ಪರ್ಶಿಸೋಣ ಎಂದು ತೋರಿತ್ತು.

ಅಪರಿಚಿತಸ್ಥಳನ್ನು ಹಾಗೆ ಮಾಡಲು ಮನಸ್ಸಿಗೆ ಸಂಕೋಚವಾ ಯಿತು.

ವಿಧಿಯಿಲ್ಲ, ಆಲಂಗಿಸಿದ್ದ, ಚುಂಬಿಸಿದ್ದ ಸ್ಪರ್ಶಿಸಿದ್ದ. ಆದರೆ ಅದು ಅವನ ಮೇಲೆ ಏನು ಪರಿಣಾಮವನ್ನೂ ಮಾಡಿರಲಿಲ್ಲ.

ಮೊದಲೇ ಅವರ ಪರಿಚಯವಾಗಿದ್ದರೆ ಹಾಗಾಗುತ್ತಿರಲಿಲ್ಲ.

ಶ್ಯಾಮಲೆಯ ಮನೆಯಲ್ಲಿಯೂ ಆ ದಿವಸ ಸರಿಹೋಗಲಿಲ್ಲವೆನ್ನುವುದು ನಿಜ. ಆದರೆ ಸ್ವಲ್ಪ ಸ್ವಲ್ಪವಾಗಿ ಚೈತನ್ಯವು ಬಂದಂತಾಗುತ್ತಿತ್ತು. ಮಾಯ

ವಾಗಿ ಹೋಗುತ್ತಿದ್ದಿತು. ಮನೆಗೆ ಬಂದು ಬಿಡಬೇಕೆಂಬ ಆತುರವಿಲ್ಲದೇ ಹಾಯಾಗಿ ಆ ರಾತ್ರಿ ಎಲ್ಲಾ ಅಲ್ಲಿಯೇ ಇದ್ದಿದ್ದರೆ ಖಂಡಿತ ತನಗೆ ಚೈತನ್ಯವು ಬರುತ್ತಿದ್ದಿತು.

ಇದುವರೆವಿಗೆ ಜೀವನದಲ್ಲಿ ಒಂದು ತಪ್ಪಾಗಿದೆ. ಅಪರಿಚಿತರನ್ನು ಕೂಡುವುದಕ್ಕೆ ಹೋಗಿ ವಿಫಲನಾಗಿದ್ದಾನೆ. ಪರಿಚಯ ಮಾಡಿಕೊಂಡ ನಂತರ ಕೂಡಿದ್ದರೆ ಹಾಗಾಗುತ್ತಿರಲಿಲ್ಲ. ಪರಿಚಯ ಮಾಡಿಕೊಂಡು ಕೂಡಿದರೆ ಜಗತ್ತಿನ ಯಾವ ಹೆಂಗಸಾದರೂ ಅವನ ಭಾಗಕ್ಕೆ ಹೆಣ್ಣಾಗಬಲ್ಲಳು.

ಇದುವರೆವಿಗೆ ಈ ಸತ್ಯವು ಗೋಚರವಾಗಿರಲಿಲ್ಲ.

ಹಾಗಾದರೆ ಎಷ್ಟೋ ಮಂದಿ ಪರಿಚಯವಿಲ್ಲದ ಹೆಣ್ಣುಗಳನ್ನು ಕೂಡುತ್ತಾರೆಯಲ್ಲಾ. ವಾಸುದೇವನೂ ಸಹ ಕೂಡುತ್ತಾನೆಯಲ್ಲಾ.

ಇರಬಹುದು. ಅವರ ಮನಸ್ಸು ಸತ್ತುಹೋಗಿದೆ. ಅವರು ಮನುಷ್ಯರೇ ಅಲ್ಲ. ಎದುರಿಗೆ ನಿಂತ ಯಾವ ದನದ ಮೇಲೆ ಬೇಕಾದರೂ ಹತ್ತುವ ಗೂಳಿಗಳಂತಹವರು. ಎದುರಿಗೆ ನಿಂತ ದನವನ್ನು ಸರಿಯಾಗಿ ನೋಡದಿದ್ದರೂ ಯಾರೋ ಪ್ರವೇಶ ಮಾಡಿಸಿದರೂ ತನ್ನ ಕಾಮವನ್ನು ತೀರಿಸಿಕೊಳ್ಳುವಂತಹ ಗೂಳಿಯಂತಹ ಪಶುಗಳವರು.

ಕನಕ ಹೊರಟುಹೋಗುತ್ತಾಳೆ!

ಈ ಸತ್ಯ ಗೋಚರವಾದ ಮೇಲೆ ಕನಕ ಹೋಗುವುದು ಶಂಕರನ ಮನಸ್ಸಿಗೆ ಕಷ್ಟಕರವಾಗಿ ಕಂಡುಬರಲಿಲ್ಲ.

ಅವಳು ಸಾಮಾನು ಕಟ್ಟಿದ್ದು ಮುಗಿದ್ದಿತೆಂದು ಕಂಡುಬರುತ್ತದೆ. ಹೊರಗಿದ್ದ ಆಳನ್ನು ಕೂಗಿದಳು. ಅವನು ಒಳಗೆ ಹೋಗಿ ಒಂದು ಟ್ರಂಕು ಹಾಸಿಗೆ ತೆಗೆದುಕೊಂಡು ಬಂದ. ಅವನ ಹಿಂದೆ ಕನಕ ಬಂದಳು.

ಕನಕ ಬಂದವಳು ಒಂದು ಬಾರಿ ಶಂಕರನ ಕಡೆಗೆ ನೋಡಿದಳು. ಅವನು ಅವಳನ್ನು ನೋಡುತ್ತಿದ್ದರೂ ನೋಡದಂತೆ ಇದ್ದ.

ಅವಳು ಹೊರಗೆ ಹೊರಟುಹೋದಳು.

ಕೆಲವು ನಿಮಿಷಗಳ ಹಿಂದೆ ಕಾಲಿಗಾದರೂ ಬಿದ್ದು ಅವಳನ್ನು ಕರೆದುಕೊಂಡು ಬರಬೇಕೆಂದಿದ್ದ ಶಂಕರ ಅವಳು ಹೋದರೆ ಹೋಗಲಿ ಎಂದುಕೊಂಡು ನಿರಾಳವಾಗಿ ಒಂದು ಸಿಗರೇಟು ತೆಗೆದು ಹಚ್ಚಿದ.

ಆ ದಿನ ರಾತ್ರಿ ಶ್ಯಾಮಲೆಯ ಮನೆಗೇಕೆ ಹೋಗಬಾರದೆಂದು ಅವನ ಮನಸ್ಸು ಆಲೋಚಿಸುತ್ತಿತ್ತು.

## ೧೮

ಮುರಿಗೆಪ್ಪನನ್ನು ನೋಡಬಾರದೆಂದು ಶಂಕರ ಅಂದುಕೊಂಡಿದ್ದ ಆದರೂ ಮಾರನೆಯ ದಿನ ಬೆಳಗಾಗ ಅರಳೆ ಮಳಿಗೆಗೆ ಹೋಗಿ ಅವನನ್ನು ನೋಡಿದ.

"ನಾನು ಅಂಗಡಿ ಮುಚ್ಚಿಬಿಟ್ಟು ನಮ್ಮೂರಿಗೆ ಹೊರಟುಹೋಗು ತ್ತೀನೆ."

ಅದಕ್ಕೆ ಮುರಿಗೆಪ್ಪ ಏನೂ ಹೇಳಲಿಲ್ಲ. ಹೇಗೋ ಅವನಿಗೆ ವಿಷಯ ವೆಲ್ಲಾ ಗೊತ್ತಾಗಿರಬೇಕು. ಕನಕ ಹೊರಟುಹೋದ ಮೇಲೆ ಶಂಕರನ ವಿಷ ಯದಲ್ಲಿ ಅವನಿಗೇನೂ ಆಸಕ್ತಿ ಇರಲಿಲ್ಲ. ಅವನು ಹೇಳಿದ್ದಕ್ಕೆ ಏನಾದರೂ ಹೇಳಬೇಕಲ್ಲ. ಬಾಯಿ ಬಿಡದೇ ಅಂದ.

"ಹೂ."

ಮುರಿಗೆಪ್ಪನಿಂದ ತನಗೆ ಏನಾದರೂ ಸಹಾಯವಾಗಬಹುದೆಂದು ಶಂಕರ ನಿರೀಕ್ಷಿಸಿರಲಿಲ್ಲ. ಅವನು ಯಾರಿಂದಲೂ ಯಾವ ಬಗೆಯಾದ ಸಹಾ ವನ್ನೂ ಬಯಸುತ್ತಿರಲಿಲ್ಲ. ಅವನ ತಾಯಿತಂದೆಗಳಿಂದಲೂ ಅವನಿಗೇನೂ ಆಗಬೇಕಾಗಿರಲಿಲ್ಲ. ಕ್ರಾಸ್ ವರ್ಡ್‌ನಲ್ಲಿ ಬಂದ ಹಣದಲ್ಲಿ ಇನ್ನೂ ನಾಲ್ಕೈದು